# MACHINE
## TOOLS
## *Quality* LATHES *for*

*IMMEDIATE DELIVERY*




## CENTRE LATHES

**SHIMOGA No. 1** S. S. & S. C. $9\frac{1}{4}$ Centre × 6′ gap bed capacities 36″ admits between centre $18\frac{1}{2}''$ swing over bed $30\frac{1}{2}''$ swing over gap. Spindle nose thread size $2\frac{15}{16}''$ dia threads per inch on the spindle 6. Spindle speeds R. P. M. 22 to 430. H. P. required 1·5.

**SHIMOGA No. 2** S. S. & S. C. $9\frac{1}{4}''$ Centre × 8′–10″ gap bed capacities: 60″ admits between centre $18\frac{1}{2}''$ swing over bed $30\frac{1}{2}''$ swing over gap. Spindle nose thread size $2\frac{15}{16}''$ dia threads per inch on the spindle 6. Spindle speeds R. P. M. 22 to 430. H.P. required 1·5.

*Can Supply Both Belt & Electric Drive.*

# THE MYSORE KIRLOSKAR LTD.
HARIHAR (MYSORE STATE)

*Distributors :* **M/s. BATLIBOI & Co.**
FORBUS STREET, FORT **BOMBAY**



# INDEX TO ADVERTISERS


| S. No. | Name of Advertiser. | Page No. |
|---|---|---|
| 1 | Anglo Indian Drug & Chemical Co., Bombay. | 49 |
| 2 | Associated Mechanical Industries, Belgaum. | 64 |
| 3 | Allied Industries, Dharwar. | 68 |
| 4 | Associated Traders, Belgaum. | 89 |
| 5 | Agricultural & Industrial Bank Ltd., | 24 |
| 6 | B. N. Bakale, Gadag. | 34 |
| 7 | Bank of Citizens, Belgaum. | 38 |
| 8 | Bombay Provident & General Assurance Co.Ltd. | 53 |
| 9 | Brooke-Bond India Ltd. | 72 |
| 10 | The Bank of Karnatak Ltd., Hubli. | 78 |
| 11 | Bank of Maharashtra Ltd., Poona. | 85 |
| 12 | Bhoski Lotion Pharmacy. | 86 |
| 13 | The Chavan Auto & Engineering, Belgaum. | 34 |
| 14 | Calcutta Chemical Co., Calcutta. | 63 |
| 15 | City Book stall, Hubli. | 93 |
| 16 | M/s C. M. Naik, Watch Dealers, Hubli. | 23 |
| 17 | Deccan Engineering Ltd., Madhavnagar. | 71 |
| 18 | Dattatraya Ayurved Samshodhan Ltd., | 80 |
| 19 | Durga Lodge, Gadag. | 92 |
| 20 | Dharwar Guest House, Dharwar. | 95 |
| 21 | Gajanan Harmonium Works, | 35 |
| 22 | General Assurance Society Ltd., | 46 |
| 23 | Good-Luck Automobiles, Belgaum. | 67 |
| 24 | International Tyre Serviee, Belgaum. | 65 |
| 25 | Keen Trading Corpration, Bombay. | 58 |
| 26 | M/s K. Manubhai & Co., Belgaum. | 74 |
| 27 | Karnik Bros., Bombay. | 83 |
| 28 | Kanta & Co., Banaresa. | 19 |
| 29 | Kirloskar Bros., Ltd., Kirlorkarwadi. | 21 |
| 30 | Katha Kunj Granth Mala, Belgaum. | 24 |
| 31 | The Modern Industries Ltd., Udyamnagar. | 61 |
| 32 | Madan Sons & Co., Bombay. | 65 |
| 33 | Moti Products, Sholapur. | 67 |
| 34 | Motor Owners' Mutul Insurance Co. Ltd., | 81 |
| 35 | Modern Pictures & Publishers, Bombay. | 84 |
| 36 | Narsingsa Bidi Factory, Gadag. | 75 |
| 37 | Narayanrao Sortur, Gadag. | 88 |
| 38 | Pathris Products, Udipi. | 86 |
| 39 | Phoenix Watch Co., Bombay. | 22 |
| 40 | Roy & Company, Bombay. | 45 |
| 41 | Rubiy General Insurance Co. Ltd. | 89 |
| 42 | Standard Engineering (India) Agencies, Hubli. | 12 |
| 43 | Sri Ganesh Vilas., Hubli. | 6 |
| 44 | S. L. Dhakappa & Sons, Sirsi. | 24 |
| 45 | Shri Laxmi Automobiles Ltd., | 17 |
| 46 | Sanjeevani Prakashan, Hubli. | 76 |
| 47 | Star Company, Belgaum. | 68 |
| 48 | Samadhan Boarding & Loadging, Belgaum. | 50 |
| 49 | The Saibaba Stores. | 35 |
| 50 | Vasant Film Distributors, Belgaum. | 71 |
| 51 | Vijaya Engineering & Machinery Co. Hubli. | 90 |
| 52 | Western India Life Insurance Co. Ltd. | 51 |
| 53 | Gouri Shankar Yatra Co., Hubli. | 111 |
| 54 | Sri Krishna Bhavan, Hubli. | I |
| 55 | Navale Stores, Hubli. | I |
| 56 | Pioneer Gadag Pharmacy, Gadag. | I |
| 57 | Mitra Samaj, Hubli. | 100 |
| 58 | Ideal Photo Zinco Works, Hubli. | IV |
| 59 | Shrinivas & Co., Dharwar. | 98 |
| 60 | Ramashraya Book-Depot, Dharwar. | 98 |
| 61 | Samaj Book-Depot, Dharwar. | II |
| 62 | Bharat Book-Depot, Dharwar. | IV |
| 63 | Minchinaballi Karyalaya, Dharwar. | 100 |
| 64 | Mahaveer Film Exchange, Mysoer. | JI |


## COVER PAGES


2nd Cover: Mysore Kirloskar Ltd., Harihar.

3rd ,, 1) Desai & Co., Hubli.
2) Hubli City Bank Ltd., Hubli.
3) Hubli Construction Co., Hubli.

4th ,, 1) Doddannavar Bros, Belgaum.
2) S. R. Perfumers, Belgaum.
3) Indian Refractories Ltd., Khanapur.

# ಪರಿವಿಡಿ


| ವಿಷಯ | ಪುಟ |
|---|---|
| ಬಾದಾಮಿಯ ಗುಹೆಯ ಮೇಲ್ಛಾವಣಿಯಲ್ಲಿನ ಮೂರ್ತಿ ( ಚಿತ್ರ: ಧೀ. ನಾ. ಕೋನೇರಿ )– ರಕ್ಷಾಪತ್ರ | |
| ನಮ್ಮ ನುಡಿ ಸಂಪಾದಕೀಯ | ೧ |
| ಬಿಡುಗಡೆಗೆ ( ಕವನ ) ( ಎಂ. ಗೋವಿಂದ ಪೈ ) | ೧ |
| ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ / ಬಾದಾಮಿಯ ಬನಶಂಕರಿ ದೇವಾಲಯ } (ಕೋನೇರಿ) ಸಂಪಾದಕೀಯದ ಎದುರು | |
| ಕಾಲು ಶತಮಾನದ ಕರ್ನಾಟಕ ರಾಜಕೀಯ ಜೀವನ ( ಹ. ರಾ. ಮೊಹರೆ ) | ೨ |
| ಶಾಂತಿದೂತ ಗಾಂಧೀಜಿ ( ರಂ. ರಾ. ದಿವಾಕರ ) | ೫ |
| ತೇಜಸ್ತ್ರೀಜಿ ( ಕವನ ) ಗಂಗಪ್ಪ ವಾಲಿ | ೬ |
| ಇಂಡಿಯದ ಹೊಸರಾಜ್ಯನಿಬಂಧನೆ ( ಡಿ. ವಿ. ಗುಂಡಪ್ಪ ) | ೮ |
| ಪಾಂಚಜನ್ಯದ ಪಾಂಚಜನ್ಯ(ಏಕಾಂಕ)(ಆರ್. ಬಿ. ಕುಲಕರ್ಣಿ) | ೧೩ |
| ನೆನಪು ( ಕವನ ) (ಕ. ಶಂಕರಭಟ್ಟ ) | ೧೫ |
| ಪೂರ್ವ, ಪಶ್ಚಿಮ ಹೇಗೆ ಕೂಡೀತು ( ಕೆ. ಸಂಪದ್ಗಿರಿರಾವ್ ) | ೧೮ |
| ಬ್ರಹ್ಮಚಾರಿ ( ಕವನ ) (ಚಿದಂಬರ ದೀಕ್ಷಿತ ) | ೨೪ |
| ಕಾರವಾರ ಮತ್ತು ಗೋವೆಯ ಚಿತ್ರಗಳು ( ಧೀ. ನಾ. ಕೊನೇರಿ ) | ೨೪-೨೫ ನಡುವೆ |
| ಯಕ್ಷಗಾನದ ಪುನರುಜ್ಜೀವನ ( ಸಚಿತ್ರ ) (ಕೋ. ಶಿ ಕಾರಂತ) | ೨೫ |
| ಎಚ್ಚರಿಕೆ ( ಕವನ ) ( ಎಸ್. ಆರ್. ಎಕ್ಕುಂಡಿ ) | ೨೯ |
| ಇಟಲಿಯ ಸೈನಿಕ ( ಕತೆ ) (ಎಂ. ಗೋಪಾಲ ಕೃಷ್ಣ ಅಡಿಗ) | ೩೦ |
| ಲೌಕಿಕ ರಾಜ್ಯದ ಆದರ್ಶ ( ಶ್ರೀರಂಗ ) | ೩೬ |
| ಎಮ್ಮೆ ಮೀಸೆ ಮೇದದ್ದು ( ಕತೆ ) ( ಎಸ್. ಜಿ. ಬೈಲೂರ ) | ೩೯ |
| ಕಾರವಾರ, ಐಹೊಳೆ, ಧಾರವಾಡದ ದೃಶ್ಯಗಳು (ಧೀ. ನಾ. ಕೋನೇರಿ) | ೪೦-೪೧ ನಡುವೆ |
| ಪಾಶ್ಚಾತ್ಯ-ಪೌರಸ್ತ್ಯ ರಾಜಕೀಯ ತತ್ವಗಳು ( ಡಾ। ಎಸ್. ಶ್ರೀಕಂಠಶಾಸ್ತ್ರಿ ) | ೪೩ |
| ನನ್ನ ಅವತಾರ ( ಕವನ ) ( ಎಂ. ಗೋಪಾಲಕೃಷ್ಣ ಅಡಿಗ ) | ೪೬ |
| ಪ್ರಾಚೀನ ಇತಿಹಾಸದ ಮೇಲೆ ಹೊಸ ಬೆಳಕು ( ಡಾ। ಕೆ. ಕೃಷ್ಣಮೂರ್ತಿ ) | ೪೮ |
| ಕಿನಾ ( ಕತೆ ) ( ದ. ಲ. ಕೆರೂರ ) | ೫೨ |
| ಕನ್ನಡ ಭಾರತದ ಅರ್ಜುನ ( ಎಂ. ಗೋವಿಂದ ಪೈ ) | ೫೫ |
| ಒಂದು ಪ್ರಾರ್ಥನೆ ( ಕವನ ) ( ಜಿ. ಆರ್. ಪಾಂಡೇಶ್ವರ್ ) | ೫೮ |
| ವರ್ಷ ಭವಿಷ್ಯ ( ಕೃಷ್ಣಶಾಸ್ತ್ರಿ ಭಿಡೆ ) | ೫೯ |
| ಭಾರತೀಯನ ಕರಭಾರ ( ಎಚ್. ಎಸ್. ಪಾಟೀಲ ) | ೬೩ |
| ಭೀಮಸ್ಮೃತಿ ಅಭಿನಂದನೋತ್ಸವ ( ಹರಟೆ ) (ನಾ. ಕಸ್ತೂರಿ) | ೬೬ |
| ಮಲೆನಾಡಿನ ಅಭಿವೃದ್ಧಿಯೆಂತು ( ಸಂ. ವಾ. ಕೃಷ್ಣಮೂರ್ತಿರಾವ್ ) | ೬೯ |
| ಇಪ್ಪತ್ತನೆಯ ಶತಕದ ಭಾರತೀಯ ವಿಜ್ಞಾನ ( ಪದ್ಮನಾಭ ಪುರಾಣಿಕ ) | ೭೨ |
| ಕಾಂಗ್ರೆಸ್ಸಿಗೆ ಬದಲು ಇನ್ನೇನು ( ಖಾದರಸಾಹೇಬ ಶೇಖ ) | ೭೬ |
| ಹಿಂದೀ ಚಲಚಿತ್ರಗಳು ( ಸಚಿತ್ರ ) ( ಅಚ್ಯುತ ) | ೭೯ |
| ಸ್ವತಂತ್ರಭಾರತದಿ ( ಕವನ ) ( ರಾ. ಇಬ್ರಾಹಿಮಪುರ ) | ೮೧ |
| ನಮ್ಮ ಅನ್ನದ ಸಮಸ್ಯೆ ( ವಿಜಯ ) | ೮೬ |



ಬನಶಂಕರಿಯ ದೇವಾಲಯ ( ವಿಜಾಪುರ )



ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ

# ಕರ್ಮವೀರ

ದೀಪಾವಳಿ ಸಂಚಿಕೆ ೧೯೪೯

ಹುಬ್ಬಳ್ಳಿ, ೨೪ ಅಕ್ಟೋಬರ ೧೯೪೯

ಸಂಸ್ಥಾಪಕರು: ಶ್ರೀ. ರಂ. ರಾ. ದಿವಾಕರ

ಸಂಪಾದಕರು: ಶ್ರೀ. ಹ. ರಾ. ಪುರೋಹಿತ


## ನಮ್ಮ ನುಡಿ

ಸ್ವತಂತ್ರ ಭಾರತದ ಮೂರನೆಯ ದೀಪಾವಳಿಯ ಆನಂದ ಸಮಾರಂಭದಲ್ಲಿ ಎರಡನೆಯ ಬಾರಿ ಓದುಗರ ಉತ್ಸಾಹಕ್ಕೆ ಮಿರುಗೇರಿಸಲು 'ದೀಪಾವಳಿ ಸಂಚಿಕೆ'ಯನ್ನು ಕೊಡಲು ಸಾಧ್ಯವಾದುದು ನಮ್ಮ ಸೌಭಾಗ್ಯವೆಂದು ತಿಳಿಯುತ್ತೇವೆ. 'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ' ಎಂದು ಆರ್ಯೋಕ್ತಿಯುಂಟು. ಅಂಥ ಪವಿತ್ರವಾದ ಜ್ಞಾನಮಯ ಪ್ರದೀಪವನ್ನು ವಾರವಾರವೂ ಹೊತ್ತಿಸುತ್ತ ಬರುವ 'ಕರ್ಮವೀರ' ನು ಇದೀಗ ಪ್ರಜ್ವಲಿಸಿರುವ ಈ ಉಜ್ವಲತರವಾದ ದೀಪದಿಂದ ಕನ್ನಡಿಗರ ಮನಸ್ಸುಜ್ಞಾನದ ಪ್ರಭೆಯಿಂದಲೂ ಅದರ ಪ್ರತಿಬಿಂಬವಾದ ಆನಂದದ ಪ್ರಕಾಶದಿಂದಲೂ ಬೆಳಗಲೆಂದು ಹಾರೈಸುತ್ತೇವೆ. ಏಕೆಂದರೆ ಜ್ಞಾನದಿಂದ ಉದ್ದೀಪನಗೊಂಡ ಆನಂದವೊಂದೇ ನಿಜವಾದ ಆನಂದ, ಸ್ಪೃಹಣೀಯವಾದ ಆನಂದ. ಮನಸ್ಸು ಆತ್ಮದ ಮುಖ, ಅದರ ಪ್ರಕಾಶವೇ ಆತ್ಮತೇಜದ ಲಕ್ಷಣ. ದೀಪಾವಳಿಯ ಇತರ ಇಂದ್ರಿಯಗಳ ಸಂತೋಷಕಾಲದಲ್ಲಿ ಮನಇಂದ್ರಿಯವೊಂದು ಉಪವಾಸವಿರದಿರಲಿ. ಮನಸಿನ ಆ ಸಂತುಷ್ಟಿಗಾಗಿ ಈ ನೈವೇದ್ಯವನ್ನು 'ಕರ್ಮವೀರ' ಅರ್ಪಿಸುತ್ತಿದ್ದಾನೆ.

ಈ ನೈವೇದ್ಯವನ್ನು ಸಾಧ್ಯವಾದಷ್ಟು ಮಧುರವಾಗಿ, ಹಿತವಾಗಿ ಮಾಡಲು ಪ್ರಯತ್ನ ಮಾಡಲಾಗಿದೆ. ಅದು ಎಷ್ಟು ಸಫಲವಾಗಿದೆಯೆಂದು ಅಳೆಯುವ ಅಧಿಕಾರ ಓದುಗರದು. ಓದುಗರ ಬೆಂಬಲವೊಂದಿದ್ದರೆ ಮುಂದಿನ ಪ್ರಯತ್ನಗಳನ್ನು ಇನ್ನಷ್ಟು ಯಶಸ್ವಿಯಾಗಿ ಮಾಡುವ ಹುರುಪು ನಮಗೆ ಬಂದೀತೆಂದಿಷ್ಟೇ ಹೇಳಬಯಸುವೆವು. ಈ ಬಾರಿಯಾದರೂ ಇದರಲ್ಲಿ ಬಂದ ಲೇಖಗಳು ಅವ್ಯವಸ್ಥಿತವಾಗಿ ಸಂಗ್ರಹಿಸಲ್ಪಟ್ಟಿರದೆ ವಿಶಿಷ್ಟ ವಿದ್ವಾನ್ ಲೇಖಕರು ಹೆಚ್ಚಾಗಿ ಅಭ್ಯಸಿಸಿರತಕ್ಕ ವಿಷಯಗಳ ಮೇಲೆಯೆ ಅವರಿಂದ ಬರೆಸಿಕೊಂಡು ವ್ಯವಸ್ಥಿತವಾಗಿ ಅಯ್ದುವುಗಳಾಗಿವೆಯೆಂದು ತಿಳಿಸಲಪೇಕ್ಷಿಸುತ್ತೇವೆ. ಚಿತ್ರಗಳಾದರೂ ಕನ್ನಡನಾಡಿಗೆ ಸಂಬಂಧಿಸಿದವುಗಳಾಗಿವೆಯೆಂದು ಬೇರೆ ಹೇಳಬೇಕಾಗಿಲ್ಲ.

ಈ ಸಂಚಿಕೆಯನ್ನು ಸುಂದರವಾಗಿ ಮಾಡುವಲ್ಲಿ ನೆರವು ನೀಡಿದ ಲೇಖಕ ಮಹಾಶಯರಿಗೂ ಚಿತ್ರಗಳನ್ನೊದಗಿಸಿದ ಧಾರವಾಡದ ಶ್ರೀ ಧೀ. ನಾ. ಕೋನೇರಿ ಮತ್ತು ಶ್ರೀ ಶಿವರಾಮ ಕಾರಂತರಿಗೂ ಪಡಿಯಚ್ಚುಗಳನ್ನು ಮಾಡಿಕೊಟ್ಟ ಹುಬ್ಬಳ್ಳಿಯ ಐಡಿಯಲ್ ಫೋಟೋ-ಝಿಂಕೋ ವರ್ಕ್ಸ್ ಮತ್ತು ಧಾರವಾಡದ ಶ್ರೀನಿವಾಸ ಕಂಪನಿಯವರಿಗೂ ಹಗಲಿರುಳೆನ್ನದೆ ದುಡಿದ ನಮ್ಮ ಸಹಕಾರಿಗಳಿಗೂ ಮುದ್ರಣ ಶಾಖೆಯವರಿಗೂ ನಾವು ಋಣಿಗಳಾಗಿದ್ದೇವೆ. ಜಾಹಿರಾತುಗಳನ್ನು ಕೊಟ್ಟು ಸಹಾಯ ಮಾಡಿದವರೂ ನಮ್ಮ ಅಭಿನಂದನೆಗಳಿಗೆ ಪಾತ್ರರಾಗಿದ್ದಾರೆ. ಓದುಗರಿಗಂತೂ ನಮ್ಮ ಋಣ ಅಮಿತವಾಗಿದೆ ಈ ಸಮಾರಾಧನೆ ಅವರಿಗಾಗಿಯೆ ಇದೆ. ಅವರ ಸಂತುಷ್ಟಿಯೇ ನಮ್ಮ ಸಾರ್ಥಕ್ಯ.

ಈ ಸಂತೋಷಸಮಯದಲ್ಲಿಯೂ ದೇಶದ, ಮತ್ತು ವಿಶೇಷವಾಗಿ ಕನ್ನಡಿಗರ, ಮನಸ್ಸು ಕೆಲ ಕೊರತೆಗಳಿಂದ ಮಿಡುಕುತ್ತಿದೆಯೆಂದು ನಾವರಿತಿದ್ದೇವೆ. ದೇಶದ ಆರ್ಥಿಕ ಮತ್ತು ಆಹಾರ ಪರಿಸ್ಥಿತಿ ತುಂಬ ಶೋಚನೀಯವಾಗಿದೆ. ನೈತಿಕತೆಯಂತೂ ದಿವಾಳಿಯ ಗಡಿಯನ್ನು ಮುಟ್ಟಿದೆ. ಈ ಶುಭ ಮುಹೂರ್ತದಲ್ಲಿ ಪ್ರತಿಯೊಬ್ಬ ಪ್ರಜೆಯೂ ಧರ್ಮಕ್ಕೆ ತಲೆವಾಗಿ ನಡೆದರೆ ಮಾತ್ರ ಪರಿಸ್ಥಿತಿ ಸುಧಾರಿಸಬಲ್ಲದು. ಆ ಪ್ರತಿಜ್ಞೆಯನ್ನು ನಾವೆಲ್ಲರೂ ತೊಡೋಣ. ಅಂತಾರಾಷ್ಟ್ರೀಯ ಸ್ಥಿತಿಯೂ ಅಷ್ಟು ಆಶಾದಾಯಕವಿಲ್ಲ. ರಾಷ್ಟ್ರಗಳಿಗೆ ಪರಮಾತ್ಮನು ಸದ್ಬುದ್ಧಿಯನ್ನೀಯಲಿ. ರಾಷ್ಟ್ರರಾಷ್ಟ್ರಗಳ ವೈಷಮ್ಯವನ್ನು ಹೋಗಲಾಡಿಸುವಲ್ಲಿ ಭಾರತದ ಪ್ರಯತ್ನಗಳಿಗೆ ಯಶಸ್ಸು ದೊರಕಲೆಂದು ಹಾರೈಸುವಾ. ಮುಖ್ಯಮಂತ್ರಿ ಜವಾಹರಲಾಲರು ಅಮೇರಿಕೆಗೆ ಕೊಟ್ಟ ಸ್ನೇಹದ ಭೆಟ್ಟಿಯಿಂದ ಉಭಯ ರಾಷ್ಟ್ರಗಳ ಪ್ರೀತಿಬಂಧನ ಬಿಗಿಗೊಂಡು, ಪರಸ್ಪರ ಸಹಾಯದಲ್ಲಿ ಪರಿಣಮಿಸುವಂತಾಗಲಿ. ಕೊನೆಯದಾಗಿ, ಕನ್ನಡಿಗರ ಹೃದಯಕ್ಕೆ ತೀರ ಸಮೀಪವಾದ ಏಕೀಕರಣದ ಪ್ರಶ್ನೆ ಸದ್ಯೋಭವಿಷ್ಯತ್ತಿನಲ್ಲಿ ಬಿಡುವ ಲಕ್ಷಣವಿಲ್ಲದ್ದು ದುಃಖದ ಸಂಗತಿ. ಮೈಸೂರು ಕನ್ನಡಿಗರೂ ಶಿಷ್ಟ ಕನ್ನಡಿಗರೂ ಒಂದೇ, ನಮ್ಮ ಹಿತ ಸಂಬಂಧಗಳೂ ಒಂದೇ ಎಂಬ ಭಾವನೆ ಬೇರೂರಿದ ಕ್ಷಣ ಏಕೀಕರಣ ಕರಗತವಾಗುವಲ್ಲಿ ಸಂಶಯವಿಲ್ಲ. ಆ ಐಕ್ಯ ಬೆಳೆಯಲು ಉಭಯತರೂ ಹೆಣಗುವ ಪ್ರಯತ್ನ ಮಾಡೋಣ.

[ ಧಿಯೋ ಯೋ ನಃ ಪ್ರಚೋದಯಾತ್ ॥ ]

---

## ಬಿಡುಗಡೆಗೆ

ಬಿಡುಗಡೆಯೆ, ದೇವರಿನಣಂ ಕಿರಿಯ ದೇವತೆಯೆ!
 ಭಾರತಕೆ ಬಾರ, ನರನೆರಡನೆಯ ತಾಯೆ!
ಋದ್ಧಿಸಿದ್ಧಿಗಳಕ್ಕನೆಂದು ಸಂಭಾವಿತೆಯೆ,
 ನೀನೆಲ್ಲಿ ಶಾಂತಿಯಲ್ಲಿದೆ ನಿನ್ನ ಛಾಯೆ!
ಯುರೋಪದಾವ ಗುಣಕೊಲಿದಲ್ಲಿ ನೀ ನಿಂತು
 ಮಿಕ್ಕಿಳೆಯನವರ ತುಳಿಗಾಲ್ಗೆ ಬಾಗಿಸಿದೆ?
ಆಶ್ಯದಾವವಗುಣಕೆ ಮುಳಿದಕಟ ನೀನಿಂತು
 ತೊರೆದೆಮ್ಮ ಕೋಟಿ ನಡೆಗೊಂಬೆಯಾಗಿಸಿದೆ?
ಕಾಡುಬೇರೆಮಗೂಡು! ಮಾಡೆಮಗೆ ಗವಿಬೀಡು!
 ನೀಡು ಬಿಲ್ಲಂಬುಗಳ ಬತ್ತಲೆಯ ಬಾಳು!
ನೀನಾದರೆಂದೆಂದು ಅಗಲದೆಮ್ಮೊಡನಾಡು—
 ನೀನಿಲ್ಲದಕಟ ಬಾಳಲ್ಲ, ಕಡುಗೋಳು!
ಬಾರಮ್ಮ, ಬಾರೊಮ್ಮೆ ಭಾರತಕೆ ಬಾರ!
 ಕತ್ತಲಿಸಿದೆಮಗೆ ಕಂತದ ರವಿಯ ತಾರ!

— ಗೋವಿಂದ ಪೈ

---

# ಕಾಲು ಶತಮಾನದಲ್ಲಿ ನಮ್ಮ ರಾಜಕೀಯ ಜೀವನ

ಲೇಖಕರು: ಶ್ರೀ ಮೊಹರೆ ಹನುಮಂತರಾಯರು

ಭರತಖಂಡವು ಬ್ರಿಟಿಶರ ಆಳಿಕೆಗೆ ಸಂಪೂರ್ಣವಾಗಿ ಒಳಪಟ್ಟ ನಂತರ ರಾಜಕೀಯ ಜೀವನವು ಪ್ರಾರಂಭವಾದದ್ದು ಹಿಂದೀ ರಾಷ್ಟ್ರೀಯ ಮಹಾಸಭೆಯು (ಕಾಂಗ್ರೆಸ್ಸು) ಸ್ಥಾಪಿಸಲ್ಪಟ್ಟಂದಿ-ನಿಂದೆಂದು ಹೇಳಿದರೆ ತಪ್ಪಾಗದು. ಮಹಾರಾಷ್ಟ್ರ ರಾಜ್ಯವು ಅಂದರೆ ಪೇಶ್ವಾಯಿಯು ಅಳಿದುಹೋಗಿ ಸ್ವಲ್ಪ ದಿವಸಗಳಲ್ಲಿಯೇ ಲೋಕ-ಮಾನ್ಯ ಟಿಳಕರಂತಹ ಮಹಾವಿಭೂತಿಗಳು ಮಹಾರಾಷ್ಟ್ರದಲ್ಲಿ ಉದಯವಾದ್ದರಿಂದ ಅಲ್ಲಿಯ ರಾಜಕೀಯ ಪರಂಪರೆಗೆ ಚ್ಯುತಿಯುಂಟಾಗಲಿಲ್ಲ. ಅಖಂಡ ಭಾರತದ ರಾಜಕೀಯ ರಂಗದಲ್ಲಿ ಮಹಾರಾಷ್ಟ್ರವು ಬಂಗಾಲದ ತರುವಾಯ ಪ್ರಾಮುಖ್ಯ ಪಾತ್ರವನ್ನು ವಹಿಸಿ ಉಳಿದ ಪ್ರಾಂತಗಳಿಗೆ ಮಾರ್ಗದರ್ಶಿಯಾಗಿತ್ತು. ನಮ್ಮ ಅಂದರೆ ಕರ್ನಾಟಕದ ರಾಜಕೀಯ ಜೀವನವು ವಿಜಯನಗರ ಸಾಮ್ರಾಜ್ಯದ ತರುವಾಯ ಸಂಪೂರ್ಣ ಅಸ್ತಂಗತವಾಯಿತೆಂದು ಖಂಡಿತವಾಗಿ ಹೇಳಬಹುದು. ಇದಕ್ಕೂ ಸೂಕ್ಷ್ಮವಾಗಿ ವಿಚಾರಮಾಡಿದರೆ ಪಶ್ಚಿಮ ಪೂರ್ವ ಚಾಳುಕ್ಯರೂ ರಾಷ್ಟ್ರಕೂಟರೂ ಕಣ್ಮರೆಯಾದ ಮೇಲೆ ನಮ್ಮ ರಾಜಕೀಯ ಜೀವನವು ಕೂಡ ಮಸುಕಮಸುಕಾಯಿತೆಂದು ಹೇಳಬಹುದು. ಮುಸಲ್ಮಾನರ ಆಳಿಕೆಯು ಅಳಿದುಹೋಗಿ ಬ್ರಿಟಿಶರ ಆಳಿಕೆಯು ಪ್ರಾರಂಭವಾಗಿ ಅರ್ಧ ಶತಮಾನದ ನಂತರ ನಮ್ಮ ಕರ್ನಾಟಕದಲ್ಲಿಯ ರಾಜಕೀಯ ಜೀವನವು ಸಾವಕಾಶವಾಗಿ ಎದ್ದು ಕಾಣಹತ್ತಿತು. ಈ ಅವಧಿಯಲ್ಲಿ ಕರ್ನಾಟಕವು ತುಂಡುತುಂಡಾಗಿ ಹೋಗಿತ್ತು. ಮೈಸೂರ ಪ್ರಾಂತವು ಬ್ರಿಟಿಶ ಕಮಿಾಶನರ ಮತ್ತು ಸದ್ಯದ ರಾಜಮನೆತನದವರಿಂದ ಆಳಲ್ಪಡುತ್ತಿತ್ತು. ನಿಜಾಮ ರಾಜ್ಯದಲ್ಲಿಯ ಕನ್ನಡಿಗರಲ್ಲಿ ರಾಜಕೀಯ ಜೀವನವು ತಲೆದೋರುವದು ಶಕ್ಯವಿದ್ದಿಲ್ಲ. ಸರಕಾರೀ ನೌಕರಿಯೊಂದೇ ಆಗಿನ ಕಾಲಕ್ಕೆ ಜನತೆಯ ರಾಜಕೀಯ ಜೀವನವಾಗಿತ್ತು. ಮದ್ರಾಸ ಪ್ರಾಂತದಲ್ಲಿಯ ಕನ್ನಡ ಜಿಲ್ಹೆಗಳೂ ಉಳಿದ ಭಾಗಗಳಂತೆ ಸುಷುಪ್ತಾವಸ್ಥೆಯಲ್ಲಿದ್ದವು. ಮದ್ರಾಸ ಇಲಾಖೆಯು ಒಂದಾನೊಂದು ಕಾಲಕ್ಕೆ (benighted) ಅಂಧಕಾರಮಯ ಪ್ರಾಂತವೆಂದು ಹೆಸರಾಗಿತ್ತು.

ಇನ್ನು ಮುಂಬೈ ಇಲಾಖೆಯಲ್ಲಿ ಅಡಕವಾಗಿರುವ ಕನ್ನಡ ಜಿಲ್ಹೆಗಳು ಮಹಾರಾಷ್ಟ್ರ ಪ್ರಾಂತದ ವರ್ಚಸ್ಸಿಗೆ ಸಿಕ್ಕು ಸರ್ವ ವಿಧದಿಂದಲೂ ಆ ಪ್ರಾಂತದ ಬಾಲಗಸಿಯಂತೆ ವರ್ತಿಸುತ್ತಿದ್ದವು. ಆದ್ದರಿಂದ ಹೋದ ಶತಮಾನದ ಕೊನೆಯಲ್ಲಿ ನಮ್ಮ ಕರ್ನಾಟಕದಲ್ಲಿ ರಾಜಕೀಯ ಜೀವನವು ಇದ್ದಿಲ್ಲವೆಂದು ಹೇಳಿದರೆ ತಪ್ಪಾಗದು. ಕಾಲೇಜ ಶಿಕ್ಷಣಕ್ಕಾಗಿ ಪುಣೆಗೆ ಹೋಗುತ್ತಿದ್ದ ಕೆಲವು ತರುಣರು ಮಹಾರಾಷ್ಟ್ರದಲ್ಲಿಯ, ವಿಶೇಷತಃ ಲೋಕಮಾನ್ಯಟಿಳಕರೇ ಮೊದಲಾದವರು ಪ್ರಾರಂಭಿಸಿದ, ರಾಜಕೀಯ ಜೀವನವನ್ನು ಅನುಕರಿಸಬೇಕೆಂದು ಹಂಬಲವುಳ್ಳವರಾದರು ಮತ್ತು ಕೇಸರಿ ಪತ್ರಿಕೆಯು ಇಂಗ್ಲೀಷ ಶಿಕ್ಷಣ ಹೊಂದಿದ ಕನ್ನಡಿಗರಲ್ಲಿ ಸ್ವಾತಂತ್ರ್ಯದ ಆಶೆ ಆಕಾಂಕ್ಷೆಗಳ ಬೇರೂರಿತು. ವಂಗಭಂಗ ಚಳವಳಿಯ ಕಾಲದಲ್ಲಿ ಮಾತ್ರ ರಾಜಕೀಯ ಜೀವನದ ಅಂಶಗಳು ಎದ್ದುಕಾಣಹತ್ತಿದವು. ಶಿವಾಜಿ ಮತ್ತು ಗಣೇಶ ಉತ್ಸವಗಳಂತಹ ರಾಷ್ಟ್ರೀಯ ಉತ್ಸವಗಳು ಆಚರಿಸಲ್ಪಡಹತ್ತಿದವು. ಮತ್ತು ರಾಷ್ಟ್ರೀಯ ಶಾಲೆಗಳು ಅಲ್ಲಲ್ಲಿ ಸ್ಥಾಪಿಸಲ್ಪಟ್ಟವು. ಮರಾಠಿ ಭಾಷೆಯ ಮೇಳೆಯ ಪದಗಳನ್ನು ತಪ್ಪುತಪ್ಪಾಗಿ ಹೇಳುತ್ತ ಕನ್ನಡ ಶಾಲೆಯ ಎಳೆಯ ಮಕ್ಕಳು ಆ ಉತ್ಸವಗಳಲ್ಲಿ ಭಾಗಿಗಳಾಗುತ್ತಿದ್ದರು. ಆಗಿನ ಕಾಲಕ್ಕೆ ಸಾರ್ವಜನಿಕ ಜೀವನವು ಪ್ರಾಮುಖ್ಯವಾಗಿ ವಕೀಲರನ್ನೇ ಅವಲಂಬಿಸಿತ್ತು. ಆ ವರ್ಗವು ಸುಶಿಕ್ಷಿತ ವರ್ಗವಿದ್ದು ರಾಷ್ಟ್ರದಲ್ಲಿ ಜಾಗ್ರತಿಯನ್ನುಂಟುಮಾಡುವ ಕಾರ್ಯವು ಅದರ ಪಾಲಿಗೆ ಬಂದಿತ್ತು. ಮಹಾರಾಷ್ಟ್ರ ಮತ್ತು ಬಂಗಾಲಗಳಲ್ಲಿಯ ತರುಣರು ರಾಜಕೀಯ ಚಳವಳಿಯಲ್ಲಿ ಧುಮುಕಿ ಪ್ರಾಣಾರ್ಪಣ ಮಾಡುತ್ತಿದ್ದ ಧೈರ್ಯ ಸಾಹಸಗಳು ಕರ್ನಾಟಕದಲ್ಲಿ ತರುಣರಿಗೆ ಆದರ್ಶಗಳಾಗಿದ್ದವಲ್ಲದೆ ಅವರಿಂದ ಸ್ಫೂರ್ತಿಗೊಂಡು ಇಲ್ಲಿಯೂ ಗುಪ್ತ ಸಂಘಗಳನ್ನು ಸ್ಥಾಪಿಸುವದು ಬಾಂಬು ಮೊದಲಾದವುಗಳನ್ನೂ ಸಿದ್ಧಮಾಡಲು ಪ್ರಯತ್ನ ಮಾಡುವದು ಇವರ ಚಟುವಟಿಕೆಗಳಾಗಿದ್ದವು. ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮೊದಲಾದವುಗಳ ಪ್ರಚಾರವನ್ನು ಬೆಳಗಾವಿಯ ಶ್ರೀ. ದೇಶಪಾಂಡೆ ಗಂಗಾಧರರಾಯರೂ ವಿಜಾಪುರದ ಶ್ರೀ. ಕೌಜಲಗಿ ಶ್ರೀನಿವಾಸರಾಯರೂಧಾರವಾಡದ ಶ್ರೀ.ಮುದವೀಡು ಕೃಷ್ಣರಾಯರೂ ಮಾಡುತ್ತಿದ್ದರು. ಗುಪ್ತ ಸಂಘಗಳನ್ನು ಸ್ಥಾಪಿಸಿ ಬಾಂಬು ಮಾಡುವ ತರುಣರಿಗೆ ಪ್ರೋತ್ಸಾಹನೆ ಕೊಡುವ ವಿಷಯದಲ್ಲಿ ಇವರೆಲ್ಲರ ಹೆಸರುಗಳು ಅಡಕವಾಗಿದ್ದವು. ಸರಕಾರದವರು ಇವರೆಲ್ಲರ ಮೇಲೆ ಕಣ್ಣು ಇಟ್ಟಿದ್ದರು. ಗಣೇಶ ಉತ್ಸವಗಳಲ್ಲಿ ಇವರೆಲ್ಲರ ವ್ಯಾಖ್ಯಾನಗಳನ್ನು ಕೇಳಲು ಸಾವಿರಾರು ಜನರು ನೆರೆಯುತ್ತಿದ್ದರು. ಆಗಿನ ಕಾಲದ ಆವೇಶಯುಕ್ತವಾದ ಭಾಷಣಗಳು ತರುಣರನ್ನೂ ವೃದ್ಧರನ್ನೂ ಒಂದೇ ವಿಧವಾಗಿ ಸ್ಫೂರ್ತಿಗೊಳಿಸುತ್ತಿದ್ದವು. ಬಾಗಲಕೋಟೆಯಲ್ಲಿ ಓರ್ವ ವೃದ್ಧ ವರ್ತಕರು ಕೌಜಲಗಿ ಶ್ರೀನಿವಾಸರಾಯರ ಆಗಿನ ಭಾಷಣದಿಂದ ಸ್ಫೂರ್ತಿಗೊಂಡು ಮೈಮೇಲಿನ ಪರದೇಶಿ ಬಟ್ಟೆಗಳನ್ನು ಸಭೆಯಲ್ಲಿಯೇ ಹರಿದೊಗೆದರು. ಆ ದೃಶ್ಯವು ಒಳ್ಳೇ ಅಸಾಧಾರಣವಾಗಿತ್ತು.

ಆಗಿನ ಕಾಲಕ್ಕೆ ಕೇಸರಿಯಂತಹ ಮರಾಠಿ ಪತ್ರಿಕೆಗಳೂ ಮರಾಠಿ ಭಾಷಣಕಾರರೂ ಕರ್ನಾಟಕದ ರಾಜಕೀಯ ಜೀವನಕ್ಕೆ ಪುಟ ಕೊಡುತ್ತಿದ್ದರು. ಲೋಕಮಾನ್ಯ ಟಿಳಕರು ಆರು ವರ್ಷ ಕಾರಾಗೃಹಕ್ಕೆ ಹೋದ ಮೇಲೆ ರಾಷ್ಟ್ರದಲ್ಲಿಯ ರಾಜಕೀಯ ಜೀವನಕ್ಕೆ ಒಂದು ಬಗೆಯ ಇಳಿಗಾಲವು ಬಂದಿತು. ಮುಂದೆ ೧೯೦೯ನೇ ಇಸ್ವಿಯಲ್ಲಿ ಮೋರ್ಲೆಮಿಂಟೋ ಸುಧಾರಣೆಗಳ ಮೂಲಕ ಕೆಲವರು ಸಮಾಧಾನಗೊಂಡರು. ೧೯೧೪ರಲ್ಲಿ ಲೋಕಮಾನ್ಯ ಟಿಳಕರು ಮಂಡಾಲೆದಿಂದ ಮರಳಿ ಬಂದರು ಮತ್ತು ಮಹಾತ್ಮಾ ಗಾಂಧಿಯವರು ದಕ್ಷಿಣ ಆಫ್ರಿಕೆಯಿಂದ ಮರಳಿ ಬಂದಿದ್ದರು. ಮೊದಲನೇ ಜಾಗತಿಕ ಯುದ್ಧವು ಪ್ರಾರಂಭವಾಗಿತ್ತು. ಮಿಸೆಸ್ ಆನಿಬೆಸಂಟರು ಹಿಂದೀ ರಾಜಕೀಯ ಕ್ಷಿತಿಜದ ಮೇಲೆ ಕಾಣಿಸಹತ್ತಿದರು. ಹೋಂರೂಲ ಚಳವಳಿಯನ್ನು ಅವರು ಪ್ರಾರಂಭಿಸಿ ರಾಷ್ಟ್ರದ ಜೀವನದಲ್ಲಿ ಹೊಸ ಕಳೆಯನ್ನು ತುಂಬಿದರು. ಕಾಂಗ್ರೆಸ್ ಸಂಸ್ಥೆಯು ಆಗಿನ ಕಾಲಕ್ಕೆ

ಮುಂದಪಕ್ಷದವರ ಕೈಯಲ್ಲಿತ್ತು. ಲೋಕಮಾನ್ಯ ಟಿಳಕರು ಪುನಃ ಕಾಂಗ್ರೆಸ್ಸನ್ನು ಸೇರಿ ಅದನ್ನು ಹಸ್ತಗತ ಮಾಡಿಕೊಳ್ಳಬೇಕೆಂದು ಎಣಿಕೆ ಹಾಕಿ ಬೆಳಗಾವಿಯಲ್ಲಿ ಪ್ರಾಂತಿಕ ಪರಿಷತ್ತನ್ನು ನೆರವೇರಿಸಿದರು. ಶ್ರೀ. ಬೆಳವಿ ದತ್ತರಾಯರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರು. ಶ್ರೀ. ಬೆಳವಿಯವರು ಮುಂಬಯಿ ಕೌನ್ಸಿಲದಲ್ಲಿ ಹೆಸರು ಮಾಡಿಕೊಂಡಿದ್ದರು. ಬೆಳಗಾವಿಯು ಆಗಿನ ಕಾಲದಲ್ಲಿ ಕರ್ನಾಟಕದ ರಾಜಕೀಯ ಜೀವನದ ಮುಖ್ಯ ಸ್ಥಾನವಾಗಿತ್ತು. ಶ್ರೀ. ದತ್ತೋಪಂತ ಮಜಲಿ, ಶ್ರೀ. ಕರಿಗುಪ್ಪೀಕರ ಮೊದಲಾದ ಹೊಸ ವಕೀಲರು ರಾಷ್ಟ್ರೀಯ ಕಾರ್ಯಕ್ಕೆ ಸನ್ನದ್ಧರಾದರು. ಧಾರವಾಡದಲ್ಲಿ ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು, ಹೊನ್ನಾಪುರ ಮಠದ ಗದಿಗೆಯ್ಯನವರು, ಕರಗುದರಿ ನಾರಾಯಣರಾಯರು ಇವರೇ ಮೊದಲಾದವರು ಕರ್ನಾಟಕವು ಎರಡನೆಯವರ ಅಂಧಾನುಕರಣ ಮಾಡಕೂಡದೆಂದು ಹೇಳಿ ಕನ್ನಡ ಚಳವಳಿಯನ್ನು ಪುರಸ್ಕರಿಸಿದರು. ಕಡಪಾ ರಾಘವೇಂದ್ರರಾಯರು ಎಲ್ಲೆಡೆಯಲ್ಲಿಯೂ ಪ್ರವಾಸ ಮಾಡಿ ಕನ್ನಡ ಭಾಷೆ, ಕರ್ನಾಟಕದ ಇತಿಹಾಸ, ಕನ್ನಡ ಸಂಸ್ಕೃತಿ ಮೊದಲಾದವುಗಳ ಬಗ್ಗೆ ಜಾಗೃತಿಯನ್ನುಂಟುಮಾಡಿದರು. ಆದರೆ ರಾಷ್ಟ್ರೀಯ ಚಳವಳಿಯನ್ನು ವಿರೋಧಿಸಲಿಲ್ಲ. ಇದೇ ಕಾಲವು ಕರ್ನಾಟಕದ ರಾಜಕೀಯ ಜೀವನದ ಪ್ರಾರಂಭಕಾಲವೆಂದು ಹೇಳಬಹುದು. ಮುಂದಿನ ರಾಜಕೀಯ ಜೀವನದ ಯಥಾರ್ಥ ಕಲ್ಪನೆಯುಂಟಾಗಬೇಕಾದರೆ ಇದುವರೆಗೆ ಉಲ್ಲೇಖಿಸಿದ ಹಿನ್ನೆಲೆಯು ಅವಶ್ಯವು.

## ಕರ್ನಾಟಕತ್ವದ ಜಾಗ್ರತಿ

೧೯೧೯ನೇ ಇಸ್ವಿಯಲ್ಲಿ ಲೋಕಮಾನ್ಯ ಟಿಳಕರು ಕಾಲವಾದ ಮೇಲೆ ರಾಷ್ಟ್ರದ ಮುಂದಾಳುತನವು ಮಹಾತ್ಮಾಗಾಂಧಿಯವರ ಕಡೆಗೆ ಬಂದಿತು. ಅಷ್ಟರಲ್ಲಿ ಕಡಪಾ ರಾಘವೇಂದ್ರರಾಯರೇ ಮೊದಲಾದವರು ಕಾಂಗ್ರೆಸ್ಸಿನ ರಾಜ್ಯಘಟನೆಯಲ್ಲಿ ಕರ್ನಾಟಕಕ್ಕೆ ಸ್ವತಂತ್ರ ಸ್ಥಾನ ಕೊಡಬೇಕೆಂದು ಹೋರಾಡುತ್ತಿದ್ದರು. ಆಂಧ್ರರೂ ಅದಕ್ಕಾಗಿಯೇ ಹೆಣಗುತ್ತಿದ್ದರು. ಭಾಷಾವಾರ ಪ್ರಾಂತರಚನೆಯ ತತ್ವವು ಜನತೆಯ ಮನಸ್ಸನ್ನು ಸೆಳೆದಿತ್ತು. ೧೯೨೦ನೇ ಇಸ್ವಿಯಲ್ಲಿ ನಾಗಪುರದಲ್ಲಿ ಸೇರಿದ ಕಾಂಗ್ರೆಸ್ಸಿನಲ್ಲಿ ಭಾಷಾವಾರ ಪ್ರಾಂತರಚನೆಯು ಸ್ವೀಕರಿಸಲ್ಪಟ್ಟು ಅದರಂತೆ ಕಾಂಗ್ರೆಸ್ಸಿನ ಆಡಳಿತೆಗಾಗಿ ಪ್ರಾಂತಗಳು ನಿರ್ಮಿಸಲ್ಪಟ್ಟವು. ಕರ್ನಾಟಕಕ್ಕಾಗಿ ಬೇರೆ ಪ್ರಾಂತವನ್ನು ದೊರಕಿಸುವದಕ್ಕಾಗಿ ಕರ್ನಾಟಕದಿಂದ ನೂರಾರು ಪ್ರತಿನಿಧಿಗಳು ಸ್ಪೆಶಲ್ ರೇಲ್ವೆ ಗಾಡಿಯಿಂದ ನಾಗಪುರಕ್ಕೆ ಹೋಗಿದ್ದರು. ಮತ್ತು ಅಲ್ಲಿ ಬೇರೊಂದು ಕ್ಯಾಂಪು ಮಾಡಿಕೊಂಡಿದ್ದರು. ಪ್ರತಿನಿಧಿಗಳಲ್ಲಿ ಒಕ್ಕಟ್ಟು, ಉತ್ಸಾಹ, ಸಾಹಸ, ಕರ್ನಾಟಕದ ಅಭಿಮಾನ ಮೊದಲಾದವುಗಳು ತುಂಬಿತುಳುಕುತ್ತಿದ್ದವು. ಅಖಿಲ ಭಾರತದ ರಾಜಕಾರಣದಲ್ಲಿ ಕರ್ನಾಟಕದ ಹೆಸರು ಕೇಳಬರಹತ್ತಿತು. ಎಲ್ಲ ಜಿಲ್ಹೆಗಳಿಂದಲೂ ಹೊಸ ಮುಂದಾಳುಗಳು ಮುಂದೆ ಬರಹತ್ತಿದ್ದರು.

೧೯೧೬ನೇ ಇಸ್ವಿಯಿಂದ ೧೯೨೦ನೇ ಇಸ್ವಿಯ ವರೆಗಿನ ಅವಧಿಯಲ್ಲಿ ಕರ್ನಾಟಕದಲ್ಲಿ ಹೊಸ ಚೈತನ್ಯವುಂಟಾಗಿತ್ತು. ಅದೇ ಮುಂದಿನ ರಾಜಕೀಯ ಜೀವನದ ತಳಹದಿಯಾಗಿತ್ತೆಂದು ಹೇಳಬಹುದು. ಲೋಕಮಾನ್ಯ ಟಿಳಕರು, ಬಾಬು ಬಿಪಿನಚಂದ್ರ ಪಾಲ ಮೊದಲಾದವರು ಕರ್ನಾಟಕದಲ್ಲಿ ಪ್ರವಾಸ ಮಾಡಿದ್ದರಿಂದ ಜನರಲ್ಲಿ ಹೊಸ ಸ್ಫೂರ್ತಿಯುಂಟಾಯಿತು. ಮತ್ತು ೧೮೧೮ನೇ ಇಸ್ವಿಯಲ್ಲಿ ಶ್ರೀ ವಿಠ್ಠಲಭಾಯಿ ಪಟೇಲರ ಅಧ್ಯಕ್ಷತೆಯಲ್ಲಿ ಮುಂಬಯಿ ಪ್ರಾಂತಿಕ ರಾಜಕೀಯ ಪರಿಷತ್ತು ವಿಜಾಪುರದಲ್ಲಿ ಕೂಡಿತ್ತು. ಆ ಪರಿಷತ್ತಿಗೆ ಮಹಾತ್ಮಾ ಗಾಂಧಿಯವರು ಬಂದಿದ್ದರು. ಇತರ ಮುಂದಾಳುಗಳೂ ಬಂದಿದ್ದರು. ಮುಂದೆ ಧಾರವಾಡದಲ್ಲಿ ದಿವಾಣ ವ್ಹಿ. ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ಕರ್ನಾಟಕದ ಮೊದಲನೇ ರಾಜಕೀಯ ಪರಿಷತ್ತು ಕೂಡಿತ್ತು. ಈ ಎರಡೂ ಪರಿಷತ್ತುಗಳು ಕರ್ನಾಟಕದ ರಾಜಕೀಯ ಜೀವನಕ್ಕೆ ಹೊಸ ಕಳೆಯನ್ನು ತುಂಬಿದವು.

## ಬ್ರಾಹ್ಮಣೇತರ ಚಳವಳಿ

ಇದೇ ಅವಧಿಯಲ್ಲಿ ಮದ್ರಾಸದಲ್ಲಿ ಹುಟ್ಟಿದ ಬ್ರಾಹ್ಮಣೇತರ ಚಳವಳಿಯು ಕರ್ನಾಟಕದಲ್ಲಿ ಸೇರಿಕೊಂಡಿತು. ಮಾಂಟೆಗ್ಯೂ ಚೇಮ್ಸಫೋರ್ಡ ಸುಧಾರಣೆಗಳಲ್ಲಿ ಹಿಂದುಳಿದ ಜಾತಿಯವರಿಗೆ ಬೇರೆ ಪ್ರಾತಿನಿಧ್ಯ ಕೊಡಬೇಕೆಂಬ ಚಳವಳಿಯು ಪ್ರಾರಂಭಿಸಲ್ಪಟ್ಟಿತು. ಶ್ರೀಮಾನ್ ಕಂಬಳಿ ಸಿದ್ದಪ್ಪನವರು, ಶ್ರೀ. ಚಿಕ್ಕೋಡಿ ಪಂಡಿತಪ್ಪನವರು ಶ್ರೀ. ಹಳಕಟ್ಟಿಯವರು, ಇವರೇ ಮೊದಲಾದವರು ಈ ಚಳವಳಿಯ ಪುರಸ್ಕರ್ತರು. ಮುಂಬಯಿ ಪ್ರಾಂತಿಕ ಪರಿಷತ್ತನ್ನು ವಿಜಾಪೂರದಲ್ಲಿ ವಿರೋಧಿಸಿ ಬೇರೊಂದು ಪರಿಷತ್ತನ್ನು ಅಲ್ಲಿಯೇ ಹೂಡಿದರು. ಹೀಗೆ ಬೇರೊಂದು ರಾಜಕೀಯ ಸಂಗಡವು ನಮ್ಮಲ್ಲಿ ಜನ್ಮ ತಾಳಿತು. ಇವರಾದರೂ ಪರಪ್ರಾಂತದವರನ್ನೇ ವಿಶೇಷವಾಗಿ ಅನುಕರಣ ಮಾಡುತ್ತಿದ್ದರು. ಜಾತೀಯ ತಳಹದಿಯ ಮೇಲೆ ಕಟ್ಟಲ್ಪಟ್ಟ ಈ ಚಳವಳಿಯು ಕಾಂಗ್ರೆಸ್ ಚಳವಳಿಯ ಪ್ರಚಾರಕ್ಕೆ ಒಳ್ಳೇ ಆತಂಕವನ್ನುಂಟುಮಾಡಿತು. ಆಗಿನ ಸರಕಾರದ ಅವಕೃಪೆಗೆ ಪಾತ್ರರಾಗಿ ಅದನ್ನು ವಿರೋಧಿಸುತ್ತ ರಾಷ್ಟ್ರೀಯ ಚಳವಳಿಯನ್ನು ಸೇರಿ ಸ್ವರಾಜ್ಯಕ್ಕಾಗಿ ಹೋರಾಡುವಷ್ಟು ನಾವು ಮುಂದರಿದಿಲ್ಲೆಂದು ಆಗಿನ ಬ್ರಾಹ್ಮಣೇತರ ಮುಂದಾಳುಗಳು ಪ್ರತಿಪಾದಿಸುತ್ತಿದ್ದರು. ಆದ್ದರಿಂದ ಅವರು ಕಾಂಗ್ರೆಸ್ಸಿನ ಹೊರಗೇ ಉಳಿದರು ಮತ್ತು ಮಹಾತ್ಮಾ ಗಾಂಧಿಯವರು ಹೂಡಿದ ಅಸಹಕಾರ ಚಳವಳಿಯನ್ನು ಅವರು ವಿರೋಧಿಸುತ್ತ ಬಂದರು. ಆಗಿನ ಅಧಿಕಾರಿವರ್ಗವು ಅವರನ್ನು ಬೆಂಬಲಿಸುತ್ತ ಬಂದದ್ದರಲ್ಲಿ ಆಶ್ಚರ್ಯವೂ ಇಲ್ಲ. ಈ ಚಳವಳಿಯಿಂದ ಪ್ರಾಂತಕ್ಕೆ ಲಾಭವಾಯಿತೋ ಹಾನಿಯಾಯಿತೋ ಎಂಬದನ್ನು ಚರ್ಚಿಸುವ ಸಮಯವು ಇದಲ್ಲ.

## ಪ್ರಾಂತಿಕ ಕಾಂಗ್ರೆಸ್ ಸ್ಥಾಪನೆ

ನಾಗಪೂರ ಕಾಂಗ್ರೆಸ್ಸಿನ ತರುವಾಯ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿಯು ಸಂಘಟಿಸಲ್ಪಟ್ಟು ಅದರ ಮೊದಲನೇ ಸಭೆಯು ಗದುಗಿನಲ್ಲಿ ಕೂಡಿತ್ತು. ಆಗ್ಗೆ ಗದಗು ಪ್ರಾಂತಿಕಕಾಂಗ್ರೆಸ್ ಕಮೀಟಿಯ ಮುಖ್ಯ ಸ್ಥಳವಾಗಿತ್ತು. ಮುಂಬಯಿ ಕರ್ನಾಟಕದಿಂದಲ್ಲದೆ ಮೈಸೂರ, ದಕ್ಷಿಣ ಕನ್ನಡ, ಬಳ್ಳಾರಿ, ಕೊಪ್ಪಳ ಮೊದಲಾದ ಸ್ಥಳಗಳಿಂದ ಪ್ರತಿನಿಧಿಗಳು ಬಂದಿದ್ದರು. ಅಖಂಡ ಕರ್ನಾಟಕ ಪ್ರತಿನಿಧಿಗಳು ಅಲ್ಲಿ ಸೇರಿದ್ದು ನೋಡಿ ಕರ್ನಾಟಕ ಏಕೀಕರಣಕ್ಕಾಗಿ ದುಡಿಯುತ್ತಿದ್ದವರಿಗೆ ಅತ್ಯಂತ ಸಂತೋಷವಾಯಿತು. ಅಗಲಿ ಹೋದ ಅಣ್ಣತಮ್ಮಂದಿರು ಮರಳಿ ಒತ್ತಟ್ಟಿಗೆ ಸೇರಿದರೆ ಪರಸ್ಪರರಲ್ಲಿ ಆನಂದಾತಿಶಯವು ಉಕ್ಕೇರಿ ಬರುವಂತೆ ಅಲ್ಲಿಯ ಸದಸ್ಯರಲ್ಲಿ ಸೌಹಾರ್ದ

ಭಾವನೆಗಳು ಉಕ್ಕೇರಿ ಬರುತ್ತಿದ್ದವು. ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಸದಸ್ಯನಾಗಿ ಆ ಸಭೆಗೆ ಹೋಗುವ ಭಾಗ್ಯವು ನನಗೆ ದೊರಕಿತ್ತು. ಆದರೆ ಆಗಿನ ಕಾಲಕ್ಕೆ ಪ್ರಾಂತಿಕ ಕಾಂಗ್ರೆಸ್ಸ ಕಮಿಟಿಯ ಸದಸ್ಯತ್ವಕ್ಕಾಗಿ ಹೋರಾಡುವ ಪ್ರಸಂಗವಿದ್ದಿಲ್ಲ. ಶ್ರೀಮಾನ್ ಗಂಗಾಧರರಾಯರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಶ್ರೀಮಾನ್ ಕೆಂಭಾವಿ ಮಧ್ವರಾಯರು, ಡಾ. ಹುಯಿಲಗೋಳ ವೆಂಕಟರಾಯರು ಮತ್ತು ಶ್ರೀ. ದೇಶಪಾಂಡೆ ಜಯರಾಯರು ಕಾರ್ಯದರ್ಶಿಗಳಾದರು. ಇಡಿಯ ಕರ್ನಾಟಕ ಪ್ರಾಂತದಲ್ಲಿ ಅಸಹಕಾರ ಸಂದೇಶವನ್ನು ಬಿರುಗಾಳಿಯಂತೆ ಬೀರಲು ಪ್ರಾರಂಭವಾಯಿತು. ಶ್ರೀ. ದತ್ತೋಪಂತ ಮಜಲಿ ಬೆಳಗಾಂವ, ಶ್ರೀ. ಕರಗುಪ್ಪೀಕರ, ಶ್ರೀ. ನಾರಾಯಣರಾವ ಜೋಶಿ, ಶ್ರೀ. ಶ್ರೀನಿವಾಸರಾವ ಕೌಜಲಗಿ, ಶ್ರೀ. ಜಯರಾವ ದೇಶಪಾಂಡೆ, ಶ್ರೀ. ಹಣಮಂತರಾವ ಕೌಜಲಗಿ, ಶ್ರೀ. ರಂಗರಾವ ದಿವಾಕರ, ಶ್ರೀ ರಾಘವೇಂದ್ರರಾವ ಕಡಪಾ, ಶ್ರೀ ವಿಶ್ವನಾಥರಾವ ಜೋಶಿ ಹುಬ್ಬಳ್ಳಿ ಮೊದಲಾದವರು ಮಹಾತ್ಮಾ ಗಾಂಧೀಜಿಯವರ ಸಂದೇಶವನ್ನು ಹಳ್ಳಿಹಳ್ಳಿಗೆ ಬೀರಿದರು. ಸರಕಾರದವರು ಬೇಗನೆ ದಬ್ಬಾಳಿಕೆಯ ಸತ್ರವನ್ನು ಪ್ರಾರಂಭ ಮಾಡುವ ಪೂರ್ವಸಿದ್ಧತೆಯನ್ನು ಮಾಡಿದ್ದರು. ಪ್ರಚಾರಕಾರ್ಯಕ್ಕೆ ಬೇಕಾಗುವ ಪತ್ರಿಕೆಗಳನ್ನು ಹೊರಡಿಸಲಾಯಿತು. ಆಗ್ಗೆ ದಿನಪತ್ರಿಕೆ ಹೊರಡಿಸಲು ಸಾಧ್ಯವಿದ್ದಿಲ್ಲ. ಶ್ರೀ. ಕಬ್ಬೂರ ಮಧ್ವರಾಯರು, ಶ್ರೀ. ಹುಕ್ಕೇರಿ ರಾಮರಾಯರು, ಶ್ರೀ. ದಿವಾಕರ ರಂಗರಾಯರು "ಕರ್ಮವೀರ" ಪತ್ರಿಕೆಯನ್ನು ಹೊರಡಿಸಿದರು. ವಿಜಾಪುರದ ದೇಶಪಾಂಡೆ ಜಯರಾಯರು "ಕರ್ನಾಟಕ ವೈಭವ ಪತ್ರಿಕೆಯ" ಮುಖಾಂತರ ಬರೆಯುತ್ತಿದ್ದರು." ಶ್ರೀ. ಮುದವೀಡು ಕೃಷ್ಣರಾಯರ "ಕರ್ನಾಟಕ ವೃತ್ತವು" ಎಂದಿನಂತೆ ಕೆಲಸ ಮಾಡುತ್ತಿತ್ತು. ಧಾರವಾಡ ವ್ಹಿಕ್ಟೋರಿಯಾ ಹೈಸ್ಕೂಲ ಮತ್ತು ಕಾಲೇಜಗಳು ರಾಷ್ಟ್ರೀಯ ಸಂಸ್ಥೆಗಳಾದವು. ಪ್ರತಿ ಜಿಲ್ಹೆಗೆ ೭-೮ ಜನ ವಕೀಲರು ತಮ್ಮ ವ್ಯವಸಾಯವನ್ನು ಬಿಟ್ಟು ರಾಷ್ಟ್ರಕಾರ್ಯಕ್ಕೆ ಟೊಂಕ ಕಟಿದರು. ವಿದ್ಯಾರ್ಥಿಗಳು ಸಾಲೆಕಾಲೇಜುಗಳಿಗೆ ಶರಣುಹೊಡೆದರು. ಎಲ್ಲಿ ನೋಡಿದಲ್ಲಿ ಅಸಹಯೋಗದ ಪ್ರಭಾವವು ಕಂಡುಬರುತ್ತಿತ್ತು. ಜನಸಾಮಾನ್ಯರು ಅಸಹಯೋಗ ಆಂದೋಲನಕ್ಕೆ ಸಹಾನುಭೂತಿಯನ್ನು ತೋರಿಸುತ್ತಿದ್ದರೂ ಅದರಲ್ಲಿ ಪ್ರತ್ಯಕ್ಷ ಭಾಗವಹಿಸಲು ಮುಂದೆ ಬರಲಿಲ್ಲ.

### ಬ್ರಾಹ್ಮಣೇತರರ ಪ್ರವೇಶ

ಕೆಲವರು ಕಾಂಗ್ರೆಸ್ಸನ್ನೂ ಅದರ ಪ್ರಚಾರವನ್ನೂ ವಿರೋಧಿಸುತ್ತಿದ್ದರಲ್ಲದೆ ಸರಕಾರಕ್ಕೆ ಸಹಾಯಮಾಡುತ್ತಿದ್ದರು. ಧಾರವಾಡದ ಗೋಳೀಬಾರಿನ ಪ್ರಕರಣದಲ್ಲಿ ಕೆಲವರು ಸುಳ್ಳು ಸಾಕ್ಷಿಯನ್ನು ನುಡಿದರು. ಶ್ರೀ ದಿವಾಕರರು ಕೋರ್ಟಿಗೆ ಸಾದರ ಪಡಿಸಿದ ಹೇಳಿಕೆಯಲ್ಲಿ "ಸುಳ್ಳು ಸಾಕ್ಷಿ ಹೇಳುವವರ ಮಧ್ಯದಲ್ಲಿರುವದಕ್ಕಿಂತ ಮಾಡಿದ ಪಾಪಕ್ಕಾಗಿ ಪಶ್ಚಾತ್ತಾಪ ಪಡುತ್ತ ಜೇಲಿನಲ್ಲಿರುವ ಕೈದಿಗಳ ಸಂಗಡ ವಾಸಿಸುವದು ಶ್ರೇಯಸ್ಕರ"ವೆಂದು ಹೇಳಿದ್ದು ಯಥಾರ್ಥವಿದೆ. ಮುಖ್ಯ ಮುಂದಾಳುಗಳೆಲ್ಲ ಜೇಲಿಗೆ ಕಳಿಸಲ್ಪಟ್ಟರು. ಮುಂದೆ ಬಾರ್ಡೋಲಿ ಸತ್ಯಾಗ್ರಹವು ನಿಲ್ಲಸಲ್ಪಟ್ಟು ಮಹಾತ್ಮಾ ಗಾಂಧಿಯವರಿಗೆ ಆರು ವರ್ಷ ಶಿಕ್ಷೆಯಾದ ಮೇಲೆ ಅಸಹಯೋಗ ಚಳವಳಿಯು ಇಳಿಯಲಿಕ್ಕೆ ಪ್ರಾರಂಭವಾಯಿತು. ೧೯೨೦ ನೇ ಇಸ್ವಿಯಿಂದ ೧೯೩೦ ವರೆಗೆ ಕಾಂಗ್ರೆಸ್ ಸಂಸ್ಥೆಯೊಂದೇ ರಾಜಕೀಯ ರಂಗದಲ್ಲಿ ಕೆಲಸ ಮಾಡುತ್ತ ಬಂದಿತು. ಕೇವಲ ತ್ಯಾಗಬುದ್ಧಿಯಿಂದ ಪ್ರೇರಿತರಾಗಿ, ಉದಾತ್ತ ಭಾವನೆಗಳಿಂದ ಉದ್ದೀಪಿತರಾಗಿ, ಉಚ್ಚ ಧ್ಯೇಯಗಳಿಂದ ಸ್ಫೂರ್ತಿಗೊಂಡು ಅಧಿಕಾರವನ್ನು ಸ್ವಪ್ನದಲ್ಲಿ ಕೂಡ ಕಾಣದಂತಹ ಜನರು ಕಾಂಗ್ರೆಸ್ಸಿನಲ್ಲಿ ಸೇರಿ ಕೆಲಸ ಮಾಡಿದರು. ಅವರ ನೈತಿಕ ಮಟ್ಟ, ಧೈರ್ಯ, ಕಷ್ಟಸಹಿಷ್ಣುತೆ ಮೊದಲಾದವುಗಳು ಹೊಗಳುವಂತಹವಿದ್ದವು. ಮುಂದೆ ೧೯೩೦ನೇ ಇಸ್ವಿಯಲ್ಲಿ ಪ್ರಾರಂಭವಾದ ಉಪ್ಪಿನ ಸತ್ಯಾಗ್ರಹ ಕಾಲಕ್ಕೆ ಕಾಂಗ್ರೆಸ್ಸು ಇನ್ನು ಕೆಲವು ದಿವಸಗಳಲ್ಲಿ ಪ್ರಬಲವಾಗಿ ರಾಜ್ಯಸೂತ್ರಗಳನ್ನು ವಹಿಸಬೇಕೆಂಬ ಕನಸುಗಳು ಕೆಲವರಿಗೆ ಬೀಳಹತ್ತಿದವು. ಇಷ್ಟು ದಿವಸಗಳವರೆಗೆ ಸಿಡಿದುನಿಂತ ಬ್ರಾಹ್ಮಣೇತರ ಪಕ್ಷದ ಮುಂದಾಳುಗಳು ಕಾಂಗ್ರೆಸ್ಸನ್ನು ಸೇರಬೇಕೆಂದು ಪ್ರಚಾರ ನಡೆಸಿದರು. ಈ ಸಮಯದಲ್ಲಿ ನಾವೆಲ್ಲರೂ ಕಾಂಗ್ರೆಸ್ಸಿನ ಹೊರಗೆ ಉಳಿದರೆ ಅಧಿಕಾರವು ಕಾಂಗ್ರೆಸ್ಸಿನಲ್ಲಿದ್ದವರಿಗೆ ಸಿಗುವದು ಮತ್ತು ವಿಶೇಷತಃ ಬ್ರಾಹ್ಮಣರ ಕೈಸೇರುವದೆಂಬ ಪ್ರಚಾರ ನಡೆಯಿತು. ಕಡೆಗೆ ಬ್ರಾಹ್ಮಣೇತರ ಪಕ್ಷದ ಮುಂದಾಳುಗಳು ಕಾಂಗ್ರೆಸ್ಸನ್ನು ಸೇರಿದರು. ಮತ್ತು ಜೇಲಿಗೆಹೋದರು ಇದಕ್ಕೂ ಪೂರ್ವದಲ್ಲಿ ಬ್ರಾಹ್ಮಣೇತರರು ಕಾಂಗ್ರೆಸ್ಸಿನಲ್ಲಿದ್ದಿಲ್ಲವೆಂದು ಯಾರೂ ತಿಳಿದುಕೊಳ್ಳಕೂಡದು. ಆದರೆ ಅವರ ಸಂಖ್ಯೆಯು ತೀರ ಅಲ್ಪ ಪ್ರಮಾಣದಲ್ಲಿತ್ತು. ಸ್ಥಾನಮಾನಗಳಿಗಾಗಿ ಏರಾಟವು ಕಾಂಗ್ರೆಸ್ಸಿನಲ್ಲಿ ೧೯೩೦ ಇಸ್ವಿಯ ನಂತರ ತಲೆದೋರಹತ್ತಿತೆಂದು ಹೇಳಬಹುದು. ರಾಜಕೀಯ ರಂಗದಲ್ಲಿ ಕೆಲಸ ಮಾಡುವವರ ಸಂಖ್ಯೆಯೂ ಇತ್ತೀಚೆಗೆ ಹೆಚ್ಚಾಗಿದ್ದರೂ ಮೊದಲಿನ ನೈತಿಕಮಟ್ಟವುಳಿದಿಲ್ಲವೆಂದು ಹೇಳಬೇಕಾಗಿದೆ. ಯಾವದೊಂದು ದೋಷೈಕದೃಷ್ಟಿಯಿಂದ ನಾನು ಈ ಮಾತನ್ನು ಹೇಳುವದಿಲ್ಲ. ಅಂತೂ ಸದ್ಯದ ರಾಜಕೀಯ ಜೀವನವು ಅಷ್ಟೊಂದು ಪರಿಶುದ್ಧವಾಗಿಲ್ಲ. ಮತ್ತು ಸಾಮರ್ಥ್ಯವುಳ್ಳದ್ದೂ ಇಲ್ಲ. ಇನ್ನು ಮುಂದಿನ ರಾಜಕೀಯ ಆಶೆಆಕಾಂಕ್ಷೆಗಳು ಬೇರೆಯಾಗಿರುವದರಿಂದ ಜೀವನದ ದಿಸೆಯನ್ನೇ ನಾವು ಬದಲಿಸಬೇಕಾಗಿದೆ. ಪ್ರಾಂತದ ಸಾಮರ್ಥ್ಯವನ್ನು ಬೆಳೆಸಿ ವಿಧಾಯಕ ಕಾರ್ಯದಲ್ಲಿ ತೊಡಗಿಸಬೇಕಾಗಿದೆ ಮತ್ತು ಸಾರ್ವಜನಿಕ ಜೀವನವನ್ನೇ ಪುನರ್ಘಟಿಸಬೇಕಾಗಿದೆ.

# ಶಾಂತಿದೂತ ಗಾಂಧೀಜಿ

ಶ್ರೀ. ರಂ. ರಾ. ದಿವಾಕರರಿಂದ

ಪ್ರಪಂಚದ ದೇಶಭಕ್ತರು ಮತ್ತು ರಾಜಕಾರಣಿಗಳು ಸ್ವಯಂಕಲ್ಪಿತ ಸಮಸ್ಯೆಗಳಲ್ಲಿ ಮಗ್ನರಾಗಿ, ಶಾಂತಿರಕ್ಷಣೆಯ ಹೆಸರಲ್ಲಿ ರಾಜಕೀಯ ಪ್ರಾಬಲ್ಯದ ಬೆಂಬತ್ತಿ ಯುದ್ಧಸಿದ್ಧತೆಯ ಗಡಿಬಿಡಿಯಲ್ಲಿ ನಿರತರಾಗಿದ್ದರೆ, ಮುಂಬರುವ ಪ್ರಳಯತಾಂಡವಕ್ಕೆ ನಡುಗಿ ಶಾಂತಿವಾದಿಗಳು ಮತ್ತು ದಾರ್ಶನಿಕರು ಯುದ್ಧರಹಿತ ಶಾಂತಿಯ ಮಾರ್ಗವನ್ನು ಹುಡುಕುತ್ತ ನಿಸ್ಸಹಾಯರಾಗಿ ಅಂಡಲೆಯುತ್ತಿದ್ದಾರೆ. ರಾಜಕಾರಣಿಯು ಶಾಂತಿರಕ್ಷಣೆಗೆ ತನ್ನ ದಾರಿಯೆ ಅತ್ಯುತ್ತಮವಲ್ಲೆಂಬುದನ್ನು ಅರಿಯಲಾರದಷ್ಟು ದಡ್ಡನೂ ಅಲ್ಲ, ಕುರುಡನೂ ಅಲ್ಲ; ಆದರೆ ನಿರುಪಾಯತೆಯ ನೆವವನ್ನೇ ಮುಂದೊಡ್ಡುತ್ತಾನೆ. "ಎದುರಾಳಿ ಶಸ್ತ್ರಸಂನ್ಯಾಸ ಮಾಡಲಿ, ನಾನೂ ತತ್‌ಕ್ಷಣ ಮಾಡುವೆ" ಎಂದು ಅವನ ವಾದದ ತಾತ್ಪರ್ಯ. ರಾಜಕಾರಣಿಯು ಯುದ್ಧದ ಸುಳಿಯಲ್ಲಿ ಸಿಲುಕಿ ಒದ್ದಾಡುವುದು ಅನಿವಾರ್ಯವೆಂದು ಶಾಂತಿಪ್ರಿಯ ಅರಿತಿದ್ದಾನೆ. ಆದರೆ ಅವನಿಗೆ ಪರಿಣಾಮಕಾರಿಯಾದ ಬೇರೊಂದು ಮಾರ್ಗ್ಗವನ್ನು ತೋರಿಸಲು ತಾನು ಸ್ವತಃ ಅಸಮರ್ಥನಾಗಿದ್ದಾನೆ. ಜೀವನದ ಸಮಸ್ಯೆಗಳ ಮೇಲೆ ಪರಿಣಾಮ ಮಾಡಿ ಅವುಗಳನ್ನು ಬಿಡಿಸಲಾರದ ಮತ್ತು ಅದಕ್ಕೆ ತಕ್ಕ ಕಾರ್ಯಕ್ರಮವಿಲ್ಲದ ದರ್ಶನವು ನಿಜವಾದ ದರ್ಶನವೇ ಅಲ್ಲ. ಈ ರೀತಿ ಇಂದಿನ ರಾಜಕಾರಣಿ ಮತ್ತು ಶಾಂತಿವಾದಿ ಇವರಿಬ್ಬರಿಂದಲೂ ಯುದ್ಧವನ್ನು ತಡೆಗಟ್ಟಿ ಸ್ಥಿರಶಾಂತಿಯನ್ನು ನೆಲೆಗೊಳಿಸುವದು ಸಾಧ್ಯವಾಗಿಲ್ಲ. ಹಿಂಸೆಯನ್ನು ಬೆಳೆಯದಂತೆ ಮಾಡುವ ಹಂಬಲದಿಂದ ಹಿಂಸೆಯನ್ನೇ ಆಶ್ರಯಿಸುವ ದುರಂತಮೂರ್ತಿ ರಾಜಕಾರಣಿ; ತನ್ನ ಸೋದರನ ಅಪಾರ ಮೌಢ್ಯದ ಅರಿವಿದ್ದರೂ ಬೇರೊಂದು ಹಾದಿ ತೋರಿಸಲಾರದ ಕರುಣಾಜನಕ ಪ್ರಾಣಿ ಶಾಂತಿವಾದಿ. ಕಾಜಕಾರಣಿ ಬಯಸಿದರೆ ಯುದ್ಧವನ್ನು ತಡೆಯಬಲ್ಲನೆಂದು ತೋರುತ್ತದೆ. ಆದರೆ ಅದಕ್ಕೆ ಬೇಕಾದ ಸಂಕಲ್ಪಶಕ್ತಿಯೇ ಅವನಿಗಿಲ್ಲ. ಅತ್ತ ಶಾಂತಿವಾದಿಗೆ ಸಂಕಲ್ಪಶಕ್ತಿಯಿದ್ದರೂ ಗುರಿಯನ್ನು ಸಾಧಿಸಲು ಬೇಕಾದ ಅಧಿಕಾರಶಕ್ತಿ ಮಾತ್ರ ಇಲ್ಲ.

ಇಂಥ ತೊಡಕಿನ ಸ್ಥಿತಿಯಲ್ಲಿ ದಿಕ್ಕುತೋರಿಸಬಲ್ಲ ತಾರೆಯೆಂದರೆ ಗಾಂಧೀಜಿ. ದಕ್ಷಿಣ ಆಫ್ರಿಕದಲ್ಲಿನ ಕೆಲ ಆರಂಭ ವರ್ಷಗಳಲ್ಲದೆ ಉಳಿದ ಅವರ ಜೀವನ ಮತ್ತು ಕಾರ್ಯದ ಕ್ಷೇತ್ರವೆಲ್ಲ ಭಾರತವೆ. ಸಣ್ಣ ಸಮಸ್ಯೆಗಳನ್ನೂ ದೊಡ್ಡವುಗಳನ್ನೂ ಅವರು ಎದುರಿಸಬೇಕಾಯಿತು. ನಲುವತ್ತು ಕೋಟಿ ಭಾರತೀಯರನ್ನು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ದಾಸ್ಯದಿಂದ ಬಿಡುಗಡೆ ಮಾಡಲು ಅವರಿಗೆಷ್ಟು ಆಸಕ್ತಿಯಿತ್ತೋ ಅಷ್ಟೇ ಆಸಕ್ತಿ, ತಮ್ಮ ತವರುಹಳ್ಳಿಯ ಆರೋಗ್ಯದ ವಿಷಯದಲ್ಲಿಯೂ ಇತ್ತು. ಅನೇಕ ಸ್ನೇಹಿತರು ಅವರನ್ನು ಒತ್ತಾಯಗೊಳಿಸಿದರು; ಅನೇಕ ದೇಶಗಳು ಅವರನ್ನು ಆಮಂತ್ರಿಸಿದವು. ಆದರೆ ಅವರು ಇಲ್ಲಿಂದ ಕದಲಲಿಲ್ಲ. "ಇದೇ ನನ್ನ ಕಾರ್ಯಕ್ಷೇತ್ರ, ಇಲ್ಲಿ ನಾನು ಕೃತಕೃತ್ಯನಾಗದೆ ಭಾರತದ ಹೊರಗೆ ನನಗೇನೂ ಕೆಲಸವಿಲ್ಲ," ಎಂದರವರು. ಅವರು ಎಲ್ಲಿಯೇ ಕೆಲಸ ಮಾಡುತ್ತಿದ್ದಿರಲಿ, ಯಾವ ಪ್ರಶ್ನೆಗಳಲ್ಲಿಯೇ ಮಗ್ನರಾಗಿರಲಿ, ಇಂದಿನ ಮಾನವಕುಲಕ್ಕೆ ಅತ್ಯಂತ ಮುಖ್ಯ ಪ್ರಶ್ನೆಯಾಗಿರುವ ಯುದ್ಧ ಮತ್ತು ಶಾಂತಿಯ ವಿಚಾರ ಯಾವಾಗಲೂ ಅವರನ್ನು ಸೆಳೆಯುತ್ತಿತ್ತು. ಅವರ ದುರಂತ ಮರಣದ ಮರುದಿನವೇ ಜಗತ್ತಿನ ಬೇರೆ ಬೇರೆ ಮೂಲೆಗಳಿಂದ ಈ ಮಹಾಶಾಂತಿಮೂರ್ತಿಗೆ ಬಂದ ಸ್ವಯಂಪ್ರೇರಿತ ಪ್ರಶಂಸೆಗಳಿಂದಲೇ ಅವರ ಜಾಗತಿಕ ಮಹತ್ವ ವ್ಯಕ್ತವಾಗುತ್ತದೆ. ಸಮಸ್ಯೆಗಳ ಸಮಸ್ಯೆಯಾದ ಈ ಮಹಾಸಮಸ್ಯೆಯ ಪರಿಹಾರಕ್ಕಾಗಿ ಗಾಂಧೀಜಿಯ 'ಕೊಡುಗೆ'ಯೇನೆಂಬುದನ್ನು ತೋರಿಸುವುದೇ ಈ ನನ್ನ ಚಿಕ್ಕ ಲೇಖದ ಉದ್ದೇಶ.

### ಅಹಿಂಸೆಯ ವ್ಯಾಪ್ತಿ

ಗಾಂಧೀಜಿಯವರ ಜೀವನಕ್ಕೆ ಸ್ಫೂರ್ತಿಕೊಟ್ಟ ಏಕೈಕ ಮಹತ್ತರ ಆಸೆಯೆಂದರೆ ವಿಶ್ವದ ಶಾಂತಿಗೂ ಮಾನವಕಲ್ಯಾಣಸಾಧನೆಗೂ ಒಂದು ಪ್ರಾಯೋಗಿಕ ಅಹಿಂಸಾಮಾರ್ಗವನ್ನು ಕಂಡುಹಿಡಿಯುವುದೇ ಆಗಿತ್ತು. ಬಾಲ್ಯದಿಂದಲೂ ಅಹಿಂಸಾಮಾರ್ಗವೊಂದರಿಂದಲೇ ಸತ್ಯಾನ್ವೇಷಣೆ ಮಾಡುವುದರಲ್ಲಿ ಅವರು ನಿರತರಾಗಿದ್ದರು. ಹಿಂಸೆಯ ಸ್ವಲ್ಪ ಸಂಪರ್ಕವಿದ್ದರೂ ಅವರು ಸತ್ಯವನ್ನು ಕೂಡ ಸಂಶಯದಿಂದ ನೋಡುತ್ತಿದ್ದರು. ಅವರು ಈ ಪ್ರಪಂಚದಲ್ಲಿ ಏನನ್ನು ಸಹಿಸಿದರೂ ಹಿಂಸೆಯನ್ನು ಮಾತ್ರ ಯಾವ ರೂಪದಲ್ಲಿಯೂ ಸಹಿಸುತ್ತಿರಲಿಲ್ಲ-

ರಕ್ತಪಾತ ಮಾತ್ರವೇ ಅವರಿಗೆ ಹಿಂಸೆಯಾಗಿರಲಿಲ್ಲ. ದೈಹಿಕ, ಮಾನಸಿಕ, ನೈತಿಕ ಅಥವಾ ಧಾರ್ಮಿಕ ವ್ಯಥೆಯೂ ಕಾಯೇನ, ವಾಚಾ, ಮನಸಾ ಆದರೂ ಗಾಂಧೀಜಿ ಅದನ್ನು ಹಿಂಸೆಯೆಂದೇ ಭಾವಿಸುತ್ತಿದ್ದರು. ಈ ದೃಷ್ಟಿಯಲ್ಲಿ ಪ್ರತಿಯೊಂದನ್ನೂ ಪರೀಕ್ಷಿಸಿ, ಹಿಂಸೆಯ ಛಾಯೆಯಿದ್ದುದನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಲವಲೇಶವೂ ಹಿಂಜರಿಯದೆ ಅವರು ನಿಷೇಧಿಸುತ್ತಿದ್ದರು. ಅವರ ಭಾವನೆಯಲ್ಲಿ ಅಹಿಂಸೆಯೆಂದರೆ, ಯಾವ ಪ್ರಾಣಿಗೂ ದೇಹದಿಂದಾಗಲಿ, ಮಾತಿನಿಂದಾಗಲಿ, ಮನಸಿನಿಂದಾಗಲಿ ನೋವು ಮಾಡದಿರುವುದು. ಸರ್ವರಿಗೂ ಕ್ಷೇಮ ಮತ್ತು ಸುಖಗಳನ್ನು ಸಾಧಿಸಿಕೊಡುವ ಪ್ರೇಮ, ತ್ಯಾಗ ಮತ್ತು ಪ್ರತ್ಯಕ್ಷ ಕಾರ್ಯ, ಇವು ಅವರ ಜೀವನದ ಧ್ಯೇಯಗಳಾಗಿದ್ದವು. "ತನ್ನಂತೆ ಪರರ ಬಗೆ" ಎಂದರೆ ಸಾಲದು, "ಇತರರಿಗೆ ಹೆಚ್ಚಿನ ಸೇವೆ ಸಲ್ಲಿಸು" ಎಂಬುದು ಅವರ ಸಂದೇಶವಾಗಿತ್ತು. "ನಿನ್ನ ನೆರೆಯವನನ್ನು ಪ್ರೀತಿಸು" ಎನ್ನುವ ಬದಲು "ಸಮಸ್ತ ಜೀವಿಗಳಲ್ಲೂ ಪ್ರೇಮವಿಡು" ಎಂದು ಅವರು ಹೇಳುತ್ತಿದ್ದರು. ಇದೇ ರೀತಿ, "ಪರಸ್ತ್ರೀಯನ್ನು ಕೆಟ್ಟ ಕಣ್ಣಿನಿಂದ ನೋಡಬೇಡ" ಎಂಬ ಮೋಜೆಸನ

**ಗಾಂಧೀಜಿಯನ್ನು ನಾವು ನಮ್ಮ ರಾಷ್ಟ್ರಪಿತನೆಂದು ಗೌರವಿಸುತ್ತಿದ್ದರೂ ಅವರ ಜೀವನಸಂದೇಶ ದೇಶಾತೀತವಾಗಿದೆ. ನಾನಾ ಘರ್ಷಣೆಗಳಿಂದ ವಿನಾಶದ ಗರ್ತದ ಬಳಿ ನಿಂತಿರುವ ಮಾನವಕೋಟಿಗೆ ಅವರು ತೋರಿದುದೊಂದೇ ಉದ್ಧಾರಪಥ.**

ಮಾತಿಗಿಂತ, "ಪರಸ್ತ್ರೀಯನ್ನು ದುರ್ಭಾವನೆಯಿಂದ ಬಗೆಯಬೇಡ'' ಎಂಬ ಕ್ರಿಸ್ತವಾಣಿಯು ಒಂದು ಹೆಜ್ಜೆ ಮುಂದಾದರೆ, "ಕೇಡನ್ನು ಪ್ರತಿಭಟಸಬೇಡ'' ಎಂಬ ಕ್ರಿಸ್ತವಾಣಿಗಿಂತ, "ಕೇಡನ್ನು ಪ್ರತಿಭಟಸಲೇಬೇಕು'', "ಕೇಡನ್ನು ಒಳ್ಳೆಯತನದಿಂದ ವಿರೋಧಿಸು'' ಎಂಬ ಗಾಂಧೀಜಿಯ ವಾಣಿ ಮತ್ತೂ ಮುಂದಿನ ಹೆಜ್ಜೆ.

**ಹಿಂಸೆಗೆ ಮನುಷ್ಯ ಅನಧಿಕಾರಿ**

ಗಾಂಧೀಜಿ ತಮ್ಮೊಳಗಿನ ದುಷ್ಪ್ರವೃತ್ತಿಗಳನ್ನು ಹತ್ತಿಕ್ಕಿ ಅವುಗಳಿಂದ ಮುಕ್ತರಾಗಿ ತಮ್ಮ ಸ್ವಂತ ಪ್ರಶ್ನೆಯನ್ನೇನೋ ಬಿಡಿಸಿಕೊಂಡರು. ಆದರೆ ಅವರು ಅಷ್ಟಕ್ಕೇ ಬಿಡಲಿಲ್ಲ. ಮಾನವಸಮಾಜವನ್ನು ತ್ರಿಕರಣಾತ್ಮಕ ಹಿಂಸೆಯ ದಾಸ್ಯದಿಂದ ಮುಕ್ತಗೊಳಿಸಲು ಅವರು ಅದನ್ನೇ ಒಂದು ಸಾಧನವನ್ನಾಗಿ ಮಾಡಿಕೊಂಡರು. ಅವರ ದೃಷ್ಟಿಯಲ್ಲಿ ಹಿಂಸೆಮಾತ್ರವಲ್ಲದೆ ಗೌಪ್ಯ ಮುಂತಾದವುಗಳೂ ಮಹಾಪರಾಧಗಳಾಗುತ್ತಿದ್ದವು. ಏಕೆಂದರೆ ಅವು ಅಹಿಂಸೆಗೆ ಪೋಷಕವಾದವುಗಳಲ್ಲ. ಹಿಂಸೆಯ ಉನ್ಮತ್ತ ವಿನಾಶನೀತಿಗೆ ಅನುಕೂಲವಾದುದೆಲ್ಲ ಅದರ ಸಹಕಾರಿಯೆ. ಆದ್ದರಿಂದ ಅವುಗಳನ್ನು ತ್ಯಜಿಸುವುದಲ್ಲದೆ ವಿರೋಧಿಸಲೂ ಬೇಕು. ದುಷ್ಟನಿಗ್ರಹಕ್ಕೆ ಹಿಂಸೆಯೊಂದೇ ಮಾರ್ಗವಾಗಿದ್ದರೆ, ಅದನ್ನು ಉಪಯೋಗಿಸಲು ಪೂರ್ಣ ನಿರ್ಲಿಪ್ತನೂ ನಿರಹಂಕಾರನೂ ಆದ ದೇವರೊಬ್ಬನಿಗೆ ಮಾತ್ರ ಅಧಿಕಾರವುಂಟು.

> ಯಸ್ಯ ನಾಹಂಕೃತೋ ಭಾವೋ
> ಬುದ್ಧಿರ್ಯಸ್ಯ ನ ಲಿಪ್ಯತೇ।
> ಹತ್ವಾಽಪಿ ಸ ಇಮಾಂಲ್ಲೋಕಾನ್
> ನ ಹಂತಿ ನ ನಿಬಧ್ಯತೇ॥

(ಗೀತೆ, ೧೮-೧೭)

ಹಿಂಸೆಯನ್ನು ಪ್ರಯೋಗಿಸಲು ಮತ್ತಾರು ಪ್ರಯತ್ನಿಸಿದರೂ ಅದು ಅಪಾಯಕರ ಮಾರ್ಗದಲ್ಲಿ ನಡೆದಂತೆಯೇ ಸರಿ. ಏಕೆಂದರೆ ಮಾನವನು ಎಷ್ಟೇ ಶ್ರೇಷ್ಠನಿರಲಿ, ಹಿಂಸೆಯನ್ನು ಪ್ರಯೋಗಿಸಲು ಬೇಕಾದ ಯೋಗ್ಯತೆ ಆತನಿಗಿರಲಾರದು. ಅಹಂಕಾರರಹಿತನಾಗಿ, ಪೂರ್ಣ ನಿರ್ಲಿಪ್ತಭಾವದ ಆದರ್ಶವನ್ನು ಸಾಧಿಸಲು ಮನುಷ್ಯನು ಪ್ರಯತ್ನಪಡಬಹುದು. ಆದರೆ ಅದರಲ್ಲಿ ಅವನು ಪೂರ್ಣ ಸಿದ್ಧಿಯನ್ನು ಪಡೆಯಲಾರ. ಹಿಂಸೆಯನ್ನು ಉಪಯೋಗಿಸಲು ಪ್ರವೃತ್ತನಾಗುವ ಮೊದಲು ಮನುಷ್ಯನು ಈ ಯೋಗ್ಯತೆಯನ್ನು ಸಂಪಾದಿಸಿಕೊಳ್ಳುವದು ಅಗತ್ಯ. ಹಿಂಸೆಯಿಂದ ಮತ್ತಷ್ಟು ಹಿಂಸೆ ಹುಟ್ಟುವದು ಅನಿವಾರ್ಯವೆಂದು ಗಾಂಧೀಜಿಯವರು ಮನಗಂಡಿದ್ದರು. ಆದ್ದರಿಂದ ಅಷ್ಟೇ ಪರಿಣಾಮಕಾರಿಯಾದ ನೈತಿಕ ಸಾಧನವೊಂದನ್ನು ಕಂಡುಹಿಡಿಯಲು ಅವರು ಬಹಳ ಕಾತರರಾಗಿದ್ದರು. ಸಾಧ್ಯದಷ್ಟೇ ಸಾಧನವೂ ಮುಖ್ಯ, ಅಥವಾ ಸಾಧ್ಯಕ್ಕಿಂತಲೂ ಸಾಧನವೇ ಮುಖ್ಯ, ಎನ್ನುವುದು ಗಾಂಧೀಜಿಯವರ ಮತ. ತಮ್ಮ ಅನುಯಾಯಿಗಳ ಹಿಂಸಾಚಾರದಿಂದ ಅವರ ಮನನೊಂದಂತೆ, ಅವರ ಕಾರ್ಯಕ್ರಮಗಳು ಕೆಟ್ಟಂತೆ ಮತ್ತಾವುದರಿಂದಲೂ ಆಗಿಲ್ಲ. ಎದುರಾಳಿಗಳ ಹಿಂಸೆಗೆ ಅವರೆಂದೂ ಬೆದರಲಿಲ್ಲ. ಎಷ್ಟೋ ವೇಳೆ ಅದನ್ನು ಅವರು ಸ್ವಾಗತಿಸಿದ್ದರು. ಆದರೆ ತಮ್ಮವರೇ ಹಿಂಸೆಯಲ್ಲಿ ತೊಡಗಿದಾಗ ಮಾತ್ರ ಅವರಿಗೆ ಆ ಹಿಂಸೆ ವಿಷಪ್ರಾಯವಾಗಿ ಕಾಣುತ್ತಿತ್ತು. "ಸಾಧನವು ಶುದ್ಧವಿರುವಂತೆ ಎಚ್ಚರವಿರಲಿ, ಸಾಧ್ಯ ತನಗೆ ತಾನೇ ಸರಿಹೋಗುತ್ತದೆ" ಎಂದು ಅವರು ಸಾರುತ್ತಿದ್ದರು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂದು ಗೀತೋಕ್ತಿ. "ಅಹಿಂಸೆಯಿಂದ ಕದಲಬೇಡ, ಸತ್ಯಕ್ಕೆ ಚ್ಯುತಿಯಿಲ್ಲ" ಎಂದು ಗಾಂಧೀಜಿಯವರ ಉಪದೇಶ. ಈ ಮಹಾ ಆದರ್ಶದಿಂದ ಅವರು ಕೂದಲೆಳೆಯಷ್ಟು ಕದಲಲಿಲ್ಲ. ಎಷ್ಟೋ ವೇಳೆ ಅವರು ಮುಂಗಾಣದಾದುದುಂಟು. ಆದರೆ ಅವರು ಆತ್ಮವಿಶ್ವಾಸವನ್ನು ಎಂದಿಗೂ ಕಳೆದುಕೊಳ್ಳಲಿಲ್ಲ. ಪ್ರತಿಯೊಂದು ಸಮಸ್ಯೆಗೂ ತತ್ಕಾಲದಲ್ಲಿ ಪರಿಹಾರವನ್ನು ಕಲ್ಪಿಸಲು ತಾವು ಅಶಕ್ತರೆಂದು ಒಪ್ಪಿದರೂ ಪ್ರತಿಯೊಂದು ಸಮಸ್ಯೆಗೂ ಅಹಿಂಸಾತ್ಮಕ ಪರಿಹಾರವಿದ್ದೇ ಇದೆಯೆಂದು ಅವರು ಪದೇಪದೇ ಹೇಳುತ್ತಿದ್ದರು.

**ದೌರ್ಜನ್ಯಕ್ಕೆ ತಲೆ ಬಾಗಕೂಡದು**

ಅವರ ಇನ್ನೊಂದು ಉಪದೇಶವೆಂದರೆ, "ದೌರ್ಜನ್ಯವನ್ನು ಎದುರಿಸು ಅದರಲ್ಲೆಂದಿಗೂ ಎದೆಗುಂದಬೇಡ,'' ಎಂದು ಅಹಿಂಸೆಯಿಂದ ಎದುರಿಸುವುದೇ ಅತ್ಯಂತ ಉದಾತ್ತ, ಉತ್ತಮ ಮತ್ತು ನೈತಿಕ ದೃಷ್ಟಿಯಿಂದ ಶ್ರೇಷ್ಠ ಎಂದು ಅವರು. ಹೇಳುತ್ತಿದ್ದರು, ಆದರೆ ಯಾವ ಕಾರಣದಿಂದಲಾದರೂ ಅಹಿಂಸೆಯನ್ನು ಪ್ರಯೋಗಿಸುವ ಸಾಮರ್ಥ್ಯವಿಲ್ಲದಿದ್ದರೆ (ಅಹಿಂಸೆಯು ಅವರ ದೃಷ್ಟಿಯಲ್ಲಿ ವೀರನ ವಜ್ರಾಯುಧ) ಹಿಂಸೆಯಿಂದಾದರೂ ಅಸತ್ತನ್ನು ಎದುರಿಸಲೇಬೇಕು. ಅಹಿಂಸಾತ್ಮಕ ವಿರೋಧ ಸಾಧ್ಯವಿಲ್ಲದಿದ್ದರೆ ಹಿಂಸಾತ್ಮಕ ಪ್ರತಿಭಟನೆಯಾದರೂ ಲೇಸು; ಹೊರತು ಹೇಡಿತನ ಎಂದಿಗೂ ಸಲ್ಲದು. ದುಷ್ಟತನದ ಮುಂದೆ ಅಂಜಿಕೆ, ಅಥವಾ ಅದರೊಂದಿಗೆ ಕೂಡಿನಡೆಯುವುದು, ಇವಕ್ಕೆ ಸತ್ಯಾಗ್ರಹಿಯ ನಿಯಮಾವಳಿಯಲ್ಲಿ ಸ್ಥಾನವೇ ಇಲ್ಲ. ಸೋಲೆಂಬುದುಕ್ಕೆ ಅವನ ನಿಘಂಟಿನಲ್ಲಿ ಎಡೆಯಿಲ್ಲ. ಏಕೆಂದರೆ ತತ್ಕಾಲದಲ್ಲಿ ಸೋಲಾದರೂ ಅದು ಮುಂದಿನ ಗೆಲವಿನ ಮೆಟ್ಟಲು; ಮತ್ತು ಸಾವೇ ಬಂದರೂ ಅದು ಅಹಿಂಸೆಯ ಗೆಲವೆಂದೇ ಗಣಿಸಬೇಕು. ಹಿಂಸೆಗಾದರೂ ಗೆಲವು ಸಿದ್ಧ ಎಂದು ಭರವಸೆಯೇನು? ನಿಸ್ಸಹಾಯರಾದಾಗ ಅವರೂ ಸಾವಿನಲ್ಲೇ ಸಮಾಧಾನ ಹೊಂದುತ್ತಾರೆ. ಆದರೆ ಸತ್ಯಾಗ್ರಹಿಯು ಸಂತೋಷದಿಂದ ಸಾವನ್ನು ಅಪ್ಪಿ ಅದೇ ಲಾಭವೆಂದು ಬಗೆಯುತ್ತಾನೆ. ಇದೇ ಅವನಿಗೂ ಇವನಿಗೂ ಇರುವ ವ್ಯತ್ಯಾಸ.

ಪ್ರಪಂಚಕ್ಕೆ ಗಾಂಧೀಜಿಯ ಮೂರನೆ ಕೊಡುಗೆಯೆಂದರೆ, ಮಾನವಕುಲದಲ್ಲಿ, ಕಾರ್ಯಕ್ಷೇತ್ರಗಳಲ್ಲಿ ಸಾಮಾಜಿಕ ಆರ್ಥಿಕ

ಮತ್ತು ರಾಜಕೀಯ ಅನ್ಯಾಯ ಮತ್ತು ದೌರ್ಜನ್ಯಗಳನ್ನು ನಿರೋಧಿಸಲು ಅಹಿಂಸಾಶಕ್ತಿಗಳನ್ನು ಸಂಘಟಿಸುವ ತಂತ್ರ. ಯಾವುದೇ ದೌರ್ಜನ್ಯ, ದಬ್ಬಾಳಿಕೆ, ಅನ್ಯಾಯ ಮತ್ತು ಆಕ್ರಮಣನೀತಿಯನ್ನು ಅದು ನಮ್ಮವರದಿರಲಿ, ವಿದೇಶಿಯರದಿರಲಿ— ಅಹಿಂಸಾತ್ಮಕ ಶಸ್ತ್ರಗಳಿಂದಲೇ ಪ್ರತಿಭಟಿಸಬೇಕು. ಜಗತ್ತಿನಿಂದ ಅವುಗಳನ್ನು ನಿಶೇಷವಾಗಿ ಹೊರಗಟ್ಟಬೇಕಾದರೆ ಅದೇ ಪರಮೋಪಾಯ. ಇಲ್ಲವಾದರೆ ಅವು ರಕ್ತಬೀಜದಂತೆ ಪುನಃ ತಲೆ ಎತ್ತುತ್ತವೆ. ಇಲ್ಲಿ ಅವರ ಸಲಹೆ 'ಇಷ್ಟೆ ಆತ್ಮನಿರೀಕ್ಷಣೆ ಮಾಡಿಕೊಳ್ಳಿರಿ. ನಿಮ್ಮೊಳಗಿನ ದುರ್ಬುದ್ಧಿಯನ್ನು ತೊಡೆದು ಹಾಕಿರಿ" ಮತ್ತು "ನಿಷ್ಠುರವಾದ ಹಿಂಸೆಯ ಎದುರಿನಲ್ಲಿಯೂ ಅಹಿಂಸಾತ್ಮಕ ಶಕ್ತಿಗಳನ್ನೇ ಸಜ್ಜುಗೊಳಿಸಿರಿ!! ಈ ವಿಷಯದಲ್ಲಿ ಅವರು ಸಮಸ್ಯೆಯ ಮೂಲವನ್ನೇ ತಡಕಿದರು ಮತ್ತು ಅತಿ ಪ್ರಬಲ ಹಿಂಸಾತ್ಮಕ ಶಕ್ತಿಯನ್ನು ಕೂಡ ಎದುರಿಸಲು, ಒಂದು ದೊಡ್ಡ ರಾಷ್ಟ್ರವನ್ನು ಕೂಡ ಸತತ ಪ್ರಯತ್ನದಿಂದ ತಕ್ಕಮಟ್ಟಿಗಾದರೂ ಅಹಿಂಸಾತ್ಮಕವಾಗಿ ಅಣಿಗೊಳಿಸಲು ಸಾಧ್ಯವಿದೆಯೆಂದು ಇಡಿ ಜಗತ್ತಿಗೆ ತೋರಿಸಿಕೊಟ್ಟರು. ಈ ಬಗೆಯ ಪ್ರತೀಕಾರಕ್ಕೆ ನಿರ್ಭಯವೇ ತಳಹದಿ ಮತ್ತು ಅಂಥ ಚಳವಳಿಯ ನಾಯಕತ್ವಕ್ಕೆ ಸೇವೆ ಮತ್ತು ತ್ಯಾಗಗಳೇ ಜೀವಾಳ.

### ಮಾನವ ಕುಲದ ಕರ್ತವ್ಯ

ಎಲ್ಲ ಕಾರ್ಯಕ್ಷೇತ್ರಗಳಲ್ಲಿಯೂ ಈ ಆಯುಧವನ್ನು ಪ್ರಯೋಗಿಸಲು ಗಾಂಧೀಜಿಗೆ ಕಾಲವಾಗಲಿ ಅವಕಾಶವಾಗಲಿ ಇರಲಿಲ್ಲ. ಆದರೆ ಅವರು ಬಿಟ್ಟುಹೋಗಿರುವ ಅಪಾರ ಅಸ್ತ್ರಾಗಾರದಿಂದ ಆಯ್ದುಕೊಂಡು ಅವರ ಪ್ರಯೋಗಗಳನ್ನು ಜೀವನದ ಎಲ್ಲ ಕ್ಷೇತ್ರಗಳಿಗೂ ಹೊಂದಿಸಿಕೊಂಡು ಮುಂದುವರಿಸುವದು ಮಾನವಕುಲಕ್ಕೆ ಸೇರಿದ್ದು. ಆಕ್ರಮಣನೀತಿಯ ಸರ್ವಥಾ ತ್ಯಾಗ; ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಉಳಿದೆಲ್ಲ ಕ್ಷೇತ್ರಗಳಲ್ಲಿ ಅಧಿಕಾರದ ಪೂರ್ಣ ವಿಕೇಂದ್ರೀಕರಣ,—ಇವೇ ಅವರು ಮಾನವ ಕುಲಕ್ಕೆ ಕೊಟ್ಟ ಸಂದೇಶದ ತಿರುಳು. ಈ ಸಂದೇಶದ ಮೂಲವೂ ಸ್ಫೂರ್ತಿಯೂ ಇರುವದು ಸರ್ವಭೂತಹಿತಾಕಾಂಕ್ಷೆಯಲ್ಲಿ; ಸಮಾಜದೊಂದಿಗೆ ವ್ಯಕ್ತಿಯ ತಾದಾತ್ಮ್ಯದಲ್ಲಿ, ವಿಶ್ವದ ಪ್ರತಿಯೊಂದು ಜೀವಿಯ ಜೀವನ ಮತ್ತು ಭಾವನೆಗಳೊಡನೆ ಸಾಮರಸ್ಯ ಹೊಂದುವುದರಲ್ಲಿ. ಅಹಿಂಸೆಯು ಇದರ ಪ್ರತಿಫಲ. ಸಮಸ್ತ ಮಾನವ ಕುಲವನ್ನು ಎಲ್ಲ ದೌರ್ಜನ್ಯ-ಹಿಂಸೆಗಳ ಬಂಧನದಿಂದ ಬಿಡುಗಡೆ ಮಾಡಬೇಕೆಂಬ ಹಂಬಲು, ಈ ಪ್ರಪಂಚದ ಸಕಲ ಜೀವಿಗಳ ಹೃದಯ ನಾಡಿಯೊಂದಿಗೆ ಮಿಡಿಯುವ ಐಕ್ಯಭಾವನೆಯ ಸಾಧನ. ಈ ಜಗತ್ತಿನಲ್ಲಿ ನಿಜವಾದ ಶಾಂತಿಯನ್ನು ನೆಲೆಗೊಳಿಸಬಯಸುವವರು ಈ ಐಕ್ಯಭಾವದ ಅನುಭವದಿಂದ ಪ್ರಾರಂಭಿಸಬೇಕು. ಅದನ್ನು ಬೆಳೆಸಬೇಕು. ಇಲ್ಲದಿದ್ದರೆ ಅವರ ಪ್ರಯತ್ನವೆಲ್ಲ ಮಳಲಿನಿಂದ ಮನೆ ಕಟ್ಟಿದಂತೆಯೆ. ಗಾಂಧೀಜಿಯ ರಚನಾತ್ಮಕ ಕಾರ್ಯಗಳೆಲ್ಲ ಈ ಸಮಾಜಪ್ರೇಮದಿಂದ ಪ್ರೇರಿತವಾದುವು ಮತ್ತು ಅಹಿಂಸಾತ್ಮಕರೀತಿಯಲ್ಲಿ ಕಟ್ಟಿದವು. ಅವೆಲ್ಲ ಸತ್ಯಾಗ್ರಹ ಜೀವನದ ಅಂಗಗಳು.

ಗಾಂಧೀಜಿಯನ್ನು ಒಬ್ಬ ಧಾರ್ಮಿಕ ಕ್ರಾಂತಿಕಾರನೆಂದು ಕರೆಯಬಹುದು. ಅವರ ದೃಷ್ಟಿಯಲ್ಲಿ ಸಮಾಜದ ಪ್ರತಿಯೊಬ್ಬ ವ್ಯಕ್ತಿ ಮತ್ತು ಸಂಗಡವೂ ಸ್ವಾವಲಂಬಿಯಾಗಿರಬೇಕು, ಸ್ವಾಧೀನವಾಗಿರಬೇಕು. ಆದರೆ ಅದು ಬಹುದೂರದ ಮಾತಾಗಿತ್ತು. ವ್ಯವಹಾರಜ್ಞ ದಾರ್ಶನಿಕನಂತೆ ಅವರು ಒಡನೆ ಅಪೇಕ್ಷಿಸುತ್ತಿದ್ದುದು ಪ್ರಪಂಚದ ಸ್ವತಂತ್ರ ರಾಷ್ಟ್ರಗಳ ಒಂದು ಸಂಯುಕ್ತರಾಜ್ಯ ಮತ್ತು ಸರ್ವಮಾನ್ಯ ವಿಶ್ವ ನಾಗರಿಕತ್ವ.

ಅವರ ಚರಿತ್ರೆಯನ್ನು ಅವಲೋಕಿಸಿದರೆ ಶಾಂತಿಯೋಧರಲ್ಲಿ ಅವರಷ್ಟು ಧೀರರೂ ದಕ್ಷರೂ ಮತ್ತೊಬ್ಬರಿಲ್ಲವೆಂದು ವ್ಯಕ್ತವಾಗುತ್ತದೆ. ಅಂತರ್ಬಾಹ್ಯ, ವೈಯಕ್ತಿಕ, ಸಾಮಾಜಿಕ, ದುಷ್ಟಸತ್ವಗಳೊಡನೆ ಅವರು ಸತತವಾಗಿ ಹೋರಾಡಿದರು. ದೌರ್ಜನ್ಯವನ್ನು ಸೌಜನ್ಯದಿಂದ ಪ್ರತಿಭಟಿಸುವುದು ಅವರ ಜೀವನದ ಉಸಿರು. ಅಲ್ಲದೆ, ದೌರ್ಜನ್ಯಕ್ಕೆ ಒಪ್ಪಿಕೊಳ್ಳುವುದು, ಸಹಾಯ ಮಾಡುವುದು ಅಥವಾ ಸಮರ್ಥಿಸುವುದೆಂದರೆ ಅವರ ದೃಷ್ಟಿಯಲ್ಲಿ ಆತ್ಮಹತ್ಯೆ. ತಮ್ಮ ಜೀವನ ಕಾಲದಲ್ಲಿ ಅವರೂ ಅವರ ಶಿಷ್ಯವರ್ಗದವರೂ ಅವರ ಸಂದೇಶವನ್ನು ಸಾರಿ ಸಾಧ್ಯವಾದಷ್ಟು ಅನುಷ್ಠಾನಕ್ಕೆ ತಂದಿದ್ದರೂ ಅದನ್ನು ಇನ್ನೂ ಪೂರ್ಣವಾಗಿ ವಿಕಾಸಗೊಳಿಸಬೇಕಾಗಿದೆ. ಅದನ್ನು ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಕ್ಷೇತ್ರಗಳಲ್ಲಿ ಆಚರಣೆಗೆ ತರಬೇಕಾಗಿದೆ.

---

## ತೇಜಸ್ತೇಜಿ

ಪ್ರೋದ್ಯತ್ ಕನತ್‌ಕನಕ ಕಾಂತಿಯಿಂ ಕಂಗೊಳಿಪ,
ಸಪ್ತಾರ್ಚಿಸಂಜಾತ ದಿವ್ಯ ತೇಜಸ್ತೇಜಿ ;
ಸ್ವರ್ಗೀಯ ಶಾಂತಿಯಿಂದುದಯಿಸಿದ ಬಲ್ಮಿಂಚೆ ;
ಪ್ರಾಲೇಯಪರ್ವತೋನ್ನತಿಗೆ ಸರಿಮಿಗಿಲೆನಿಪ
ಗಂಭೀರಸಂಕಲ್ಪಸಂಸ್ಫೂರ್ತಿಯಿಂ ನೀನು
ನಿನ್ನ ಖುರಹತಿಯಿಂದ ವಿಸ್ಮೃತಿಮಹೋದರವ
ತೊತ್ತಳಂದುಳಿದುಳಿದು, ನುಗ್ಗುನುಗ್ಗಾಗೊಡೆದು,
ಕಾಲಗಹನಾಂತರದ ಕತ್ತಲೆಯ ಕಡೆಗೊಳಿಸಿ,
ಎಚ್ಚರರಿಯದ ಗಡಸು ಕಲ್ನಿದ್ದೆಯಿಡಿಕಿರಿದು
ಮೃತ್ಯುಮೌನವನಾಳ್ದ ದೇಶನುಂ ಕೊಡಕೊಡಹಿ,
ಬಾಳಸೆರೆಗವಿಗಳಾಚೆಗೆ ಕೋಟಿಸಂಖ್ಯೆಯಲಿ
ನಕ್ಷತ್ರಲೋಕಂಗಳಂ ಸಮೆದು ಬೆಳಗಿಸುವೆ
ಉರಿ ಎಂ ಗರಿಗಳ ಸುರಿವ ಓ ವೇಗವೈಭವವೆ.
ಜಡದ ಶೃಂಖಲೆಗಳನು ಅಪ್ಪಳಿಸಿ ಮುರಿದೊಗೆದು
ವಿರಲಸದಳಮೆನಿಪ ಆತ್ಮೋನ್ನತಿಯ ಶಿಖರಿ—
ಶಿಖರಂಬರಂ ನೆಗೆವ ನಿನ್ನದ್ಭುತಾಪಾರ
ಶಕ್ತಿಯಿಂ ನೀಡೆನಗೆ ಮುಕ್ತಿಯ ಮಹಾಸೂರ್ಯ-
ಮಂಡಲದಿ ನಾನೆ ನಾನಾಗಿರಲು.

( ರೊಮೆನ್ನರು ಶ್ರೀ ಅರವಿಂದರನ್ನುದ್ದೇಶಿಸಿ ಬರೆದ ಕವನದ ಅನುವಾದ) —ಗಂಗಪ್ಪ ವಾಲಿ

# ಇಂಡಿಯದ ಹೊಸ ರಾಜ್ಯನಿಬಂಧನೆ

## ಅದರ ಸ್ವರೂಪ, ಅದು ಹೊರಿಸುವ ಕರ್ತವ್ಯಭಾರ

:: ಶ್ರೀ. ಡಿ. ವಿ. ಗುಂಡಪ್ಪನವರಿಂದ

ಸ್ವತಂತ್ರ ಭಾರತಕ್ಕಾಗಿ ಈಗ ದೆಹಲಿಯಲ್ಲಿ ಒಂದು ಹೊಸ ರಾಜ್ಯನಿಬಂಧನೆಯು ( Constitution ) ಶಾಸನ ತಯಾರಾಗುತ್ತಿದೆಯಷ್ಟೆ ? ರಾಜ್ಯವೆಂದರೆ ನಿಬಂಧನೆ ಅಥವಾ ಕಟ್ಟುಪಾಡು. ಒಂದು ಗೊತ್ತಾದ ಅಂಗಾಂಗ ವ್ಯವಸ್ಥೆ ಇಲ್ಲದಿದ್ದಲ್ಲಿ ರಾಜ್ಯವೆಂಬ ಸಂಸ್ಥೆ ಒಂದು ಕ್ಷಣವೂ ಇರಲಾರದು. ನಮ್ಮ ನೂತನ ರಾಜ್ಯಕ್ಕೆ ಒಂದು ವ್ಯವಸ್ಥೆ ಹೀಗೆ ಅವಶ್ಯ ಸಾಧನವಾಗಿರುವುದರಿಂದ, ದೆಹಲಿಯಲ್ಲಿ ತಯಾರಾಗುತ್ತಿರುವ ಮೂಲಬಂಧ ಶಾಸನವನ್ನು ಎಲ್ಲರೂ ತಾತ್ಕಾಲಿಕವಾಗಿಯಾದರೂ ಅಂಗೀಕರಿಸಲೇಬೇಕಾಗಿದೆ.

### ನಿಬಂಧನೆ ಎರಡು ವಿಧ

ರಾಜ್ಯನಿಬಂಧನೆಗಳು ಲೋಕದಲ್ಲಿ ಸಾಮಾನ್ಯವಾಗಿ ಎರಡು ತೆರನಾಗಿವೆ: ಕೆಲವು ಸಂಪ್ರದಾಯಸಿದ್ಧವಾದವು. ಕೆಲವು ವಿಚಾರಸಿದ್ಧವಾದವು. ಸಂಪ್ರದಾಯಸಿದ್ಧವಾದ ರಾಜ್ಯನಿಬಂಧನೆಗಳು ಬಹುಕಾಲದ ರೂಢಿಯ ಆಧಾರದ ಮೇಲೆ ಬೆಳೆದುಕೊಂಡು ಬಂದಿರತಕ್ಕವು. ಅವು ಲಿಖಿತವಾದ ಶಾಸನ ಗ್ರಂಥರೂಪದಲ್ಲಿಲ್ಲ. ಇಂಥ ಅಲಿಖಿತ ರಾಜ್ಯನಿಬಂಧನೆಗೆ ಇಂಗ್ಲೆಂಡಿನ ರಾಜ್ಯ ವ್ಯವಸ್ಥೆ ಅತ್ಯಂತ ಪ್ರಸಿದ್ಧವಾದ ದೃಷ್ಟಾಂತ. ಅನೇಕ ಶತಮಾನಗಳಿಂದ ಆ ದೇಶದಲ್ಲಿ ನಡೆದುಕೊಂಡು ಬಂದಿರುವ ಮಾಮೂಲುಗಳನ್ನೂ ಆ ಮಾಮೂಲುಗಳ ಕಾರಣಗಳನ್ನೂ ತಾತ್ಪರ್ಯಗಳನ್ನೂ ವಿವರಿಸುವ ಚರಿತ್ರೆಯ ಗ್ರಂಥಗಳೂ ವ್ಯಾಖ್ಯಾನಗ್ರಂಥಗಳೂ ಹತ್ತಾರಿವೆ. ಆದರೆ ಒಂದು ಪ್ರಮಾಣಭೂತವಾದ ಮೂಲಬಂಧ ಶಾಸನವನ್ನು ಇಂಗ್ಲೆಂಡು ದೇಶವು ಬರೆದಿಟ್ಟುಕೊಂಡಿಲ್ಲ. ನಮ್ಮ ಪೂರ್ವ ಹಿಂದು ರಾಜ್ಯಗಳ ವ್ಯವಸ್ಥೆಯೂ ಆ ತೆರದ್ದಾಗಿತ್ತೆಂದು ಹೇಳಬಹುದು.

ಆದರೆ ಪ್ರಪಂಚದಲ್ಲಿ ಹೊಸದಾಗಿ ಹುಟ್ಟಿಕೊಂಡಿರುವ ರಾಜ್ಯಗಳು ಮಾಮೂಲು ಸಂಪ್ರದಾಯಗಳನ್ನು ಅವಲಂಬಿಸುವಂತಿಲ್ಲ. ಅವು ಪುರಾತನವಲ್ಲದ ಕಾರಣದಿಂದಲೇ ಅವುಗಳಿಗೆ ಒಂದು ನಿಷ್ಕರ್ಷೆಯಾದ ಮಾಮೂಲಿನ ಆಧಾರ ಇರಲಾರದು. ಅಂಥವು ಸ್ವತಂತ್ರ ವಿಚಾರದಿಂದಲೇ,--ತಮ್ಮ ತಮ್ಮ ಪ್ರಜಾಪ್ರತಿನಿಧಿಗಳ ವಾದವಿವಾದ ಪೂರ್ವಕವಾದ ತೀರ್ಮಾನದಿಂದಲೇ-ತಮ್ಮ ರಾಜ್ಯನಿಬಂಧನೆಗಳನ್ನು ಗೊತ್ತುಮಾಡಿಕೊಳ್ಳಬೇಕಾಗುತ್ತದೆ. ಹೀಗೆ ಗೊತ್ತಾದ ನಿಬಂಧನೆಗಳನ್ನು ಸ್ಪಷ್ಟತೆಗೋಸ್ಕರವೂ ನಿಷ್ಕರ್ಷೆಗೋಸ್ಕರವೂ ಲಿಖಿತರೂಪದಲ್ಲಿ ಬರೆದಿಟ್ಟುಕೊಳ್ಳಬೇಕಾಗುತ್ತದೆ. ಇಂಥಾ ಲಿಖಿತ ನಿಬಂಧನೆಗೆ ಅತ್ಯಂತ ಪ್ರಸಿದ್ಧವಾದ ನಿದರ್ಶನ ಅಮೇರಿಕದ ಸಂಯುಕ್ತ ರಾಷ್ಟ್ರದ್ದು. ಅಲ್ಲಿಂದೀಚೆಗೆ ಕ್ರಾಂತಿಯ ಮೂಲಕ ಉತ್ಪನ್ನವಾದ ಅನೇಕ ರಾಷ್ಟ್ರಗಳು,—ಫ್ರಾನ್ಸ್, ರಷ್ಯ ಮೊದಲಾದುವು,–ತಮ್ಮ ನಿಬಂಧನೆಗಳನ್ನು ಲಿಖಿತ ರೂಪದಲ್ಲಿ ಗೊತ್ತುಮಾಡಿರಿಸಿಕೊಂಡಿವೆ.

ಈಗ ಸ್ವತಂತ್ರ ಭಾರತವು ನೂತನ ರಾಜ್ಯ. ಸದ್ಯಕ್ಕೆ ಇದು ಹಳೆಯ--ಎಂದರೆ ಬ್ರಿಟಿಷರ ಕಾಲದ-ಶಾಸನದ ಆಧಾರದ ಮೇಲೆ ನಿಂತಿದ್ದರೂ ನಮ್ಮ ಉದ್ದೇಶ ಅದೇ ಆಧಾರವನ್ನು ಉಳಿಸಿಕೊಂಡಿರಬೇಕೆಂಬುದಲ್ಲ. ಆದಷ್ಟು ಶೀಘ್ರವಾಗಿ ಹೊಸ ಸ್ವತಂತ್ರ ನಿಬಂಧನೆಯನ್ನು ತಯಾರಿಸಿಕೊಳ್ಳಬೇಕೆಂಬುದೇ ನಮ್ಮ ಉದ್ದೇಶ. ಆದದ್ದರಿಂದ ನಮ್ಮ ರಾಜ್ಯ ನಿಬಂಧನೆಯು ಪ್ರಪಂಚದ ಇತರ ನೂತನ ರಾಜ್ಯಗಳ ನಿಬಂಧನೆಗಳಂತೆ ಲಿಖಿತ ರೂಪದ್ದೇ ಆಗಿರಬೇಕಾಗಿದೆ.

### ನಿಬಂಧನೆಯ ಲಕ್ಷಣಗಳು

ಈಗ ಒಂದು ರಾಜ್ಯನಿಬಂಧನೆಯ ಮುಖ್ಯ ಅಂಶಗಳೇನೆಂಬುದನ್ನು ಸ್ವಲ್ಪ ನೆನಪಿಗೆ ತಂದುಕೊಳ್ಳೋಣ. ಮೊದಲನೆಯದಾಗಿ, ಅದು ರಾಜ್ಯದ ಕ್ಷೇತ್ರವಿಸ್ತಾರವೆಷ್ಟು, ಎಲ್ಲೆಕಟ್ಟುಗಳಾವುವು, ಪ್ರಜಾವರ್ಗ ಯಾವುದು ಎಂಬುದನ್ನು ಗೊತ್ತಾಗಿ ತಿಳಿಸಬೇಕು.

ಎರಡನೆಯದಾಗಿ, ಅದು ತಾನು ಮಿಕ್ಕ ಪ್ರಪಂಚದೊಡನೆ—ಎಂದರೆ ಇತರ ರಾಜ್ಯಗಳೊಡನೆ—ವ್ಯವಹಾರಸಂಬಂಧವನ್ನು ಬೆಳೆಸುವಲ್ಲಿ ತನ್ನ ಸ್ವತಂತ್ರಾಧಿಕಾರದ ಮುಟ್ಟ ಎಂಥದೆಂಬುದನ್ನು ಸೂಚಿಸಬೇಕು.

ಮೂರನೆಯದಾಗಿ, ಅದು ರಾಜ್ಯದ ಅಧಿಕಾರಸರ್ವಸ್ವದ ಹಂಚಿಕೆಯನ್ನು ಗೊತ್ತುಮಾಡಬೇಕು. ಎಂದರೆ, (೧) ರಾಜ್ಯದ ನಾನಾ ಅಂಗಗಳಲ್ಲಿ ಮುಖ್ಯಾಮುಖ್ಯವಾದವು ಯಾವುವು, ಅವುಗಳ ರೂಪ ರಚನೆಗಳು ಹೇಗಿರಬೇಕು ಎಂಬುದನ್ನು ಗೊತ್ತುಮಾಡಿ ಹೇಳಬೇಕು. (೨) ಅಂಥ ನಾನಾ ಅಂಗಗಳ ಅನ್ಯೋನ್ಯ ಸಂಬಂಧವನ್ನು ನಿಷ್ಕರ್ಷೆಯಾಗಿ ತಿಳಿಸಬೇಕು.

### ಅಂಗೋಪಾಂಗಗಳು

ಈ ಕಡೆಯ ಅಂಶವನ್ನು ನಾವು ಇನ್ನು ಸ್ವಲ್ಪ ಸೂಕ್ಷ್ಮವಾಗಿ ನೋಡಬೇಕಾಗಿದೆ. ರಾಜ್ಯದ ಅಂಗಗಳನ್ನು ಎರಡು ಬೇರೆ ಬೇರೆ ದೃಷ್ಟಿಗಳಿಂದ ವಿಂಗಡ ಮಾಡಬಹುದು:— ಒಂದು ಕರಣ ವ್ಯವಸ್ಥಾ ದೃಷ್ಟಿ ? ಇನ್ನೊಂದು ರಾಜ್ಯಪ್ರಜಾದೃಷ್ಟಿ.

(೧) ಸರಕಾರದ ಆಡಳಿತಗಳನ್ನು ನಡಸುವ ಕರಣಗಳು ಮುಖ್ಯವಾಗಿ ಮೂರು:— (i) ಶಾಸನಾಂಗ, (ii) ಕಾರ್ಯಾಂಗ, (iii) ನ್ಯಾಯಾಂಗ. (A) ಈ ಮೂರರಲ್ಲಿ ಯಾವಯಾವುವರ ಅಧಿಕಾರ ವ್ಯಾಪನೆ ಎಷ್ಟೆಷ್ಟು ದೂರ ? (B) ಅವುಗಳಲ್ಲಿ ಯಾವುದು ಯಾವ ಕ್ಷೇತ್ರದಲ್ಲಿ ಯಾವುದಕ್ಕೆ ಅಧೀನ? ಮತ್ತು (C) ಈ ಮೂರಂಗಗಳ ಉಪಾಂಗಗಳಲ್ಲಿ ವಿಧಾಯಕಗಳಾವುವು, ವಿಧೇಯಗಳಾವುವು. ಈ ವಿಧಾಯಕ–ವಿಧೇಯಭಾವಗಳು ಯಾವ ಯಾವ ವಿಷಯದಲ್ಲಿ, ಎಷ್ಟೆಷ್ಟು ಮಾತ್ರ, ಅನ್ವಯಿಸಬೇಕಾದುವು ?—ಎಂಬುದನ್ನು ಗೊತ್ತಾಗಿ ಹೇಳುವುದು ರಾಜ್ಯನಿಬಂಧನೆಯ ಒಂದು ಮುಖ್ಯ ಕರ್ತವ್ಯ.

### ಪ್ರಜಾವ್ಯಕ್ತಿ

(೨) ಇನ್ನೊಂದು ಮುಖ್ಯ ಕರ್ತವ್ಯ ರಾಜ್ಯಕ್ಕೂ ಪ್ರಜಾವ್ಯಕ್ತಿಗೂ ಇರಬೇಕಾದ ಪರಸ್ಪರ ಸಂಬಂಧವೆಂಥಾದ್ದು, — ಎಂದರೆ ಆ ಎರಡು

ಅಂಶಗಳಿಗೂ ಒಂದಕ್ಕೊಂದರ ವಿಷಯದಲ್ಲಿರುವ ಹಕ್ಕುಬಾಧ್ಯತೆಗಳು ಎಂಥವು? ಯಾವ ವಿಷಯದಲ್ಲಿಯಾದರೂ ಅವೆರಡಕ್ಕೂ ತಕರಾರು ಬಂದರೆ ಆಗ ವ್ಯಕ್ತಿ ಪ್ರಜೆಗೆ ದೊರೆಯಲಾಗುವ ಪರಿಹಾರೋಪಾಯ ವೆಂಥಾದ್ದು? ಇದನ್ನು ರಾಜ್ಯನಿಬಂಧನೆ ತಿಳಿಸಬಲ್ಲದ್ದಾಗಬೇಕು. ರಾಜ್ಯವೆಂಬುದು ಪ್ರಜಾಸಮೂಹದ ಅಧಿಕಾರವ್ಯವಸ್ಥೆ. ಪ್ರತಿಯೊಬ್ಬ ವ್ಯಕ್ತಿಯೂ ಕೆಲವು ವಿಷಯಗಳಲ್ಲಿ ಆ ಸಮೂಹದೊಳಗೇ ಒಂದಾಗಿ ಸೇರಿಕೊಂಡಿರತಕ್ಕವನು. ಇನ್ನು ಕೆಲವು ವಿಷಯಗಳಲ್ಲಿ ಹಾಗೆ ಸೇರದೆ ತಾನೇ ಬೇರೆಯಾಗಿ ನಿಂತಿರತಕ್ಕವನು. ಪ್ರತಿಯೊಬ್ಬ ಮನುಷ್ಯನ ಜೀವನಕ್ಷೇತ್ರದಲ್ಲಿಯೂ ಕೊಂಚ ಭಾಗ ಸರ್ವಜನ ಸಾಮಾನ್ಯವಾದ ದ್ದಾಗಿರುತ್ತದೆ. ಉದ್ಯೋಗ, ಗ್ರಾಮಶುಚಿತ್ವ, ಸಂಚಾರ ಸೌಲಭ್ಯ, ಬೀದಿಯ ದೀಪ, ವಾಹನಸೌಕರ್ಯ, ವಿದ್ಯಾಸೌಕರ್ಯ, ವೈದ್ಯಸೌಕರ್ಯ—ಇಂಥವು ಸರ್ವಜನ ಸಾಮಾನ್ಯವಾದ ಜೀವನಕ್ಷೇತ್ರಗಳು. ಈ ಸಾರ್ವಜನಿಕ ಭಾಗಗಳಲ್ಲಿ ಮನುಷ್ಯಜೀವನನ ಪ್ರಜಾಸಮುದಾಯದ ವ್ಯವಸ್ಥೆಗೆ ಒಳಪಡಬೇಕಾದದ್ದು. ಅಲ್ಲಿ ವ್ಯಕ್ತಿಯ ಮಾತು ಸಮಷ್ಟಿಯ ಮಾತಿನಲ್ಲಿ ಕರಗಿಹೋಗುತ್ತದೆ. ಆದರೆ ಮನುಷ್ಯಜೀವನದ ಇನ್ನೊಂದು ಭಾಗದಲ್ಲಿ ಸಮಷ್ಟಿಗೆ ಅಷ್ಟು ಹೆಚ್ಚಿನ ಅಧಿಕಾರ ಸಲ್ಲಲಾರದು. ಮನುಷ್ಯನ ಅಂತರಂಗದ ವ್ಯಾಪಾರಗಳು, ಅವನ ವ್ರತಪೂಜೆಗಳು, ಅವನಿಗೆ ಇಷ್ಟವಾದ ಸಂಗೀತ, ಅವನಿಗೆ ಬೇಕಾದ ಸಾಹಿತ್ಯ, ಅವನ ರುಚಿಗೆ ತಕ್ಕ ಆಹಾರ ವಿಹಾರಗಳು ಇವು ಕೇವಲ ವೈಯಕ್ತಿಕವಾದವು. ಈ ವ್ಯಕ್ತಿರುಚಿಪ್ರಧಾನಗಳಾದ ವೃತ್ತಿವ್ಯಾಪಾರಗಳೇ ಜೀವನಕ್ಕೆ ಒಂದು ಬೆಲೆಯನ್ನೂ ಒಂದು ಸಾರ್ಥಕ್ಯವನ್ನೂ ಕೊಡತಕ್ಕವು. ಇಂಥಾ ಕ್ಷೇತ್ರಗಳಲ್ಲಿ ವ್ಯಕ್ತಿಯ ಸ್ವಾತಂತ್ರ್ಯಕ್ಕೆ ರಾಜ್ಯವು ಅಥವಾ ಸಮೂಹಾಭಿಪ್ರಾಯವು ಭಂಗತರುವುದಾದಲ್ಲಿ, ಅಂಥಾ ರಾಜ್ಯವ್ಯವಸ್ಥೆಯಿಂದ ವ್ಯಕ್ತಿಯ ಜೀವನವೇ ನಿರರ್ಥಕವೆನಿಸೀತು. ಇಂಥಾ ವ್ಯಕ್ತಿತ್ವ ವಿನಾಶದ ಭೀತಿ ಈಚಿನ ಹೊಸ ರಾಜ್ಯಗಳಲ್ಲಿ ಹೆಚ್ಚುತ್ತಿದೆ. ಈ ಹೊಸ ರಾಜ್ಯಗಳು ತಮ್ಮ ಕಾರ್ಯಕ್ಷೇತ್ರವನ್ನು ವಿಪರೀತವಾಗಿ ವಿಸ್ತಾರಪಡಿಸಿಕೊಂಡಿವೆ. ಪ್ರಜಾಸಮುದಾಯದ ಹಿತವೆಂಬ ಹೆಸರಿನಲ್ಲಿ ಅವು ವ್ಯಕ್ತಿಪ್ರಜೆಯ ಸ್ವಾತಂತ್ರ್ಯವನ್ನು ಮೊಟಕು ಮಾಡುತ್ತಿವೆ. ಎಂಥ ನೆಲವನ್ನು ಉಳಬೇಕು, ಎಂಥ ಬೆಳೆ ತೆಗೆಯಬೇಕು, ಎಂಥ ನೂಲನ್ನು ನೂಲಬೇಕು, ಎಷ್ಟು ಪದಾರ್ಥವನ್ನು ಮಾರಬೇಕು, ಎಂಥವರಿಗೆ ಮಾರಬೇಕು, ಎಂಥವರನ್ನು ಉದ್ಯೋಗಕ್ಕಿರಿಸಿಕೊಳ್ಳಬೇಕು, ಎಲ್ಲಿ ಸಾಲ ತೆಗೆಯಬೇಕು, ಏನು ಓದು ಓದಬೇಕು? — ಈ ಬಗೆಯ ನೂರಾರು ಉದ್ಯೋಗವಿಚಾರಗಳಿಗೂ ವ್ಯಾಪಾರ ವಿಚಾರಗಳಿಗೂ ಸಾಮಾಜಿಕ ವಿಚಾರಗಳಿಗೂ ಸರಕಾರಗಳು ಕೈಹಾಕಿ ವ್ಯಕ್ತಿಪ್ರಜೆಯ ಮೇಲೆ ತಮ್ಮ ಬಲವನ್ನು ಪ್ರಯೋಗಿಸುತ್ತವೆ. ಹೀಗೆ ವ್ಯಕ್ತಿಜೀವನದ ಮೇಲೆ ರಾಜ್ಯದ ಒತ್ತಾಯ ಮಿತಿಮೀರಿದರೆ ಪ್ರಜೆಗಿರುವ ಪರಿಹಾರೋಪಾಯವೇನು? ಇದನ್ನು ನಿಷ್ಕರ್ಷೆಯಾಗಿ ತಿಳಿಸುವುದೂ ವ್ಯಕ್ತಿಪ್ರಜೆಯ ಸ್ವಾತಂತ್ರ್ಯದ ವಿಸ್ತೀರ್ಣವೆಷ್ಟೆಂಬುದನ್ನು ನಿಸ್ಸಂದೇಹವಾಗಿ ನಿರೂಪಿಸುವುದೂ ರಾಜ್ಯನಿಬಂಧನೆಯ ಮುಖ್ಯ ಕರ್ತವ್ಯ.

### ಸೂತ್ರತ್ರಯ

ಈ ಮೇಲೆ ಹೇಳಿರುವ ವ್ಯಕ್ತಿಹಿತ ರಕ್ಷಣೆಗಳು ದೆಹಲಿಯ ರಾಜ್ಯ ನಿಬಂಧನೆಯಲ್ಲಿ ಅಡಕವಾಗಿವೆ. ಅದರಲ್ಲಿಯ ಒಂದು ವಿಶೇಷಾಂಶವನ್ನು ನಾವು ಇಲ್ಲಿ ಗಮನಕ್ಕೆ ತೆಗೆದುಕೊಳ್ಳುವುದು ಅವಶ್ಯವಾಗಿದೆ. ನಿಬಂಧನೆಯ ಅವಶ್ಯ ಕರ್ತವ್ಯಗಳಲ್ಲಿ ಅಧಿಕಾರ ವಿಭಜನೆ ಒಂದು ಎಂದು ಹೇಳಿದೆವಷ್ಟೆ? ಆ ಅಧಿಕಾರವಿಭಜನೆಗೆ ಎರಡು ಮುಖಗಳನ್ನು ಹೇಳಿದೆವು; ಒಂದು ಸರಕಾರದ ಕರಣವ್ಯವಸ್ಥೆಯ ದೃಷ್ಟಿಯದು, ಇನ್ನೊಂದು ಪ್ರಜಾಸ್ವಾತಂತ್ರ್ಯದ ದೃಷ್ಟಿಯದು. ಇಂಡಿಯದಂಥ ವಿಸ್ತಾರವಾದ ದೇಶದ ರಾಜ್ಯನಿಬಂಧನೆಯು—ಅಮೇರಿಕದ ಸಂಯುಕ್ತ ರಾಷ್ಟ್ರದ ನಿಬಂಧನೆಯಂತೆ — ಇನ್ನೊಂದು ಅಧಿಕಾರವಿಭಜನ ಸೂತ್ರವನ್ನೂ ಒಳಗೊಂಡಿರಬೇಕಾಗಿದೆ. ಆ ಮೂರನೆಯ ಸೂತ್ರ ಸಾರ್ವದೇಶಿಕ ಸರಕಾರಕ್ಕೂ ಅದರೊಳಗಣ ನಾನಾ ಮಾಂಡಲಿಕ ಸರಕಾರಗಳಿಗೂ ಇರಬೇಕಾದ ಪರಸ್ಪರ ಅಧಿಕಾರವಿಭಾಗಕ್ಕೆ ಸಂಬಂಧಪಟ್ಟದ್ದು. ಸಾರ್ವದೇಶಿಕ ಸರಕಾರವೆಂದರೆ, ದೆಹಲಿಯಿಂದ ನಡೆಯತಕ್ಕದ್ದಾಗಿ ಸಮಸ್ತ ಇಂಡಿಯಕ್ಕೂ ಅನ್ವಯಿಸುವ ಕೇಂದ್ರ ಸರಕಾರ. ಮಾಂಡಲಿಕ ಸರಕಾರಗಳೆಂದರೆ ಇದುವರೆಗೂ ಪ್ರಾಂತಗಳೆಂದೂ ಅಧಿಸ್ಥತೈಗಳೆಂದೂ ಕರೆಯಲ್ಪಡುತ್ತಿದ್ದ ಮದರಾಸ, ಬೊಂಬಾಯಿ, ಸಂಯುಕ್ತ ಪ್ರಾಂತ ಮೊದಲಾದ ಪ್ರಾದೇಶಿಕ ಮಂಡಲಗಳ ಸರಕಾರಗಳು, ಮತ್ತು ಮೈಸೂರು, ಹೈದರಾಬಾದ, ತಿರುವಾಂಕೂರು, ಕೊಚ್ಚಿ, ಕಾಶ್ಮೀರ—ಮೊದಲಾದ ದೇಶೀಯ ಸಂಸ್ಥಾನಗಳ ಸರಕಾರಗಳು ಈ ನಾನಾ ಮಂಡಲಗಳ ಆಧಾರದ ಮೇಲೆ ಅವುಗಳನ್ನು ಗರ್ಭೀಕರಿಸಿಕೊಂಡು ನಿಂತಿರತಕ್ಕದ್ದು ಇಂಡಿಯದ ಸಾರ್ವದೇಶಿಕ ಸರಕಾರ. ಇಂಥ ರಾಷ್ಟ್ರವನ್ನು "ಫೆಡರಲ್" ಸ್ಟೇಟ್ (Federal State) ಅಥವಾ "ಸಂಯುಕ್ತ ಅಧಿರಾಷ್ಟ್ರ" ಎಂದು ಕರೆಯುವುದು ಪದ್ಧತಿ. ಅದರಲ್ಲಿ ಅಂತರ್ಗತವಾಗಿರುವ ಮಂಡಲಗಳನ್ನು "ಕಾಂಪೊನೆಂಟ್ ಸ್ಟೇಟ್ಸ್" (Component States) ಅಂತಸ್ಸಂಸ್ಥಾನಗಳು ಎಂದು ಕರೆಯಬಹುದು. ಇಂಥ ಅಂತಸ್ಸಂಸ್ಥಾನದ ಮೇಲೆ ಸಂಯುಕ್ತಾಧಿರಾಷ್ಟ್ರವು ಯಾವ ಯಾವ ಬಾಬಿನಲ್ಲಿ ಎಷ್ಟೆಷ್ಟು ಮಾತ್ರ ಅಧಿಕಾರ ನಡೆಸಬಹುದು, ಮತ್ತು ಯಾವ ಯಾವ ಬಾಬಿನಲ್ಲಿ ಅಂತಸ್ಸಂಸ್ಥಾನವು ಅಧಿರಾಷ್ಟ್ರದ ಸ್ಪೃಕ್ಕಿಲ್ಲದೆ ಸ್ವತಂತ್ರವಾಗಿ ವರ್ತಿಸಬಹುದು? — ಈ ವಿವರವನ್ನು ಸಹ ಇಂಡಿಯದ ರಾಜ್ಯನಿಬಂಧನೆ ಸ್ಪಷ್ಟಪಡಿಸಬೇಕಾಗಿದೆ.

### ನಮ್ಮ ಹೊಸ ನಿಬಂಧನೆ

ದೆಹಲಿಯಲ್ಲಿ ಈಗ ತಯಾರಾಗುತ್ತಿರುವ ನಿಬಂಧನಶಾಸನವನ್ನು ಮೇಲ್ಕಂಡ ಲಕ್ಷಣಗಳ ದೃಷ್ಟಿಯಿಂದ ಪರೀಕ್ಷಿಸಿ ನೋಡಿದರೆ ಅದು ಎಲ್ಲ ವಿಷಯಗಳಲ್ಲೂ ಸರ್ವಸಮರ್ಪಕವಾಗಿದೆಯೆಂದು ಹೇಳಲಾಗುವಂತಿಲ್ಲ. ಎಷ್ಟೋ ವಿಷಯಗಳಲ್ಲಿ ಆ ಶಾಸನವನ್ನು ಕುರಿತು ಅಭಿಪ್ರಾಯಭೇದಕ್ಕೆ ಅವಕಾಶವಿದೆ. ಆದರೆ ಭಿನ್ನಾಭಿಪ್ರಾಯಗಳಿಗೂ ಸಂದೇಹಗಳಿಗೂ ಆಸ್ಪದವೇ ಇಲ್ಲದಂಥ ಶಾಸನ ಎಲ್ಲಾದರೂ ತಯಾರಾಗಬಹುದೆಂಬುದು ಕೇವಲ ಮನಃಕಲ್ಪನೆ. ಎಂಥ ಶಾಸನದ ವಿಷಯದಲ್ಲೂ ಯಾರಬೋ ಒಬ್ಬರದು ತಕರಾರು ಇದ್ದೇ ಇರುತ್ತದೆ. ಆದರೆ ಈಗಣ ದೆಹಲಿಯ ಶಾಸನದ ವಿಷಯದಲ್ಲಿ ಕೆಲವು ವಿಶೇಷಾಂಶಗಳುಂಟು:

### ಪುಸ್ತಕಾಧಾರ

(೧) ಈ ಶಾಸನ ವಿಶೇಷವಾಗಿ ಪುಸ್ತಕಪಾಂಡಿತ್ಯದಿಂದ ಫಲಿಸಿದ್ದು; ಅಷ್ಟಾಗಿ ಸ್ವಾನುಭವದಿಂದ ಫಲಿಸಿ ಬಂದದ್ದಲ್ಲ. ನಿಬಂಧಕಸಭೆಯ (Constituent Assembly) ಸದಸ್ಯರಲ್ಲಿ ಸರಕಾರದ ನಾನಾ

ಅಂತಸ್ತುಗಳ ಕಾರ್ಯಕ್ರಮಗಳನ್ನು ಸ್ವಂತ ಅನುಭವದಿಂದ ಕಂಡು ಒಳಮರ್ಮವನ್ನರಿತಿರುವವರು ಶ್ರೀಮಾನ್ ಗೋಪಾಲಸ್ವಾಮಿ ಅಯ್ಯಂಗಾರ್ಯರೊಬ್ಬರ ಹೊರತು ಬೇರೆ ಯಾರೂ ಇರುವಂತಿಲ್ಲ. ನಿಬಂಧಕ ಸಭೆಗೆ ಮಂತ್ರಾಲೋಚನಕರ್ತರಾಗಿರುವ ಸರ್ ಬಿ. ಎನ್. ರಾವ್ ಅವರು ವಿಸ್ತಾರವಾದ ಶಾಸನಗ್ರಂಥಪರಿಚಯವುಳ್ಳವರು. ನಾನಾ ರಾಜ್ಯಗಳ ವ್ಯವಸ್ಥೆಗಳು ಹೇಗಿರುತ್ತವೆಂಬುದನ್ನು ಅವರು ಅಧ್ಯಯನದಿಂದ ತಿಳಿದುಕೊಂಡಿರುವವರೇ ಹೊರತು ಅನುಭವದಿಂದ ಕಂಡವರಲ್ಲ. ಪಂಡಿತ ನೆಹರೂ, ಸರದಾರ್ ಪಟೇಲ್, ಬಾಬು ರಾಜೇಂದ್ರ ಪ್ರಸಾದ್ ಮೊದಲಾದ ಜನನಾಯಕರಾದರೆ ರಾಜ್ಯ ನಿಬಂಧನೆಯ ಸ್ವರೂಪವನ್ನು ಸ್ಥೂಲವಾಗಿ ಪರಿಚಯ ಮಾಡಿಕೊಂಡಿರುವವರೇ ಹೊರತು ಅದನ್ನು ಶಾಸ್ತ್ರದೃಷ್ಟಿಯಿಂದ ಪರಿಶೀಲನೆ ಮಾಡಿರುವವರಲ್ಲ. ಅವರು ಯಾವ ರಾಜ್ಯದ ಮಂತ್ರಿಸಂಪುಟದಲ್ಲಾಗಲಿ, ನ್ಯಾಯಮಂಡಲದಲ್ಲಾಗಲಿ ಬಹುಕಾಲ ಇದ್ದು, ರಾಜ್ಯಾಂಗ ಹೇಗಿದ್ದರೆ ಸಮವಾಗಿ ನಡೆದೀತೆಂಬುದನ್ನು ಅನುಭವದಿಂದ ಕಂಡುಕೊಂಡವರೂ ಅಲ್ಲ. ದೆಹಲಿ ಸಭೆಯ ಉಳಿದ ಕೆಲವು ಸದಸ್ಯ ಪ್ರಮುಖರು ವಕೀಲರಾಗಿಯೋ ಅಧ್ಯಾಪಕರಾಗಿಯೋ ಹೆಸರು ಮಾಡಿದವರು. ಹೀಗೆ ದೆಹಲಿಯ ಶಾಸನದ ತಳಹದಿಯಲ್ಲಿ ಅನುಭವದ ಭಾಗಕ್ಕಿಂತ ಪುಸ್ತಕ ಪಾಂಡಿತ್ಯದ ಭಾಗವೂ ಕೇವಲ ಊಹೆ ತರ್ಕಗಳ ಭಾಗವೂ ಹೆಚ್ಚಾಗಿವೆ. ಅನುಭವಶಾಲಿಗಳು ನಮ್ಮಲ್ಲಿ ಕಡಿಮೆಯೆಂಬುದೂ ಪುಸ್ತಕಾಧಾರವು ನಮಗೆ ಅನಿವಾರ್ಯವೆಂಬುದೂ ದಿಟ. ಆದರೆ ಆ ಸಂದರ್ಭವನ್ನು ನಾವು ಬಚ್ಚಿಡಬೇಕಾದದ್ದಿಲ್ಲ.

## ಅಪ್ರಸಕ್ತಾಂಶಗಳು

ಸಾಮಾನ್ಯವಾಗಿ ಹಿಂದಿನ ರಾಜ್ಯನಿಬಂಧನೆಗಳಲ್ಲಿ ಕಾಣಬಾರದ ಕೆಲವು ಲಕ್ಷಣಗಳನ್ನು ದೆಹಲಿಯ ರಾಜ್ಯನಿಬಂಧಕಸಭೆ ತನ್ನ ಶಾಸನದಲ್ಲಿ ಸೇರಿಸಿದೆ. ಈ ಹೊಸ ಲಕ್ಷಣಗಳು ರಾಜ್ಯನಿಬಂಧನೆಗೆ ಅನಿವಾರ್ಯವಾದುವೆಂದೇನೂ ಹೇಳಲಾಗುವುದಿಲ್ಲ. ಒಂದು ದೃಷ್ಟಿಯಿಂದ ಅವು ಅಪ್ರಸಕ್ತವೆಂದೇ ಹೇಳಬಹುದು. ಅಂಥವನ್ನು ದೆಹಲಿಯ ಶಾಸನದಲ್ಲಿ ಸೇರಿಸಿರುವುದರಿಂದ, ಅದು ಉತ್ತರೋತ್ತರ ಸಂದೇಹ ವಿವಾದಗಳಿಗೆ ಆಸ್ಪದ ಕೊಡಬಹುದೆಂಬ ಶಂಕೆಗೆ ಅವಕಾಶವಿದೆ. ನಮ್ಮ ದೇಶಭಕ್ತರಲ್ಲಿ ದೇಶಹಿತದ ಸ್ವರೂಪವೆಂಥಾದ್ದೆಂಬುದನ್ನು ಕುರಿತು ಅಭಿಪ್ರಾಯಗಳು ನಾನಾ ತೆರನಾಗಿವೆ. ಸರ್ವಜನಸ್ವಾಮ್ಯ, ರಾಷ್ಟ್ರಸ್ವಕರಣ, ಗ್ರಾಮೋದ್ಧಾರ ಕೈಗಾರಿಕೆಗಳ ಏಳಿಗೆ, ಪಂಚಾಯತಿಯ ಏರ್ಪಾಟು ಹಿಂದೀ ಪ್ರಚಾರ, ಮದ್ಯಪಾನ ನಿರೋಧ ಹೀಗೆ ನಾನಾ ದೇಶಭಕ್ತರಿಗೆ ನಾನಾ ಉತ್ಸಾಹಗಳು ಮುಖ್ಯವಾಗಿವೆ. ಅಂಥವುಗಳ ಪ್ರತಿನಿಧಿಗಳು ದೆಹಲಿಯ ಸಭೆಯುಲ್ಲಿರುವುದರಿಂದಲೂ ಅಂಥವರ ಸಂಖ್ಯೆ ದೇಶದಲ್ಲೂ ಗಮನಾರ್ಹವಾದಷ್ಟು ಮಟ್ಟಿಗೆ ಇರುವುದರಿಂದಲೂ ಅವರೆಲ್ಲರ ಧ್ಯೇಯಗಳೂ ರಾಜ್ಯನಿಬಂಧನೆಯಲ್ಲಿ ಅಷ್ಟಿಷ್ಟು ಪ್ರತಿಬಿಂಬಿತವಾಗಿವೆ. ಇಂಥ ಧ್ಯೇಯಗಳನ್ನೂ ಅವುಗಳ ಜನ್ಮಸ್ಥಾನಗಳಾದ ನಾನಾ ರಾಜಕೀಯ ಕಕ್ಷಿಗಳ ತತ್ವಸಂಕಲ್ಪಗಳನ್ನೂ ರಾಜ್ಯದ ಮೂಲ ನಿಬಂಧನೆಯಲ್ಲಿ ಪ್ರತ್ಯಕ್ಷವಾಗಿಯಾಗಲಿ ಪರೋಕ್ಷವಾಗಿಯಾಗಲಿ ಸೇರಿಸುವುದು ವಾಡಿಕೆಯಲ್ಲ. ಹಾಗೆ ಅನವಶ್ಯ ವಿಷಯಗಳನ್ನು ಸೇರಿಸುವುದು ಅನುಕೂಲವೂ ಅಲ್ಲ; ಅದು ಪ್ರತಿಕೂಲವೇ. ಒಂದು ರಾಜ್ಯನಿಬಂಧನೆಯು ರಾಜ್ಯ ನಿರ್ವಾಹಕ್ಕೆ ಎಷ್ಟು ಮಾತ್ರ ಪ್ರಕೃತವೋ,— ಎಷ್ಟಕ್ಕಿಂತ ಕಡಮೆಯಾದರೆ ರಾಜ್ಯಕಾರ್ಯವು ಸುಸೂತ್ರವಾಗಿ ಸಾಗಲಾರದೆಂದು ಭೀತಿಗೆ ಅವಕಾಶವಿದ್ದೀತೋ— ಅಷ್ಟು ಮಾತ್ರವನ್ನೇ, ಅತ್ಯಂತಾವಶ್ಯಕವಾದದ್ದೆಷ್ಟೋ ಅಷ್ಟನ್ನೇ, ಅದಕ್ಕೆ ಹೆಚ್ಚೂ ಇಲ್ಲದಂತೆ ಕಡಿಮೆಯೂ ಇಲ್ಲದಂತೆ, ಒಳಗೊಂಡಿರಬೇಕು. ಹಾಗೆ ಅತ್ಯಂತಾವಶ್ಯಕ ವಿಚಾರಮಾತ್ರವನ್ನೇ ಗರ್ಭೀಕರಿಸಿಕೊಂಡಿರುವ ರಾಜ್ಯನಿಬಂಧನೆಯು ಕಾಲಾನುಕಾಲದಲ್ಲಿ ದೇಶಕ್ಕಾಗುವ ಅನುಭವದ ಪ್ರಕಾರ ಬೆಳೆದುಕೊಳ್ಳಬಹುದು.

## ವ್ಯಕ್ತಿರಕ್ಷಣೆ

(೩) ನಮ್ಮ ದೇಶದ ಸದ್ಯಃ ಸ್ಥಿತಿಯಲ್ಲಿ ಒಂದೇ ಒಂದು ರಾಜಕೀಯ ಪಕ್ಷ ಪ್ರಬಲವಾಗಿರುವುದರಿಂದಲೂ ಆ ಪಕ್ಷವೇ ಸರಕಾರದ ಕಾರ್ಯಸೂತ್ರಗಳನ್ನು ಕೈಯ್ಯಲ್ಲಿಟ್ಟುಕೊಂಡಿರುವುದರಿಂದಲೂ ಆ ಪಕ್ಷದ ಅಭಿಪ್ರಾಯಗಳನ್ನು ಅಂಗೀಕರಿಸದಿರುವಂಥ ಪ್ರಜಾವ್ಯಕ್ತಿಗೆ ಸರಕಾರದ ಅಂಗಾಂಗಗಳಿಂದ ಯಾವ ಯಾವ ರೀತಿ ಹಿಂಸೆ ತಟ್ಟಬಹುದೋ ಮತ್ತು ಅಂಥ ಸಂದರ್ಭದಲ್ಲಿ ನ್ಯಾಯಸ್ಥಾನಗಳು ಆ ವ್ಯಕ್ತಿಯ ಸಹಾಯಕ್ಕೆ ಬರಲು ಎಷ್ಟು ಮಾತ್ರ ಸಮರ್ಥವಾದಾವೋ— ಅದನ್ನು ಈಗ ನಿಷ್ಕರ್ಷೆಯಾಗಿ ಹೇಳುವುದು ಸಾಧ್ಯವಿಲ್ಲ. ಜಮೀನ್ದಾರಿಗಳನ್ನು ರದ್ದುಪಡಿಸುವ ವಿಚಾರದಲ್ಲಿಯೂ ಕೆಲವು ರಾಜಕೀಯ ಪಂಗಡಗಳ ವಿಚಾರದಲ್ಲಿಯೂ ಕಾಂಗ್ರೆಸ್ ಸರಕಾರಗಳು ಇದುವರೆಗೂ ಅನುಸರಿಸುತ್ತಿರುವ ಧೋರಣೆಯನ್ನು ನೋಡಿದರೆ, ಇಂಥ ವಿಷಮ ಸಂದರ್ಭಗಳು ಹೊಸ ನಿಬಂಧನೆಯ ಆಡಳಿತದಲ್ಲಿ ಅಸಾಧ್ಯವಾದಾವೆಂಬ ಭರವಸೆ ತೋರುವುದಿಲ್ಲ.

## ಕೇಂದ್ರ – ಪ್ರಾಂತ ಸಂಬಂಧ

(೪) ಅಧಿರಾಷ್ಟ್ರಕ್ಕೂ ಅಂತಸ್ಸಂಸ್ಥಾನಗಳಿಗೂ ದೆಹಲಿಯ ಶಾಸನವು ಗೊತ್ತುಮಾಡಿರುವ ಪರಸ್ಪರ ಸಂಬಂಧವಾದರೂ ಹಾಗೆಯೇ ಶಂಕಾಸ್ಪದವಾಗಿದೆ. ಕಾರ್ಯಕ್ಷೇತ್ರದಲ್ಲಿ ಆ ಸಂಬಂಧ ಸೂತ್ರಗಳನ್ನು ಅನ್ವಯಿಸಿ ನೋಡುವುದಕ್ಕೆ ಮುಂಚೆ ಆ ಸೂತ್ರಗಳ ಸಾಧುತೆಯನ್ನು ಒಪ್ಪಿಕೊಳ್ಳುವುದು ಸಕಾರಣವೆನಿಸದು.

## ಗಾತ್ರ–ತೊಡಕು

(೫) ದೆಹಲಿಯ ಶಾಸನ (ಕರಡು ರೂಪದಲ್ಲಿ) ಅದಕ್ಕೆ ಲಗತ್ತಾಗಿರುವ ಎಂಟು ಪರಿಶಿಷ್ಟಗಳನ್ನು ಬಿಟ್ಟು, ೩೧೫ ವಾಕ್ಯಗಳುಳ್ಳದ್ದಾಗಿದೆ. ಲಿಖಿತ ರಾಜ್ಯನಿಬಂಧನೆಗಳಲ್ಲಿ ಇಷ್ಟು ವಿಸ್ತಾರವಾದ ಗ್ರಂಥ ಬಹುಶಃ ಯಾವುದೂ ಇಲ್ಲ. ಅಮೇರಿಕದ ಸಂಯುಕ್ತ-ರಾಷ್ಟ್ರದ ನಿಬಂಧನೆ ೨೩ ವಾಕ್ಯಗಳೂ ೨೧ ತಿದ್ದುಪಡಿಗಳೂ ಸೇರಿ ಒಟ್ಟು ೪೪ ವಾಕ್ಯಗಳುಳ್ಳದ್ದಾಗಿದೆ. ಕೆಲ ಮುಂದಿಗೆ ಹೊಸ ಆದರ್ಶವಾಗಿರುವ ರಷ್ಯದ ಸೋವಿಯಟ್ ರಾಜ್ಯನಿಬಂಧನೆ ೧೪೬ ವಾಕ್ಯಗಳುಳ್ಳದ್ದು. ಮಾದರಿಯ ಪ್ರಜಾರಾಜ್ಯವೆಂದು ಹೆಸರಾಗಿರುವ ಸ್ವಿಟ್ಸರ್ಲೆಂಡಿನ ರಾಜ್ಯನಿಬಂಧನೆ ೧೨೩ ವಾಕ್ಯಗಳುಳ್ಳದ್ದಾಗಿದೆ. ಇಂಡಿಯದ ಶಾಸನ ಹೀಗೆ ಎಲ್ಲಕ್ಕಿಂತ ವಿಪುಲವಾಗಿದೆ ಮತ್ತು ಜಟಿಲವಾಗಿಯೂ ಇದೆ. ಮಾತು ಹೆಚ್ಚಿದಷ್ಟು ಸಂದೇಹಕ್ಕೂ ತರ್ಕಕ್ಕೂ ಅವಕಾಶ ಹೆಚ್ಚಾಗುತ್ತದೆ. ಕೆಲವು ಮಾತುಗಳನ್ನು ಒಂದೊಂದು ಸಂದರ್ಭದಲ್ಲಿ ಒಂದೊಂದರ್ಥದಲ್ಲಿ ಉಪಯೋಗಿಸಿರುವುದರಿಂದ ಅರ್ಥರಚನೆಯಲ್ಲಿ ಭ್ರಾಂತಿಗೂ ಕಾರಣವಾಗುತ್ತದೆ. ಅಮೇರಿಕದ ನಿಬಂಧನೆಯನ್ನು ಬರೆದವರು ಭಾಷೆಯ ಶಕ್ತಿಯ ಕಡೆಗೂ ಬಿಕ್ಕಟ್ಟಿನ ಕಡೆಗೂ ಮಿತಪದದಲ್ಲಿ ಬಹ್ವರ್ಥಸೂಚನೆಯ ಕಡೆಗೂ ಎಲ್ಲಕ್ಕಿಂತ ಮೇಲಾಗಿ ಸ್ಪಷ್ಟತೆಯ ಕಡೆಗೂ ಹೆಚ್ಚು ಗಮನ ಕೊಟ್ಟಿದ್ದಾರೆ. ಇಂಡಿಯದ

ಶಾಸನ ಈ ಭಾಷಾಸೌಷ್ಠವ ದೃಷ್ಟಿಯಿಂದ ಅಷ್ಟು ಶ್ಲಾಘ್ಯವಾಗಿದೆಯೆಂದು ಹೇಳುವುದು ಕಷ್ಟ.

## ಪ್ರಾರಂಭಕ್ಕಿರಲಿ

ಇಷ್ಟೆಲ್ಲ ಆಕ್ಷೇಪಣೆಗಳಿದ್ದರೂ ದೆಹಲಿಯ ನಿಬಂಧನೆ ಒಟ್ಟಿನ ಮೇಲೆ ನಮ್ಮ ಅಂಗೀಕಾರಕ್ಕೆ ಪಾತ್ರವಾಗಲೇಬೇಕು. ನಾವು ಅದನ್ನು ಆಧಾರವಾಗಿಟ್ಟುಕೊಂಡೇ ಮುಂದುವರಿಯಬೇಕಾಗಿದೆ. ಆದರಲ್ಲಿಯ ಲೋಪಗಳನ್ನು ಕಂಡುಹಿಡಿದು ತಿದ್ದಿ ಉತ್ತಮಪಡಿಸುವ ಕೆಲಸ ಕಾಲಕ್ರಮದಲ್ಲಿ ನಮಗೆ ದೊರೆಯುವ ಅನುಭವದಿಂದಲೇ ಆಗಬೇಕಾದದ್ದು. ಅನುಭವದ ಆಧಾರದ ಮೇಲೆ ಆಯಾ ಕಾಲಕ್ಕೆ ಎಷ್ಟೆಷ್ಟು ಮಾರ್ಪಾಟು ಅವಶ್ಯವೋ ಅಷ್ಟಷ್ಟನ್ನು ಆಗಾಗ ಮಾಡಿಕೊಂಡು ಬೆಳೆಯುತ್ತ ಹೋಗುವುದು ನಿರಪಾಯದ ದಾರಿ.

## ಮುಖ್ಯ ಮೂಲತತ್ತ್ವಗಳು

ದೆಹಲಿಯ ಶಾಸನವು ಒಂದು ಮೂಲತತ್ತ್ವವನ್ನು ನಿಸ್ಸಂದೇಹವಾಗಿ ಸ್ಥಾಪಿಸಿದೆ. ಅದು ಪ್ರಜಾಸ್ವಾಮ್ಯದ ತತ್ತ್ವ. ರಾಜ್ಯದ ಯಾವದ್ವಿಶಿಷ್ಟ ಅಧಿಕಾರವೂ ಪ್ರಜೆಯಿಂದ ಉದಿಸಿದ್ದು; ಅದು ಪ್ರಜಾಭಿಪ್ರಾಯಕ್ಕೆ ಅನುಸಾರವಾಗಿ ವಿನಿಯೋಗವಾಗಬೇಕಾದದ್ದು. ಇದು ನಮ್ಮ ಹೊಸ ರಾಜ್ಯನಿಬಂಧನೆಗೆ ಮೂಲಾಧಾರವಾಗಿರುವ ಸಿದ್ಧಾಂತ. ದೇಶದ ಸಮಸ್ತ ಪ್ರಜೆಯೂ (೧) ತನ್ನ ಪ್ರತಿನಿಧಿಗಳನ್ನಾರಿಸಿ ರಾಜ್ಯದ ಶಾಸನಸಂಸ್ಥೆಯನ್ನು ನಿರ್ಮಾಣಮಾಡತಕ್ಕದ್ದು. (೨) ಆ ಶಾಸನ ಸಂಸ್ಥೆಯ ಸೂಚನೆ ತೀರ್ಮಾನಗಳ ಮೇರೆಗೆ ಸಮಸ್ತ ರಾಜ್ಯ ಕಾರ್ಯಗಳೂ ನಡೆಯತಕ್ಕದ್ದು. ಮತ್ತು ಆ ಸಂಸ್ಥೆಯ ಅಧಿಕಾರವನ್ನು ಮೀರಿ ಯಾರೂ ನಡೆಯತಕ್ಕದ್ದಲ್ಲ. (೩) ಆಡಳಿತೆಗಳನ್ನು ನಡೆಸುವ ಮಂತ್ರಿಸಂಪುಟವು ಆ ಶಾಸನ ಸಂಸ್ಥೆಗೆ ವಿಧೇಯವಾಗಿ, ಅದರ ದಂಡನೆಗೆ ಒಳಪಟ್ಟದ್ದಾಗಿ, ಇರತಕ್ಕದ್ದು. (೪) ಆ ಶಾಸನ ಸಂಸ್ಥೆಯು ರಚಿಸುವ ಕಾನೂನು ಕಾಯಿದೆಗಳನ್ನು ವಿವಾದ ಸಂದರ್ಭಗಳಿಗೆ ಅನ್ವಯಿಸಿ ನ್ಯಾಯನಿರ್ಣಯ ಮಾಡಲು ನಿಷ್ಪಕ್ಷಪಾತವೂ ಪೂರ್ಣ ಸ್ವತಂತ್ರವೂ ಆದ ನ್ಯಾಯಾಸ್ಥಾನಗಳಿರತಕ್ಕದ್ದು. (೫) ಸಾಮಾನ್ಯವಾದ ರಾಜ್ಯವ್ಯವಸ್ಥೆಯು ಯಾವುದಾದರೂ ಅನಿರೀಕ್ಷಿತವಾದ ಕಾರಣದಿಂದ ಭಗ್ನವಾಗುವ ಸಂದರ್ಭ ತೋರಿದರೆ, ಅಂಥಾ ವಿಷಮ ಪರಿಸ್ಥಿತಿಯಲ್ಲಿ ತಕ್ಕ ಪರಿಹಾರ ಕಾರ್ಯವನ್ನು ಕೈಕೊಳ್ಳುವುದಕ್ಕೂ ಹೆಚ್ಚಿಗೆ ಜವಾಬ್ದಾರಿಯುಳ್ಳ ಕೆಲವು ನಿರ್ದಿಷ್ಟ ಅಧಿಕಾರಸ್ಥಾನಗಳಿಗೆ ಯೋಗ್ಯ ಜನರನ್ನು ನಿಯಮಿಸುವುದಕ್ಕೂ ಕೆಲವು ಅಸಾಧಾರಣ ಸಂದರ್ಭಗಳಲ್ಲಿ ಅಸಾಧಾರಣ ಅಧಿಕಾರಗಳನ್ನು ಪ್ರಯೋಗಿಸುವುದಕ್ಕೂ ಪ್ರಜಾಸಮುದಾಯದಿಂದ ಚುನಾಯಿಸಲ್ಪಟ್ಟವರಾದ (President ಪ್ರೆಸಿಡೆಂಟ) ರಾಷ್ಟ್ರಾಧ್ಯಕ್ಷರಿಗೆ ವಿಶೇಷಾಧಿಕಾರವನ್ನು ಕೈಗಾವಲಾಗಿ ವಹಿಸಿಕೊಟ್ಟಿರತಕ್ಕದ್ದು. (೬) ಪ್ರಜಾವ್ಯಕ್ತಿಗೂ ಪ್ರಜಾಪದವಿಗೂ ಸೇರಿರುವ ಮೂಲಭೂತವಾದ ಹಕ್ಕುಗಳು,-ಎಂದರೆ ವಾಕ್‌ಸ್ವಾತಂತ್ರ್ಯ, ಸಂಘಸ್ವಾತಂತ್ರ್ಯ, ಮತಾಚಾರ ಸಂಸ್ಕೃತಿ ಸ್ವಾತಂತ್ರ್ಯ, ಉದ್ಯೋಗಸ್ವಾತಂತ್ರ್ಯ, ಸಂಚಾರ ಸ್ವಾತಂತ್ರ್ಯ, ಸಂಪಾದನೆ ಶೇಖರಣೆಯ ಸ್ವಾತಂತ್ರ್ಯ ಮುಂತಾದವು,– ಯಾವೊಬ್ಬ ಅಧಿಕಾರಿಯ ಸ್ವೇಚ್ಛಾನಿರ್ಬಂಧಕ್ಕೂ ಒಳಪಡದೆ, ಶಾಸನಸಂಸ್ಥೆ ಆಗಿಂದಾಗ್ಗೆ ರಚಿಸುವ ಕಾನೂನಿನ ಮೂಲಕವಾಗಲ್ಲದೆ ಬೇರೆ ಯಾವ ವಿಧದಲ್ಲಿಯೂ ಕುಂಠಿತವಾಗದೆ ಇರತಕ್ಕದ್ದು. ಈ ಆರು ನಿಯಮಗಳೂ ದೆಹಲಿಯ ನಿಬಂಧನೆಯಲ್ಲಿ ಕಾಣಬರುತ್ತವೆ. ಇವು ಪ್ರಜಾರಾಜ್ಯಕ್ಕೆ ಇರಬೇಕಾದ ಪ್ರಾಥಮಿಕ ಲಕ್ಷಣಗಳು.

## ಜನದ ಜವಾಬ್ದಾರಿ

ಹೀಗೆ ಪ್ರಜಾತತ್ವವು ರಾಜ್ಯನಿಬಂಧನೆಯ ಎಲ್ಲ ಶಾಖೋಪಶಾಖೆಗಳಲ್ಲೂ ವ್ಯಾಪಿಸಿಕೊಂಡಿರುವುದರಿಂದ ಆ ನಿಬಂಧನೆಯ ಪ್ರಕಾರ ನಡೆಯುವ ಸರಕಾರದ ಯಶಸ್ಸು ಅಪಯಶಸ್ಸುಗಳು ಕಡೆಯ ತೀರ್ಮಾನದಲ್ಲಿ ಪ್ರಜೆಯ ತಲೆಗೇ ಕಟ್ಟದ್ದೆಂಬುದು ಎಲ್ಲರಿಗೂ ಸ್ಪಷ್ಟವಾಗಿ ತೋರಬಹುದಾದ ಸಂಗತಿ. ಈ ಹೊಸ ವ್ಯವಸ್ಥೆಯ ಜವಾಬ್ದಾರಿಯ ಹೊರೆ ಪ್ರಜೆಯ ತಲೆಯಮೇಲೆ ಕುಳಿತಿದೆ. ಆ ಜವಾಬ್ದಾರಿಗೆ ನಮ್ಮ ಜನ ತಕ್ಕ ಸಿದ್ಧತೆಯನ್ನು ಮಾಡಿಕೊಂಡಿದ್ದಾರೆಯೆ? ಇದು ನಮ್ಮ ದೇಶದ ಭವಿಷ್ಯಕ್ಕೆಲ್ಲ ಮೂಲಭೂತವಾಗಿರುವ ಪ್ರಶ್ನೆ. ಜನ ತಕ್ಕ ಸಿದ್ಧತೆಯನ್ನು ಮಾಡಿಕೊಳ್ಳದಿದ್ದರೆ ನಮ್ಮ ಹೊಸ ನಿಬಂಧನೆ ಅವ್ಯವಸ್ಥೆಗೇ ದಾರಿಮಾಡೀತು. ಪ್ರಜಾರಾಜ್ಯಪದ್ಧತಿಯು ಮೊದಲು ವಿವೇಕಿಯಾದ ಪ್ರಜೆಯನ್ನಪೇಕ್ಷಿಸುತ್ತದೆ. ಹಾಗಾದರೆ ಪ್ರಜೆಯಲ್ಲಿರಬೇಕಾದ ಸಿದ್ಧತೆ ಎಂಥಾದ್ದು? ಅದನ್ನು ಸ್ವಲ್ಪ ನೋಡೋಣ.

## ರಾಷ್ಟ್ರಿಕನ ಯೋಗ್ಯತೆ

ಪ್ರಜಾಸಮುದಾಯಕ್ಕೆ ಯಾವಾಗಲೂ ನೂರಾರು ಕೊರತೆಗಳೂ ನೂರಾರು ಆಶೆಗಳೂ ಇರಲೇ ಇರುತ್ತವಷ್ಟೆ? ಕೊರತೆಗಳನ್ನು ಹೋಗಲಾಡಿಸುವುದಕ್ಕಾಗಿಯೂ ಅನುಕೂಲತೆಗಳನ್ನು ಕಲ್ಪಿಸುವುದಕ್ಕಾಗಿಯೂ ಬುದ್ಧಿವಂತರೂ ಬಾಯುಂಟಾದವರೂ ನೂರಾರು ಸಲಹೆಗಳನ್ನೂ ಸೂಚನೆಗಳನ್ನೂ ಕೊಡುತ್ತಿರುತ್ತಾರಷ್ಟೆ. ಇಂಥ ಸಲಹೆ ಸೂಚನೆಗಳ ಆಧಾರದ ಮೇಲೆ ರಾಜಕೀಯ ಪಕ್ಷಗಳು ಹುಟ್ಟಿಕೊಳ್ಳುತ್ತವೆ. ಪ್ರಜಾಜನರು ತಮ್ಮ ಪ್ರತಿನಿಧಿಗಳನ್ನಾರಿಸಬೇಕಾದ ಕಾಲಬಂದಾಗ ಆ ನಾನಾ ಪಕ್ಷಗಳು ತಮ್ಮ ತಮ್ಮ ಧ್ಯೇಯಗಳನ್ನೂ ಕಾರ್ಯಯೋಜನೆಗಳನ್ನೂ ಚುನಾವಣೆಗಾರರ ಮುಂದಿರಿಸುತ್ತವೆ. ಹೀಗೆ ನಾನಾ ಪಕ್ಷ ಕಕ್ಷಿಗಳು ತಮ್ಮ ಮುಂದಿರಿಸುವ ಯೋಜನೆಗಳ ಗುಣದೋಷಗಳನ್ನು ತೂಗಿಸಿ ನೋಡಿ ಯಾವುದಕ್ಕಿಂತ ಯಾವುದು ಉತ್ತಮ ಎಂದು ನಿರ್ಧರಿಸುವುದು ಪ್ರತಿನಿಧಿವರಣಕರ್ತನ ಕರ್ತವ್ಯವಾಗುತ್ತದೆ. ವರಣಕರ್ತನು (ಎಲೆಕ್ಟರ್ Elector) ಎಂದರೆ, ಚುನಾವಣೆಯ ಹಕ್ಕುಳ್ಳ ಪ್ರಜೆ—ದೇಶದ ಮುಂದಿರುವ ಪ್ರಶ್ನೆಗಳ ಸ್ವಭಾವವನ್ನರಿತುಕೊಳ್ಳುವಶಕ್ತಿಯುಳ್ಳವನಾಗಿ, ತನ್ನ ಅಭಿಮತವನ್ನು (ವೋಟ್ Vote) ಬೇಡುವ ನಾನಾ ಪಕ್ಷಗಳ ಮತ್ತು ಅವುಗಳ ಉಮೇದುವಾರರ ಯೋಗ್ಯತಾ ಯೋಗ್ಯತೆಗಳನ್ನು ತೋಲನ ಮಾಡಬಲ್ಲವನಾಗಿರಬೇಕು. ಎಂದರೆ, ಅವನಿಗೆ ಒಂದಿಷ್ಟು ಲೋಕಾನುಭವವೂ ರಾಜ್ಯವಿಷಯಜ್ಞಾನವೂ ಯುಕ್ತಾಯುಕ್ತವಿವೇಚನಶಕ್ತಿಯೂ ಇರಬೇಕು. ಈ ಜ್ಞಾನ ಶಕ್ತಿಗಳು ಅವನಲ್ಲಿಲ್ಲದೆ ಹೋದರೆ ಅವನು ಕೊಡುವ ಅಭಿಮತವು ಕುರುಡನೆಸೆದ ಕಲ್ಲಾದೀತು. ಪ್ರತಿನಿಧಿವರಣ ಕೆಟ್ಟು ಹೋದರೆ ಶಾಸನ ಸಂಸ್ಥೆ ಕೆಟ್ಟು ಹೋಗುತ್ತದೆ. ರಾಜ್ಯಜೀವನಕ್ಕೆಲ್ಲ ಮೂಲಭೂತವಾದ ಶಾಸನಸಂಸ್ಥೆಯೇ ಕೆಟ್ಟುದಾದಲ್ಲಿ ದೇಶದ ಒಳ್ಳೆಯ ಜೀವನಕ್ಕೆ ಆಶೆಯೇನಿದ್ದೀತು? ಆಗ ಮಂತ್ರಿಸಂಪುಟವೂ ಕೆಟ್ಟೀತು, ಎಲ್ಲವೂ ನಷ್ಟವಾದೀತು. ಚುನಾವಣೆಗಾರನು ತಕ್ಕಷ್ಟು ಜ್ಞಾನಶಕ್ತಿವಂತನಾಗಿರಬೇಕಾದರೆ, ಅವನು ಒಂದಿಷ್ಟು ಓದುಬರಹ ಬಲ್ಲವನಾಗಿ ದೇಶದ ವೃತ್ತಪತ್ರಿಕೆಗಳನ್ನೂ ರಾಜ್ಯವ್ಯವಹಾರಕ್ಕೆ ಸಂಬಂಧಪಟ್ಟ

ಲೇಖನಗಳನ್ನೂ ಓದಿ ಚರ್ಚೆ ಮಾಡಲು ಸಮರ್ಥನಾಗಿರಬೇಕು. ಒಟ್ಟಿನಲ್ಲಿ ಅವನಿಗೆ ಕೊಂಚವಾದರೂ ಅಕ್ಷರವಿದ್ಯೆ ಇರಬೇಕು.

ದೆಹಲಿಯ ಸಭೆ ಈ ವಿಚಾರಕ್ಕೆ ತಕ್ಕಷ್ಟು ಹೆಚ್ಚಾಗಿ ಗಮನ ಕೊಟ್ಟಿರುವಂತಿಲ್ಲ. ೨೧ ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನವರೆಲ್ಲ, ಅವರಿಗೆ ವಿದ್ಯಾಗಂಧವಿರಲಿ ಇಲ್ಲದಿರಲಿ, ವರಣಕರ್ತರಾಗತಕ್ಕದ್ದೆಂದು ದೆಹಲಿಯ ನಿಬಂಧನೆ. ಇಂಥವರ ಸಂಖ್ಯೆ ಈಗ ೧೭ರಿಂದ ೧೮ ಕೋಟಿಯ ವರೆಗೂ ಆಗಬಹುದೆಂದು ಅಂದಾಜು ತೋರಿದೆ. ಅಕ್ಷರ ಪರಿಜ್ಞಾನ ಕೂಡ ಇಲ್ಲದವರದೇ ಅದರಲ್ಲಿ ಅಧಿಕಸಂಖ್ಯೆ. ಅಂಥವರ ಕುರುಡ ಕೈಯಾಟವನ್ನವಲಂಬಿಸಿಕೊಂಡಿರಬೇಕಾಗಿದೆ ನಮ್ಮ ಭವಿಷ್ಯ. ಈ ಸಂದರ್ಭ ಎಂಥವರನ್ನೂ ನಿಶ್ಚಿಂತೆಯಲ್ಲಿ ಬಿಟ್ಟಿರಲಾರದು.

### ಸಾರ್ವಜನಿಕ ಮನಸ್ಸು

ಇಂಗ್ಲೆಂಡ್ ಅಮೇರಿಕಗಳಂತೆ ನಾವೂ ಪ್ರಗತಿಪಥದಲ್ಲಿ ಸಾಗಬೇಕೆಂಬ ಆಶೆಯಿಂದ ಆ ದೇಶಗಳ ಸಾರ್ವಜನಿಕ ಸಂಸ್ಥೆಗಳನ್ನು ನಾವು ಇಲ್ಲಿ ಅನುಕರಿಸಿಕೊಂಡಿದ್ದೇವೆ. ಅಲ್ಲಿಯಂತೆ ಮ್ಯುನಿಸಿಪಾಲಿಟಿಗಳು, ಸಹಕಾರ ಸಂಘಗಳು, ಜಾತಿವಿಜಾತಿ ಸಂಘಗಳು, ಬಗೆಬಗೆಯ ಕಮಿಟಿಗಳು, ಕಾನ್ಫರೆನ್ಸುಗಳು ಇವುಗಳನ್ನೆಲ್ಲ ಪ್ರಾರಂಭಿಸುತ್ತೇವೆ. ಆದರೆ ಇಂಥ ಸಾರ್ವಜನಿಕ ಸಂಸ್ಥೆಗಳು ಆ ದೇಶಗಳಲ್ಲಿ ಕೆಲಸ ಮಾಡುತ್ತವೆ, ಮಾಡಿ ಕೃತಕೃತ್ಯಗಳಾಗುತ್ತವೆ. ನಮ್ಮಲ್ಲಿ ಅವು ಕೆಲಸ ಮಾಡುವುದಿಲ್ಲ, ಕೆಲಸದ ಆಟವನ್ನು ಆಡುತ್ತವೆ. ಇದಕ್ಕೇನು ಕಾರಣ? ಆ ದೇಶಗಳಲ್ಲಿ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಸಾರ್ವಜನಿಕ ಮನೋವೃತ್ತಿ ಪಬ್ಲಿಕ್ ಸ್ಪಿರಿಟ್ (Public spirit) ಅಷ್ಟಿಷ್ಟಾದರೂ ನೈಜವಾಗಿ ಇರುತ್ತದೆ. ಈ ಗುಣ ನಮ್ಮಲ್ಲಿ ಹಾಗೆ ಸಹಜವಾಗಿರುವುದು ತೀರಾ ಅಪರೂಪ. ಇದಕ್ಕೆ ಕಾರಣ ನಮ್ಮ ನೂರಾರು ವರ್ಷಗಳ ಪರಾಧೀನ ಸ್ಥಿತಿಯೆಂದು ಹೇಳಬಹುದು. ಕಾರಣವೇನೇ ಇರಲಿ, ವಸ್ತುಸ್ಥಿತಿಯಂತೂ ಅತೃಪ್ತಿಕರವಾದದ್ದು.

ನಮ್ಮ ಸ್ಥಳೀಯ ಸಂಸ್ಥೆಗಳೂ ಸಣ್ಣ ಪುಟ್ಟ ಸಮಿತಿಗಳೂ ಸರಿಯಾಗಿ ಕೆಲಸ ಮಾಡದಿರುವಲ್ಲಿ ನಮ್ಮ ದೊಡ್ಡ ಪ್ರಜಾಪ್ರತಿನಿಧಿ ಸಂಸ್ಥೆ ಬಹು ಚನ್ನಾಗಿ ಕೆಲಸ ಮಾಡೀತೆಂದು ನಂಬುವುದು ಹೇಗೆ?

ಇಂಗ್ಲೆಂಡಿನ ರಾಜಕೀಯದ ಉತ್ಕೃಷ್ಟತೆಗೆ ಮೂಲ ಕಾರಣ ಅಲ್ಲಿಯ ಜನದಲ್ಲಿರುವ ಸ್ವತಃಪ್ರವೃತ್ತವಾದ ಸಾರ್ವಜನಿಕ ಮನೋಭಾವ ( Voluntary public spirit ) ಇಂಗ್ಲೆಂಡಿನ ಸಾರ್ವಜನಿಕ ಕಾರ್ಯಗಳು ಕಾನೂನಿನ ಬಲಾತ್ಕಾರದಿಂದಲಾಗಲಿ, ಯಾವ ಒಂದು ಹೊರಗಣ ನಿರ್ಬಂಧದಿಂದಲಾಗಲಿ ನಡೆಯುತ್ತಿಲ್ಲ. ಅವು ಜನದಲ್ಲಿ ಸ್ವತಃ ಉದಿಸಿ ವ್ಯಕ್ತವಾಗುವ ಸಾರ್ವಜನಿಕಾಭಿಮಾನದಿಂದ ನಡೆಯುತ್ತವೆ. ಇಂಗ್ಲೆಂಡಿನ ರಾಜ್ಯನಿಬಂಧನೆಯ ಅಭಿವೃದ್ಧಿಯೂ ಹಾಗೆಯೆ. ಜನದ ನೈಜವಾದ ಸಾರ್ವಜನಿಕಾಭಿಮಾನದಿಂದ ಊರ್ಜಿತವಾಗುತ್ತದೆ. ಈ ಪಾಠವನ್ನು ನಮ್ಮ ಜನ ಮೊದಲು ಕಲಿಯಬೇಕು— ನಮ್ಮ ರಾಜಕೀಯ ಆಕಾಂಕ್ಷೆಗಳು ಕೈಗೂಡಬೇಕಾದರೆ.

### ವಿದ್ಯಾವಂತರ ಕರ್ತವ್ಯ

ದೆಹಲಿಯ ನಿಬಂಧನೆಯಿಂದ ಸಂಭವಿಸಬಹುದಾದ ಸನ್ನಿವೇಶ ಇಷ್ಟು ವಿಷಮವೆನಿಸಿ ತೋರುವುದರಿಂದ, ದೇಶದಲ್ಲಿರುವ ವಿದ್ಯಾವಂತರು ಈಗ ಮಾಡಬೇಕಾದ ಕರ್ತವ್ಯವೇನು? ಅವರು ತಮ್ಮ ತಮ್ಮ ಪ್ರಜಾಧರ್ಮದ ಭಾರದ ಜೊತೆಗೆ ಅವಿದ್ಯಾವಂತರ ಮೇಲಣ ಹೊರೆಯನ್ನೂ ಹೊತ್ತುಕೊಳ್ಳಬೇಕು. ಎಂದರೆ ತಾವು ರಾಜಕೀಯ ವಿವೇಕವನ್ನು ಸಂಪಾದಿಸಿಕೊಂಡು, ವಿದ್ಯಾವಂತರಲ್ಲದವರಲ್ಲಿ ಆ ವಿವೇಕವನ್ನು ಹರಡಬೇಕು. ಇದು ಅತ್ಯಂತ ಮಹತ್ವದ ಕೆಲಸ. ವಿದ್ಯಾವಂತರು ವಿದ್ಯಾರಹಿತ ಜನರಲ್ಲಿ ಪದೇಪದೇ ಮಿಳಿತರಾಗಿ ಉಪನ್ಯಾಸಗಳ ಮೂಲಕವೂ ಸಂಭಾಷಣೆಗಳ ಮೂಲಕವೂ ಪ್ರದರ್ಶನಗಳ ಮೂಲಕವೂ ರಾಜಕೀಯ ಪರಿಜ್ಞಾನವನ್ನೂ ಅದಕ್ಕೆ ಸಹಕಾರಿಗಳಾದ ಬಗೆಬಗೆಯ ಸಾಮಾಜಿಕ ಪರಿಜ್ಞಾನಗಳನ್ನೂ ಪ್ರಸಾರ ಮಾಡಬೇಕು. ಹೀಗೆ ವಿದ್ಯಾವಂತರ ಜವಾಬ್ದಾರಿ ಈಗ ಇಮ್ಮಡಿಯಾಗಿದೆ.

ಒಟ್ಟಿನ ಮೇಲೆ, ರಾಜ್ಯಭಾರವೆಂಬುದು ಸಾಹಸದ ಉದ್ಯೋಗ. ಅದು ಮನುಷ್ಯನು ಪ್ರಕೃತಿಶಕ್ತಿಗಳೊಡನೆ ಮಾಡುವ ಸ್ಪರ್ಧೆ. ರಾಜ್ಯಾಧಿಕಾರವನ್ನು ಕೈಕೊಳ್ಳುವವರು ಅದೃಷ್ಟವನ್ನು ಸೆಣಸ ಹೊರಟವರು. ವಿಧಿ ಮಾಡಿದ ಏರ್ಪಾಟುಗಳನ್ನು ತಿದ್ದಿ ಸರಿಪಡಿಸಬಲ್ಲೆನೆಂದು ಮುನ್ನುಗ್ಗುವವನು ರಾಜ್ಯಕಾರ್ಯಕರ್ತ. ಅಂಥ ಸಾಹಸವ್ಯಾಪಾರ ಅಷ್ಟಿಷ್ಟಾದರೂ ಸಫಲವಾಗಬೇಕಾದರೆ ಮನುಷ್ಯ ಪ್ರಪಂಚದಲ್ಲಿ ಅವನಿಗೆ ದೊರೆಯಬಹುದಾದ ಸಹಾಯ ಒಂದೇ— ಅದು ನೈಜವಾದ ದೇಶಪ್ರೇಮವೂ ಜಾಗರೂಕವಾದ ರಾಜಕೀಯ ವಿವೇಕವೂ ಉಳ್ಳ ಪ್ರಜಾಜನ. ರಾಜ್ಯನಿಬಂಧನೆ ನಿಜವಾಗಿರುವುದು ಶಾಸನ ಗ್ರಂಥದಲ್ಲಲ್ಲ, ಜನದ ಮನೋಬುದ್ಧಿಗಳಲ್ಲಿ. ಪ್ರಜೆಯಂತೆ ರಾಜ್ಯ.

# "ಪಾಂಚಜನ್ಯ"ದ ಪಾಂಚಜನ್ಯ

ಲೇಖಕರು :
ಶ್ರೀ. ಆರ್. ಬಿ. ಕುಲಕರ್ಣಿ
ಬಿ. ಎ.

(ಏಕಾಂಕ)

## ಪಾತ್ರಗಳು

**ದೊಡ್ಡಣ್ಣ**— ಪಾಂಚಜನ್ಯ ಪತ್ರಿಕೆಯ ಸಂಪಾದಕ.

**ಚಿಕ್ಕಪ್ಪ**— ಅದೇ ಪತ್ರಿಕೆಯ ಉಪಸಂಪಾದಕ.

**ಬಸಪ್ಪ**— ಕಂಪೋಜಿಟರ.

**ಹಿರೆಣ್ಣ** — ಹಳ್ಳಿಯ ಪ್ರತಿಷ್ಠಿತ ರೈತ.

**ಶ್ಯಾಮಣ್ಣ** — ಶ್ರೀಮಂತ ಅಣ್ಣಾ ಅವರ ಮಗ, ಚುನಾವಣೆಗೆ ನಿಲ್ಲುವ ಹವ್ಯಾಸವುಳ್ಳ ತರುಣ.

**ನಟರಾಜನ್** – ರಂಭಾ ಆ್ಯಂಡ್ ಕಂಪನಿಯ ಪ್ರಚಾರಕ.

[ ತೆರೆಯು ಮೇಲೆದ್ದಾಗ ದೊಡ್ಡಣ್ಣ ಪಾಂಚಜನ್ಯ ಪತ್ರಿಕಾ ಕಾರ್ಯಾಲಯದಲ್ಲಿ ಒಂದು ಕುರ್ಚಿಯ ಮೇಲೆ ಕುಳಿತು ಎದುರಿಗಿರುವ ಟೇಬಲ್ಲಿನ ಮೇಲಿನ ಪತ್ರಗಳ ರಾಶಿಯಿಂದ ಒಂದೊಂದೇ ಪತ್ರವನ್ನು ಓದುತ್ತಿರುವನು. ಸಮಯ ರಾತ್ರಿ ಒಂಬತ್ತು ಗಂಟೆ. ಟೇಬಲ್ಲಿನ ಮೇಲೆ ಪತ್ರಗಳಲ್ಲದೇ ಒಂದು call bell ಇದೆ. ಮತ್ತು ಸಂಪಾದಕರ ಕುರ್ಚಿ-ಮೇಜುಗಳ ಎದುರು ಬದಿಯಲ್ಲಿ ಒಂದೆರಡು ಕುರ್ಚಿಗಳಿವೆ. ರಂಗದ ಎರಡೂ ಮಗ್ಗಲು ಕೋಣೆಗಳಿರುವಂತೆ ಏರ್ಪಡಿಸಬೇಕು. ]

ದೊಡ್ಡಣ್ಣ —(ತಿರಸ್ಕಾರದಿಂದ) ಹಾಳು ಪತ್ರಗಳು, ಎಲ್ಲದರಲ್ಲೂ ಒಂದೇ ಸ್ವರ, ಒಂದೇ ರಾಗ. ಪಾಂಚಜನ್ಯ ಪತ್ರಿಕೆಯ ಧೋರಣ ಉಗ್ರವಾಗಬೇಕು. ಇವರಿಗೇನು ಗೊತ್ತು ಸರಕಾರದ ಕೃಪಾಕಟಾಕ್ಷ ಇಗಾಗಲೇ ಪಾಂಚಜನ್ಯದ ಮೇಲೆ ಬಿದ್ದಿದೆಯೆಂಬುದು? ಇರಲಿ, ಚಿಕ್ಕಪ್ಪ ಇನ್ನು ಬರಲಿಲ್ಲವಲ್ಲ, ಬಂದು ತನ್ನ ಕೋಣೆಯಲ್ಲಿ ಕುಳಿತಿರುವನೋ ಏನು? (call bell ಬಾರಿಸುವನು. ಯಾರೂ ಬರುವದಿಲ್ಲ. ಸಿಟ್ಟಿನಿಂದ ಮತ್ತೊಮ್ಮೆ ಬಾರಿಸುವನು. ರಂಗದ ಎಡಮಗ್ಗಲಿನ ಕೋಣೆಯಿಂದ ಆಧುನಿಕ ವೇಷಧಾರಿಯಾದ ಯುವಕನು ಮುಗುಳ್ನಗೆ ನಗುತ್ತ ಪ್ರವೇಶಿಸುವನು). ಚಿಕ್ಕಪ್ಪಾ ಇದೇನು?(ಪತ್ರಗಳ ರಾಶಿಯಿಂದ ಒಂದು ಪತ್ರ ಹೊರತೆಗೆದು) ಆಹಾರವಿಲ್ಲದೇ ನಾಲ್ವರ ಮರಣವೆಂಬ ಸುದ್ದಿ ಸುಳ್ಳೆಂದು ಕಲೆಕ್ಟರರ ಪತ್ರ ಬಂದಿದೆಯಲ್ಲ- ಇದಕ್ಕೇನು ಉತ್ತರಿಸಿದೆ? ಬಡತನದಿಂದ ಆತ್ಮಹತ್ಯೆ ಮಾಡಿಕೊಂಡಿದ್ದಾರೆಂದು ಪ್ರಕಟಿಸಲು ಬರೆದಿದ್ದಾರಲ್ಲ. ಈಗ ಪ್ರಕಟಿಸಿಬಿಟ್ಟಿಯೇನು? ನಾನು ಕಣ್ಣಾರ ಕಂಡ ಸಂಗತಿಯನ್ನು ಪ್ರಕಟಿಸಿದೆ. ಅಧಿಕಾರಿಗಳು ಈಗ ಸುಳ್ಳೆನ್ನುತ್ತಾರೆ. ಸುಳ್ಳೆಂದು ಪ್ರಸಿದ್ಧಿಸಬೇಕು. ಇಲ್ಲವಾದರೆ ಇಲ್ಲವಾದರೆ . . . . (ಅರ್ಧಕ್ಕೆ ತಡೆಯುವನು.)

ಚಿಕ್ಕಪ್ಪ –( ನಡುವೆ ಬಾಯಿಹಾಕಿ ) ಅಡಿರ್ಲಿ ಬಿಡ್ರಿ, ನೀವು ಯಾವಾಗ ಬಂದಿರಿ ? ನೀವು ಹೋದ ಕೆಲಸ ಏನಾತು ? ಅದು ಮುಖ್ಯ ಅದ ನಮಗ.

ದೊಡ್ಡಣ್ಣ– ನಾ ಹೋದ ಕೆಲಸ ಏನಾಗಬೇಕು? ಎಲ್ಲರೂ ಆಶ್ವಾಸನ ಕೊಡುವವರೇ. ಇನ್ನೆರಡು ತಿಂಗಳೊಳಗಾಗಿ ಅವರ ಆಶ್ವಾಸನದಂತೆ ೮--೧೦ ಸಾವಿರ ರೂಪಾಯಿಗಳಾದರೂ ಕೂಡಬೇಕು.

ಚಿಕ್ಕಪ್ಪ -- ಹಂಗಾರ ಈಗ ನೀವು ರೂಪಾಯಿ ತರ್ಲಿಲ್ಲಾ. ಕಂಪೋಜಿಟರ ಪಗಾರ ಮೂರು ತಿಂಗಳಿಂದ ಕೊಟ್ಟಿಲ್ಲಾ. ನಮಗಂತೂ ಬಂದಾಗಿನಿಂದ ಪಗಾರ ಸಿಕ್ಕಿಲ್ಲಂದ್ರೂ ಅಡ್ಡಿಯಿಲ್ಲ. ಮತ್ತು ಮೊನ್ನೆ ಶ್ರೀಮಂತ ಅಣ್ಣಾ ಅವರ ಕಡೆಗೆ ಹೋಗಿದ್ದೆ. ಕಾಗದ ಕಡಿಮೆ ಬಿದ್ದಿತ್ತಂತ. ಆದರೆ ಅವರಿಗೆ ಹಿಂದೆ ತಂದ ಕಾಗದದ ರೊಕ್ಕಾ ಕೊಟ್ಟು ಈಗ ಕಾಗದಕ್ಕೆ ರೊಕ್ಕ ಕೊಟ್ರ ಕಾಗದ ಕೊಡ್ತೇವಿ ಅಂತ ಹೇಳಿದ್ರು.

ದೊಡ್ಡಣ್ಣ — ಆ ಹಿಂದಿನ ಕಾಗದಕ್ಕ ರೊಕ್ಕ ಕೊಡಬೇಕು. ಈಗ ತರೂ ಕಾಗದಕ್ಕ ರೊಕ್ಕ ಕೊಡಬೇಕು. ಅಂದರ ಪೇಪರೂ ನಾವಾಗಿ ತಗದೀವಿ ಅಂತ ಅಂತಾರೇನು ಈಗ? ತಮ್ಮ ಮಗಾ ಚುನಾವಣಿ ವಳಗ ನಿಂದ್ರಾವನ ಇದ್ದಾನ, ಅದಕ್ಕ ನಾ ಪುಕ್ಕಟ ಕಾಗದ ಕೊಡ್ತೇನಿ ಮತ್ತು ನಿನಗೆ ಬೇಕಾದ್ದ ಸಹಾಯ ಮಾಡ್ತೇನಿ, ಅಂತ ತಾವs ಕರದ ಹೇಳಿದ್ದಕ್ಕ ನಾ ಪೇಪರ ಸುರುವು ಮಾಡಿದೆ.

ಚಿಕ್ಕಪ್ಪ– ಮೊನ್ನೆ ಕಾಗದ ಬ್ಲ್ಯಾಕ್ ಮಾರ್ಕೆಟದಾಗ ಮಾರಿದ್ದಕ್ಕೆ ಅವರ ಮಗಾ ಸಿಕ್ಕಿಬಿದ್ದಾ- ಆಗ ಕಾಂಗ್ರೆಸದವರು ಯಾರ್ಯಾರ್ನೊ ಗಂಟುಬಿದ್ದು ಅದರಾಗ ಉಳಿಸಿರಿ ಅಂತಾ ಬೇಡಿಕೊಂಡರಂತ ಶ್ರೀಮಂತ ಅಣ್ಣಾ ಅವರು. ಅವರು ನಿಮ್ಮ ಮಗಾ ಸೋಶಾಲಿಸ್ಟ ಪಕ್ಷಕ್ಕೆ ರಾಜಿನಾಮೆ ಕೊಟ್ಟು ಕಾಂಗ್ರೆಸಕ್ಕೆ ಸೇರಿದರ ಈ ಕೇಸದಾಗಿಂದನೂ ಉಳಸ್ತೇವಿ ಮತ್ತು ಚುನಾವಣಿಗೆ ನಿಲ್ಲಲಿಕ್ಕೆ ಕಾಂಗ್ರೆಸ ಟಿಕೀಟೂ ಕೊಡ್ತೇವಿ ಅಂತಾ ಹೇಳಿದ್ರಂತ.

ದೊಡ್ಡಣ್ಣ — ( ನಡುವೆ ಬಾಯಿ ಹಾಕಿ ) ಹಂಗಾರ ಶ್ಯಾಮಣ್ಣ ಸೋಶಲಿಸ್ಟ ಪಕ್ಷಕ್ಕ ರಾಜೀನಾಮೆ ಕೊಟ್ಟು ಕಾಂಗ್ರೆಸ ಪಕ್ಷ ಸೇರಿದಾ ಅನ್ನು. ಮುಂದ ಗತಿಯಿನ್ನ ?

ಚಿಕ್ಕಪ್ಪ– ಮುಂದ ಗತಿಯೇನು ? ನೀವು ಬರೂತನಕಾ ನಿರ್ವಾಹ ಇದ್ದಿಲ್ಲಾ. ನಾ ಹ್ಯಂಗಾರ ಕೆಲಸಾ ಸಾಗಿಸಿಕೊಂಡು ಬಂದೀನಿ. ನೀವು ಬಂದ್ರಿ. ಇನ್ನ ನಾ ಹೋಗ್ತೇನಿ. ನಿಮಗೆ ಹ್ಯಾಂಗ ತಿಳೀತದ ಹಾಂಗ ಮಾಡ್ರಿ. ಮತ್ತು ಅನುಕೂಲ ಆದ್ರ ನಿಮ್ಮಲ್ಲಿಗೇ ಬರೂಣಂತ. ನಮಸ್ಕಾರ.

ದೊಡ್ಡಣ್ಣ– ಆಂ? ನೀನೂ ಹೋಗ್ತೀದಿ. ಹೋಗು! ಎಲ್ಲರೂ ಹೋಗ್ರಿ. ನಾನೊಬ್ಬನs ಪೇಪರ ನಡೆಸ್ತೇನಿ ಅಂದೆ. ಮುಂದಿಟ್ಟ ಹೆಜ್ಜೆ ಹಿಂದ ಇಡೂ ಸ್ವಭಾವ ನಂದಲ್ಲ. ನಾಳಿನ ಪತ್ರಿಕೆ ಓದಿ ಜನ ಬೆರಳು ಕಚ್ಚಿರಬೇಕು, ಹಾಗೆ ಬರೆಯುವೆ. ನಿಮಗೆ ಆತ್ಮವಿಶ್ವಾಸ ವಿಲ್ಲ, ಧೈರ್ಯವಿಲ್ಲ. ನಾಳಿನ ಸಂಚಿಕೆ Special issue ಮಾಡಿಬಿಡ್ತೇನಿ. ( ಅಷ್ಟರಲ್ಲಿ ಫೋನಿನ ಗಂಟೆ. ಫೋನು ಕೈಯಲ್ಲಿ ಹಿಡಿದು ) ಆಂ ಎಲ್ಲಿಂದ? ಮುಂಬಯಿ ? ಯಾರು ವಸಂತೇನು? ಏನಾತೋ? ಹೌದು. ನಾನೇ ದೊಡ್ಡಣ್ಣ ಮಾತಾಡ್ತೇನಿ. ದವಾಖಾನೆಗೆ ಕಳಿ

ಸಿದ್ಯಾ ? ಡಾಕ್ಟರ ಏನಂತಾರ? ಆಪರೇಶನ ಮಾಡಿ ಕೂಸ ತಗೀ ಬೇಕ ಅಂತಾರ ? ಜೀವಕ್ಕೇನೂ ಧಕ್ಕಿ ಇಲ್ಲ ಹೌದಲ್ಲ? ಆ ಏನಂದಿ? ದೇವರೇ ಕಾಪಾಡಬೇಕು. ನನಗ ಈಗ ಬರೂದಕ್ಕ ಆಗೂದಿಲ್ಲಾ. ವಿಶೇಷ ಕಾಳಜಿ ತಗೊ. ಆಪರೇಶನ ಆದ ಕೂಡ್ಲೆ ಫೋನ ಮಾಡು. ಸಿನೇಮಾಕ್ಕ ಹೋಗುವ ಮುಂದ ಗೋಳಿಬಾರು. ಮತಪ್ರದರ್ಶನ ಓಡಿ ಬರೂ ಮುಂದ ಕಾರು. ಹಾ. ಹಾ. ದೈವ ನೆಟ್ಟಗದ. ಇಲ್ಲಾ ಅಂದರ... ಆಪರೇಶನ ಯಾವಾಗ? ಇನ್ನೊಂದು ತಾಸಿಗೆ. ಆದಕೂಡ್ಲೆ ಫೋನ ಮಾಡು. (ಫೋನ ಕೆಳಗಿಟ್ಟು ಚಿಂತಾಕ್ರಾಂತನಾಗಿ ಬಂದು ಕೂಡ್ರುವನು. ಚಿಕ್ಕಪ್ಪನು ಸುದ್ದಿಗಳ ಹೊರೆಯುನ್ನು ಮೇಜಿನ ಮೇಲಿಟ್ಟು ತಾನು ಹೋಗುವದಾಗಿ ಹೇಳಿ ಹೋಗುವನು.)

ದೊಡ್ಡಪ್ಪ– ( ಒಮ್ಮೆಲೆ ಎಚ್ಚತ್ತವನಂತೆ ) ಏ ಬಸಪ್ಪಾ, ಎಷ್ಟು ಕಂಪೋಜ ಆಗೇದೊ? ೨ನೇ ಮುದ್ರಣ ಎಲ್ಲಿಗೆ ಬಂದದ? ಈ ಕಂಪೋಜಿಟರು ಬ್ಹಾಳ ಆಲಸಿ ಆಗಿ ಬಿಟ್ಟಾರ. ಅವರಾರೆ ಏನು ಮಾಡ್ಯಾರು ? ಮೂರು ತಿಂಗಳ ಪಗಾರ ಕೊಡದಿದ್ರ). ಬಸಪ್ಪನು ಪ್ರೂಫ ಗ್ಯಾಲಿಗಳನ್ನು ಕೈಯಲ್ಲಿ ಹಿಡಿದು ತಂದು ಮೇಜಿನ ಮೇಲಿಡುವನು ). ಎಷ್ಟು ಕಂಪೋಜ ಆಗೇದೊ ?

ಬಸಪ್ಪ – ಈಗ ಮೂರು ಕಾಲಂ ಆಗೇದ್ರಿ. ೨ ನೇ ಮುದ್ರಣಕ್ಕೆ ಇನ್ನ ೨ ಕಾಲಂ ಬೇಕ್ರಿ. ಕೊನೆಯ ಮುದ್ರಣಕ್ಕೆ ಮಾತ್ರ ಪೂರಾ ೭ ಕಾಲಂ ಬೇಕ್ರಿ.

ದೊಡ್ಡಣ್ಣ – (ಪ್ರೂಫ ಗ್ಯಾಲಿಗಳನ್ನು ಕೈಯಲ್ಲಿ ತೆಗೆದುಕೊಂಡು ಇವs ಏನ ಕಂಪೋಜ ಆದ ಸುದ್ದಿ ? (ಓದಲು ಪ್ರಾರಂಭಿಸುವನು) ಕಲಕತ್ತೆಯ ಕಮ್ಯುನಿಸ್ಟರ ಬಿಡುಗಡೆ – ಮೂರ್ಖ ನ್ಯಾಯಾಧೀಶರ ತೀರ್ಪು. ಏ ಬಸಪ್ಪಾ ಏನಿದು? ಮುಖ್ಯ ನ್ಯಾಯಾಧೀಶ ಅಂತ ಇದ್ದದ್ದನ್ನು ಮೂರ್ಖ ಅಂತ ಕಂಪೋಜ ಮಾಡಬೇಕೇನು ? ಹೀಂಗs ಹೋದ್ರೆ ಯಾರ ಮುಖಕ್ಕೆ ಮಸಿ ಹತ್ತದ ಗೊತ್ತದ ಏನ!

ಬಸಪ್ಪ - ಕಮ್ಯುನಿಸ್ಟರ ಬಿಡುಗಡೆ ಮಾಡಾವಾ ಮೂರ್ಖ ನ್ಯಾಯಾಧೀಶ ಇರಬೇಕಂತ ನಾ ಹಾಕಂತ ಹೇಳಿದ್ನಿರಿ.

ದೊಡ್ಡಣ್ಣ - ಸಾಕ ನಿನ್ನ ಜ್ಞಾನ. ಇಷ್ಟು ಶಾಣ್ಯಾ ಇದ್ರ ನೀನೇ ಸಂಪಾದಕ ಆಗ್ತಿದ್ದಿ (ಮತ್ತೊಂದು ಸುದ್ದಿಯತ್ತ ಹಣಿಕಿಹಾಕಿ) ಪಂಡಿತ ವಿಜಯಲಕ್ಷ್ಮಿಯ – ವರ ಒಪ್ಪಿಗೆ. ರಾಜಕೀಯ ವರ್ಗದಲ್ಲಿ ಆಶ್ಚರ್ಯ – ವರಒಪ್ಪಿಗೆ ಇದರ ಅರ್ಥ ಏನು ? ಅರ್ಥಕ್ಕ ಅನರ್ಥ ಆಗೂ ಹಾಂಗ ಒಂದ ಸಾಲಿನಾಗ ಬರೂ ಅಕ್ಷರ ಎರಡು ಸಾಲಿನಾಗ ಯಾಕ ಹಾಕಿದಿ ?

ಬಸಪ್ಪ -- ಒಂದ ಸಾಲಿನಾಗ ಕೂಡೂದಿಲ್ಲಂತ ಎರಡ ಸಾಲಿನಾಗ ಮಾಡೆದ್ರಿ. ಯಲ್ಲಾದಕ್ಕೆ ನೀವು ಹೀಂಗ ತಪ್ಪ ತಗದ್ರ ನಾ ಕೇಳೂದಿಲ್ಲ ಬಿಡ್ರಿ. ಈ ಧಂದೆದಾಗ ೧೦ ವರುಷ ತಗದೇನ ನಾನು.

ದೊಡ್ಡಣ್ಣ -- ಅಂತs ಇಷ್ಟ ಶಾಣ್ಯಾ ಆಗಿದಿ. ಇದೇನಪಾ ಗವರ್ನರರಿಗೆ ಸಜೆ. ಇಂಥಾ ಸುದ್ದಿಯೆಲ್ಲಾ ಫೀಚರ ಮಾಡಿ ೪೮ ಪಾಯಿಂಟಿನ ಹೆಡ್ಡಿಂಗ ಕೊಡಬೇಕು. ಬುದ್ಧೀನ ಇಲ್ಲಾ.

ಬಸಪ್ಪ -- ಹೆಡಿಂಗ ಬದಲ ಮಾಡಲೇನ್ರಿ ?

ದೊಡ್ಡಣ್ಣ – (ಪೂರ್ಣ ಓದಿದ ನಂತರ) ಗವರ್ನರರಿಗೆ ರಜೆ ಅಂತ ಇದ್ದದ್ದನ್ನು ಸಜೆ ಅಂತ ಮಾಡಬೇಕೇನೊ ? ನನಗ ಸುದ್ದಾ ಮೊದಲ ದಿಗಲ ಬಿತ್ತು. ಮತ್ತ ಇದೇನು ಲಾಲ ಮೆಹತಾರ ವೈಕುಂಠ ಪ್ರಯಾಣ ? ಇದೆಲ್ಲಿ ಸುದ್ದಿ ಇದು ? (ಪೂರ್ಣ ಓದುತ್ತ) ವೈಕುಂಠ ಲಾಲ ಮೆಹತಾರ ಪ್ರಯಾಣ. ಇದನ ಹೀಂಗ ಇಳಸಬೇಕೇನೊ ನಿನ್ನ ಕಿವಿ ಉದ್ದ ಆಗ್ಲಿಕ್ಕೆ ಹತ್ಯಾವೇನು ಬರಬರತ ?

ಬಸಪ್ಪ – ಉದ್ದುದ್ದ ಹೆಸರ ಸಂಕ್ಷಿಪ್ತ ಮಾಡಿ ಕೊಡೂದಿಲ್ಲ. ಕಡೀ ಶಬ್ದ ಹಿಡಿಯಲಿಲ್ಲ. ತೆಳಗಿನ ಸಾಲಿಗೆ ಇಳಿಸ ಅಂತ ಹೇಳಿದ್ನಿ. ಅವಾ ಕಡೀದರ ಬದಲು ಮೊದಲಿನಿಂದ ಇಳಿಸಿಬಿಟ್ಟಾನ.

ದೊಡ್ಡಣ್ಣ -- ಹೆಡಿಂಗನ್ಯಾಗ ಇಷ್ಟ ತಪ್ಪು. ಒಳಗ ಎಷ್ಟ ಅವನೊ ? ಈ ಸುದ್ದಿ ಕರೆಕ್ಶನ ಮಾಡೂದೆ ಬೆಳತನಕಾ ಆದೀತು. ಯಾವದಾದರೂ ರೌಳ ಜಾಹೀರಾತ ಹಾಕಿ ೨ನೇ ಮುದ್ರಣ ಮುಗಿಸಿಬಿಡು. ಕೊನೆಯ ಮುದ್ರಣಕ ತಿದ್ದಿ ಕೊಡ್ತೀನಿ, ಹಾಕೂವಿ ಅಂತ.

ಬಸಪ್ಪ -- ಅಲ್ಲರಿ. . . . .

ದೊಡ್ಡಣ್ಣ -- (ಸಿಟ್ಟಿನಿಂದ) ಏನ ಅಲ್ಲರಿ ? ಹೋಗ ನಾ ಹೇಳಿದಷ್ಟು ಮಾಡು ಈಗ. (ಬಸಪ್ಪ ಗ್ಯಾಲಿ ಪ್ರೂಫುಗಳನ್ನು ಹಾಗೇ ಬಿಟ್ಟು ಹೋಗುವನು. ಸುದ್ದಿಗಳ ಹೊರೆಯ ಕಡೆಗೆ ಲಕ್ಷ್ಯಹಾಕಿ) ಈ ಸುದ್ದಿ ಎಷ್ಟು ತಂದಿಟ್ಟಾನಿವಾ. ಇವೇನು ನಾಡಹಬ್ಬದ ಪತ್ರಗಳು. ಕರ್ನಾಟಕದ ಭೂಗೋಲು ಬರೆಯುವರು ಈ ಪತ್ರಗಳ ಟಿಪ್ಪಣೆ ತಗೊಂಡರ ಸಾಕು. (ಕೆಲ ಪತ್ರಗಳನ್ನು ತೆಗೆದು ಬದಿಗಿರಿಸಿ) ಇದೇನು ಕರ್ನಾಟಕ ಮಹಾಸಮಿತಿ ಪ್ರಕಟನೆ. ಕರ್ನಾಟಕ ಮಹಾಸಮಿತಿ ಅಂತಾರ ನ್ಯಾಲ ಇಂಗ್ಲೀಷಿನಾಗ ಇವರ ಪ್ರಕಟನಾ. ನಮ್ಮ ಪ್ರಾಣಾ ತಿನ್ನುವ ಹಂಚಿಕಿ. ನಾವು ಅವಸರದೊಳಗೆ ಭಾಷಾಂತರ ಮಾಡಬೇಕು. ಮತ್ತ ತಿದ್ದುಪಡಿ ಹಾಕಿರಿ ಅಂತ ಇವರ ಪ್ರಕಟನಾ. ಇವರು ಕನ್ನಡ ಬರದು ಕಳಸದಿದ್ರ ಪ್ರಕಟಿಸಲೇಬಾರದು. (ಅದನ್ನು ತೆಗೆದು ಬದಿಗಿರಿಸುವನು) ಇದ್ಯಾರ ಪತ್ರ ? “ಶೋಚನೀಯ ನಿಧನ -- ಶ್ರೀ ಇವರ ತಂದೆಯವರು ೯೯ನೇ ವಯಸ್ಸಿನಲ್ಲಿ ದಮ್ಮಿನ ವಿಕಾರದಿಂದ ನಿಧನಹೊಂದಿದರೆಂದು ತಿಳಿಸಲು ವಿಷಾದವಾಗುತ್ತದೆ. ಇವರಿಗೆ ೭ ಗಂಡು ಮಕ್ಕಳೂ ೫ ಹೆಣ್ಣುಮಕ್ಕಳೂ ಇರುವರು. ಇವರು ಬಹಳ ದಯಾಳುವೂ ಬಡವರ ಪ್ರೀತಿಗೆ ಪಾತ್ರರಾದವರೂ ಇದ್ದರು” ಏನು ಸಾಯುವುಂದ ಸತ್ತರೂ ಶೋಚನೀಯ ನಿಧನ. ಬಡವರಿಗೆ ಬ್ಹಾಳ ಸಾಲ ಕೊಡ್ತಿದ್ದ ಕಾಣಸ್ತದ ಪಾಪ ಇವ. ಈ ಸುದ್ದಿಗೆ ಆಸ್ಪದ ಕೊಡೂಹಾಂಗಿಲ್ಲ. (ಪತ್ರಗಳ ರಾಶಿಯತ್ತ ನೋಡಿ) ಅಬ್ಬಾ ಎಷ್ಟ ಪತ್ರಗಳಿವು. ಇನ್ನೂ ಮುಗಿಯಲೇ ಇಲ್ಲ. ಹಿಂಗ ಓದಿಕೋತ ಹೋದ್ರ ಬೆಳತನಕಾ ಆದೀತು ಇನ್ನ ಸುದ್ದಿಯಷ್ಟು ನೋಡೋಣ. . . . .

ಇದೇನು ಪಂ ನೆಹರೂರ ಭಾಷಣ ಹಿಂದುಸ್ತಾನದ ಆಹಾರ ಪರಿಸ್ಥಿತಿ ಭೀಕರವಿಲ್ಲ. ಅಲ್ಲಾ ಕೇಂದ್ರಶಾಸನ ಸಭೆಯವರು ಈ ಮಂತ್ರಿಗಳು ದಿನಾಲು ಭಾಷಣಮಾಡದ್ಹಾಂಗೆ ಒಂದ ಕಾಯ್ದೆ ಯಾಕ ಮಾಡಬಾರ್ದು ? ಎಂದಾದರೊಮ್ಮೆ ಭಾಷಣ ಮಾಡಿದ್ರ ಹೊಸ ವಿಷಯ ಹೇಳಬಹುದು. ಇರಲಿ ದೊಡ್ಡವರ ವಿಚಾರ ನಮಗ್ಯಾಕ ? ಇದಂತೂ ಹಾಕಲಿಕ್ಕೆ ಬೇಕು. ಸಕ್ಕರೆ ಮೇಲೆ ನಿಯಂತ್ರಣ ಹೇರಲಾಗುವದು; ಸಕ್ಕರೆ ಸಂಗ್ರಹ ಪಶವಡಿಸಿಕೊಳ್ಳಲಾಗುವದು. ಸರಿ, ಕಳ್ಳಪೇಟೆಗರಿಗೆ ಸುವರ್ಣಸಂಧಿ ದೊರೆಯುವದು. ಅಂತೂ ಈ ಸುದ್ದಿ ಮಹತ್ವದ್ದು. ಇದನ್ನು ಹಾಕಲಿಕ್ಕೆಬೇಕು. ಗ್ರೀಸದಲ್ಲಿ ಭಾರಿಮಳೆ, ಅಮೇರಿಕೆಯಲ್ಲಿ ತತ್ತಿಯ ಧಾರಣೆ ಏರಿತು. ಪರ್ಸಿಯಾದ ಮುಖ್ಯಮಂತ್ರಿ

ಗಳು ನೆಗಡಿಯಿಂದ ಬಳಲುತಿರುವರು. ಸ್ಟಾಲಿನ್ನರ ಮಗನ ವಿವಾಹ ವಿಚ್ಛೇದ. ಬ್ರಾಝಿಲದಲ್ಲಿ ಒಂದು ನಾವೆ ಮುಳುಗಿ ೨ ಆಡು ಸತ್ತವು. ಜಪಾನದಲ್ಲಿ ಬಿರುಗಾಳಿ ಬೀಸುವ ಸಂಭವ. . . ಅಲ್ಲಾ ಈ ಸುದ್ದಿ ಕಳಿಸುವ ರಾಯುಟರದವರಿಗೂ ಹಿಂದುಸ್ತಾನಕ್ಕೆ ಸುದ್ದಿ ಕಳಿಸ್ತೇವಿ ಅನ್ನೂದು ತಿಳಿಬಾರದು? ಇವೆಲ್ಲಾ ತಗೊಂಡು ನಾವೇನು ಮಾಡೂದು? ಇಲ್ಲಿ ೧|| ರೂ. ಗೆ ಸೇರು ಬೆಣ್ಣಿ ಆದ್ರ, ಜನರು ಉಪವಾಸ ಸತ್ರ ಸುದ್ದಿ ಕಳಸೂದಿಲ್ಲಾ. ಮುಂದಿನ ತಿಂಗಳಿಂದ ವಿದೇಶ ಸುದ್ದಿ ಕಳಸಬ್ಯಾಡಾ ಅಂತ ಬರದಬಿಡೋಣ.

(ಈ ಸಮಯದಲ್ಲಿ ಹಳ್ಳಿಗನೊಬ್ಬನ ಪ್ರವೇಶ. ಗೊಂಗಡಿ ಹೆಗಲಿಗೆ ಹಾಕಿ, ಕೋಲು ಹಿಡಿದುಕೊಂಡಿದ್ದಾನೆ. ತಲೆಗೆ ರಮಾಲ ಸುತ್ತಿದ್ದಾನೆ. ಪಾಂಚಜನ್ಯದ ಸಂಪಾದಕರಾರೆಂದು ಕೇಳುತ್ತ ಪ್ರವೇಶಿಸುತ್ತಾನೆ.)

ದೊಡ್ಡಣ್ಣ – ಯಾಕರಿ ನಾನೇ ಸಂಪಾದಕ. ಏನು ಜಾಹೀರಾತ ಕೊಡಬೇಕಾಗಿತ್ತೇನು ?

ಹಿರೆಣ್ಣ – ಯಾಕರಿ ಬಾಯಿ ಜರಾ ಬಿಗಿಹಿಡಿರಿ. ಹ್ಯಾಂಗ ಕಾಣತೇತಿ. ಜಾಹೀರಾತ ಕೊಡೂ ಮನಸ್ಯಾನಂಗರ ಕಾಣಸತೇನನಾ ? ತನ್ನ ಹೇಣ್ತಿನ ತನ್ನ ಮನೆಯೊಳಗೆ ಇಟಗೊಳ್ಳಲಾಗದ ಹೇಡಿಗಳು ಜಾಹೀರಾತ ಕೊಡತಾವು. ನಾಯೇನು ಅಂತಾ ಮನಿಶ್ಯಾ ಅಲ್ಲ. ಇನ್ನೊಮ್ಮೆ ಜಾಹೀರಾತ ಅಂದರ. . . . .

ದೊಡ್ಡಣ್ಣ— ಸಿಟ್ಟಿಗೇಳಬ್ಯಾಡ್ರಿ. ಏನು ಸುದ್ದಿ ಕೊಡ್ಲಿಕ್ಕೆ ಬಂದಿರೇನು ?

ಹಿರೆಣ್ಣ— ತಲಿಗಿಲಿ ಕೆಟ್ಟದೇನು ಇವತ್ತ ನಿಮ್ಮದು ? ನಾಯೇನ ದೇಶಬಕತರಂಗ ಕಾಣ್ತೇನೇನು ಸುದ್ದಿ ಕೊಡಲಾಕ ?

ದೊಡ್ಡಣ್ಣ— ಹಂಗಾರ ನೀವು ಬಂದದ್ದರ ಯಾತಕ್ಕ ?

ಹಿರೆಣ್ಣ— ಯಾತಕ್ಕ! ತಗಿ ನಿನ್ನ ಕಾಗದ. ಆ ಫಕೀರನ ಹೆಂಡತಿ ಕಾಣಾಪಟ್ಟಿ ಹುಚ್ಚಿ. ಅದನ್ನ ತಂದು ಮನಿವಳಗ ಇಟ್ಟುಕೊಂಡಾನ ಅಂತ ಫಕೀರನ ಕೈಲೆ ನಾಲ್ಕು ರೂಪಾಯಿ ಲಂಚ ತಿಂದು ನೋಟೀಸ ಕೊಟ್ಟೇದಿ. ನೀಯೇನು ನೋಡೀಯಾ? ಹ್ಯಾಂಗ ಬರದಿ ಅದನ? ಅದನ ಅಳಕಿಸಿಬಿಡಬೇಕು.

ದೊಡ್ಡಣ್ಣ— ಛಾಪಿಸಿದ ನೋಟೀಸ ಅಳಕಸಲಿಕ್ಕೆ ಹ್ಯಾಂಗ ಬರ್ತದರಿ? ನೋಟೇಸಿನ ಮಜಕೂರು ಸುಳ್ಳಂತ ನೀವು ಒಂದು ಪ್ರತಿನೋಟೀಸ ಕೊಡ್ರಿ. ಆದರ ಚಾರ್ಜ ಕೊಡರಿ. ಅದನ್ನ ಪ್ರಸಿದ್ಧ ಮಾಡ್ತೇವಿ.

ಹಿರೆಣ್ಣ— ಯಾಕ ಲಂಚದ ಶಿವಿ ಹತ್ತೆದೇನು. ಸುಳ್ಳ ಛಾಪಿಸಿ ರೊಕ್ಕ ಬೇಡತಿ. ಆ ಮೂಳಾ ಫಕೀರ ಹೇಳಿದ್ದೆಲ್ಲ ಸುಳ್ಳು. ಅದಕ ಅವ ರೊಕ್ಕ ಕೊಟ್ಟಾನು, ನಾ ಯಾಕ ಕೊಡಲಿ ?

ದೊಡ್ಡಣ್ಣ— ಖರೇ ಮಜಕೂರ ಹೇಳ್ರಿ. ಪುಕ್ಕಟಿ ಛಾಪಸ್ತೇವಿ.

ಹಿರೆಣ್ಣ— ಖರೇ ದೇವರ ಮುಂದ ಹೇಳಿದಂಗ ಹೇಳ್ತೇನು. ಫಕೀರನ ಹೆಣ್ತಿ ಹುಚ್ಚಿ. ಅದನ ನಿಕಾಲ ಮಾಡಬೇಕಂತ ಬಾವಿಗಿ ನೂಕಿಸಿ ಕೊಂದಬಿಟ್ಟಾನ. ಅದಕ ಮುಕ್ಕಟ ಒಂದ ದಿನಾ ನಾ ಓಡಿಸಿಕೊಂಡಹೋಗಿ ನನ್ನ ಮನ್ಯಾಗ ಆ ಹುಚ್ಚಿನ ಇಟಗೊಂಡೀನಿ, ಇದ ನೋಡಚೀಟಿ ಅಂತಾ ತಿಳೀಬೇಕು ಅಂತ ನೋಟೀಸ ಕೊಟ್ಟಾನಂತ. ಈಗ ಪೋಲೀಸರು ನಾನ ಆ ಹುಚ್ಚಿನ ಬಾವಿಗೆ ನೂಕಿಸಿ ಕೊಂದೀನಿ ಅಂತ ಗಂಟಬಿದ್ದಾರ. ಅದಕ ಆ ಸುದ್ದೀನ ಅಕಳಿಸಿ ಬಿಟ್ರ ನನ್ನ ಹಿಡಿಯೂದಿಲ್ಲಂತ. ಅದಕ್ಕ ಅದನ ಅಳಕಿಸಿಬಿಡು ಅಂತ ಬಂದೀನಿ.

ದೊಡ್ಡಣ್ಣ— ಅದನ ಅಳಕಸಲಿಕ್ಕೆ ಬರೂದಿಲ್ಲಾ. ಆದರ ನಿನ್ನ ಗುರತದ ವಕೀಲ್ರ ಇದ್ರ ಕರಕೊಂಡ ಬಾ. ಅವರ ಹೇಳಿದಂಗ ಮಾಡೂಣಂತ.

[ ಹಿರೆಣ್ಣನು ಕೋಲೂರುತ್ತ ತೆರಳುವನು. ದೊಡ್ಡಣ್ಣನು ತಲೆ ಕೆಳಗೆ ಹಾಕಿ ಬರೆಯುವದರಲ್ಲಿ ಮಗ್ನನಾಗುವನು. ಆಧುನಿಕ ವೇಷಧಾರಿ ಶ್ಯಾಮಣ್ಣನು ನಮಸ್ಕಾರ್ರಿ ಸಂಪಾದಕರೆ ಎಂದು ಪ್ರವೇಶಿಸುವನು. ]

ದೊಡ್ಡಣ್ಣ— ಬರ್ರಿ ಶ್ಯಾಮಣ್ಣನವರ. ಮತ್ತೇನು ಸಮಾಚಾರ? ಭೆಟ್ಟಿ ಆಗ್ದ ಬ್ಹಾಳ ದಿನಸಾ ಆತು.

ಶ್ಯಾಮಣ್ಣ— ನೀವೇನು ನಿಧಿ ಕೂಡಿಸಲಿಕ್ಕಂತ ಊರುರು ತಿರುಗಾಡೀರಿ. ನಿಮ್ಮ ಉಪಸಂಪಾದಕರು ಉಪವ್ಯಾಖ್ಯಪತನ ಮಾಡ್ತಾರೆ. ಅಂದ ಮ್ಯಾಲ ನಮ್ಮ-ನಿಮ್ಮ ಭೆಟ್ಟಿ ಆಗೂದು ಹ್ಯಾಂಗ ?

ದೊಡ್ಡಣ್ಣ— ದೊಡ್ಡವರು ಬಡವರ ಮ್ಯಾಲ ಸಿಟ್ಟಾದರೆ ಹ್ಯಾಂಗರಿ? ಮತ್ತ ನಮ್ಮ ಪೇಪರ ಕೋಟಾ ಅಷ್ಟು ಕೊಡಿಸಿಬಿಡ್ರಿಲಾ. ಸಂಗ್ರಹ ಮುಗೀತ ಬಂದದ.

ಶ್ಯಾಮಣ್ಣ— ನಿಮಗೆ ಪೇಪರ ಕೋಟಾದ್ದೊಂದ್ಕ ಲಕ್ಷ ಅದ. ಇವತ್ತ ಏನ ಮಾಡೀರಿ ಗೊತ್ತದ ಏನು ? ನಮ್ಮ ಪೇಪರು ಅಂತ ನಮ್ಮ ಅಕ್ಕನ ಮಗಾ ತೀರಿಕೊಂಡ ಸುದ್ದಿ ಕೊಟ್ಟ ಕಳಿಸಿದ್ರ ಹೆಸರ ಒಂದ ಇದ್ದಷ್ಟಕ್ಕೆ ನಮ್ಮ ಅಪ್ಪ ತೀರಿಕೊಂಡಾ ಅಂತ ಪ್ರಸಿದ್ಧಿಸಬೇಕ ? ಊರಾಗಿನ ಮಂದೆಲ್ಲಾ ಮುಂಜಾನೆ ಬಂದು ನೋಡಿ ನಿಮ್ಮ ಪೇಪರ ಬಯಕೋತ ಹೋದ್ರು. ಇರಲೆಪ್ಪಾ ಅಂದ್ರ ನಮ್ಮ ಅಪ್ಪರು ಇಷ್ಟರು ಅಳಕೋತಾ ಬಂದು ಕೂತಾರ. ಕಂಟ್ರೋಲ ದಿವಸದಾಗ

## ನೆನಪು

ಅಜರಾಮರದ ಕೀರ್ತಿಯಾರತಿಯನೆತ್ತುತಿರೆ,
ವಿಸ್ಮೃತಿಯು ನಾಸುಬಣ್ಣದ ತೊಡಿಗೆಯಕ್ಕರದಿ
ನಿನ್ನ ಮೂರುತಿಯ ಸಿಂಗರಿಸಿ ಬಣ್ಣಿಸಬೇಕೆ?
ಜಪದ ಶತಧಾರೆಯಲಿ, ಶಪದ ಬಡಿವಿಂಚಿನಲಿ,
ಸತ್ಯಸಾರದ ಸಿರಿಯ ಜಡಿಮಳೆಯ ಕರೆಯಿಸಿದೆ!
ಬಾಳ ಬಂಜರ ಕಳೆದೆ; ವೀರಪ್ರರೋಹಗಳ,
ಪೌರುಷದ ಕಲಿಕೆಗಳನೆಬ್ಬಿಸಿದೆ, ಮಾನಸಿಕೆ
ಯುನ್ನತಿಯ ಹೊಂದೆನೆಯ ತೂಗಿಸಿದೆ ಕನ್ನಡದ
ಮನೆ ಮನೆಯ ಹೊಸ್ತಿಲಲಿ; ಗುರುವೆ! ವಿದ್ಯಾರಣ್ಯ.
ರಾಜಗುರು ಮಾತ್ರನೇ ? ಮಾನವೀಯತೆಯ ಗುರು!
ಮಣ್ಣ ಹೊನ್ನಾಗಿಸಲು ಬಲ್ಲ ರಸಕಲ್ಪಗುರು!
ಕನಸ ಕೃತಿಯಲ್ಲಿ ಕೆತ್ತಿಸಬಲ್ಲ ಶಿಲ್ಪಗುರು!
ಬುದ್ಧಿ ಭಾವನೆಯ ಕತ್ತಲಿಸೆ ಪಾಪಾವಳಿಯು
ನಿನ್ನ ನೆನಹನು ಹಚ್ಚಲೆಮ್ಮ ದೀಪಾವಳಿಯು!

ಕಡೆಂಗೋಡ್ಲು ಶಂಕರಭಟ್ಟ

ಹ್ಯಾಂಗ ಮಾಡಬೇಕು ನಿಮಗೆ ಕಲ್ಪನಾ ಅದನ? ಇನ್ನೂ ನೀವು ಪೇಪರ ನೋಡಿದ್ದಂಗ ಕಾಣಸೂದಿಲ್ಲಾ.

ದೊಡ್ಡಣ್ಣ— (ಪೇಪರನ್ನು ತೆಗೆದು ಓದುತ್ತ) ಶ್ರೀಮಂತ ಅಣ್ಣಾ ಅವರ ನಿಧನ. ಇವರು ಪರಮದಯಾಳುವೂ ಬಡವರ ಕೈವಾರಿಗಳೂ ಆಗಿದ್ದರು. ಇವರ ಆತ್ಮಕ್ಕೆ ಶಾಂತಿ ದೊರೆಯಲಿ. ಹೌದಲ್ರಿ? ಬ್ಹಾಳ ತಪ್ಪಾಗೇದ. ಇದ ಒಂದ ಸಾರೆ ಕ್ಷಮಾ ಮಾಡ್ರಿ. ಅಣ್ಣಾ ಅವರ ಮೇಲಿನ ಪೀಡಾ ಪರಿಹಾರ ಆತು ಅಂತಾ ನಾಳೆ ಅಗ್ರಲೇಖ ಹಾಕಿ ಬಿಡ್ತೇನಿ.

ಶ್ಯಾಮಣ್ಣ— ನಮ್ಮದss ಪೇಪರ ಅಂತ ಕ್ರಮ ತೆಗೆದುಕೊಳ್ಳೊ ಹಂಗಿಲ್ಲ. ಇನ್ನ ಮುಂದರ ಎಚ್ಚರದಿಂದ ಕೆಲಸಾ ಮಾಡ್ರಿ ಆತು. ಹೋಗಿಬರ್ತೇನಿ. ನಾಳೆ ಯಾರ್ನರ ರೊಕ್ಕ ಕೊಟ್ಟ ಕಳಿಸ್ರಿ. ಪೇಪರ ಕೋಟಾ ಕಳಿಸಿಕೊಡ್ತೇನಿ. ಆಂ? ಮರಿಬ್ಯಾಡ್ರಿ. (ಲಗುಬಗೆಯಿಂದ ಹೋಗುವನು).

ದೊಡ್ಡಣ್ಣ—ಪೇಪರ ಏನು ಬ್ಹಾಳ ದಿವಸ ನಡೀಹಂಗ ಕಾಣಸೂದಿಲ್ಲ. ಅದನ ಕೈಹಿಡಿದವರssರೊಕ್ಕ ಕೊಟ್ಟ ಕಳಸರಿ ಪೇಪರ ಕಳಸ್ತೇವಿ ಅಂದ್ರ ಹ್ಯಾಂಗ ನಡೀಬೇಕಿನ್ನ?

[ಅಷ್ಟರಲ್ಲಿ ಬಸಪ್ಪನು ಬಂದು ಲಗೂ ಲಗೂ ಮ್ಯಾಟರ ಕೊಡ್ರಿ ಎಂದು ಅವಸರ ಮಾಡುವನು. ಹೊರಗೆ ಮೋಟಾರ ಬಂದ ಸಪ್ಪಳ ವಾಗುವದು.]

ದೊಡ್ಡಣ್ಣ— ಬಸಪ್ಪ, ಹೊರಗ ಯಾರ ಭಂದ್ರು ನೋಡು.

ಬಸಪ್ಪ— (ಹೊರಗೆ ಹೋಗಿ ಬಂದು) ಸೂಟುಬೂಟಿನವರು ಯಾರೋ ಬಂದಾರ್ರಿ.

[ಸೂಟು ಬೂಟಿನ ವೇಷಧಾರಿಯಾದ ನಟರಾಜನ್ನನ ಪ್ರವೇಶ. ದೊಡ್ಡಣ್ಣನು ಕುರ್ಚಿಯಿಂದ ಎದ್ದು ಬಂದು ಹಲೊ ಎಂದು ಕೈಕುಲುಕಿ ಕೂಡ್ರಿಸುವನು.]

ನಟರಾಜನ— ನಮ್ಮ ಕಂಪನೀದು ಒಂದು ಜಾಹಿರಾತು ಕೊಡಬೇಕಾಗಿತ್ತು. ನಮಗ ಇಲ್ಲಿ ಒಂದು ಕ್ಲಬ್ಬ ತಗಿಯೂದದ. ಅದಕ ವ್ಯವಸ್ಥಾ ಮಾಡುವವರು ಒಬ್ಬರು ಬೇಕಾಗಿತ್ತು.

ದೊಡ್ಡಣ್ಣ— ಕೊಡ್ರಿ. ಎಷ್ಟು ಅರ್ಧ ಪುಟ ಆದ್ರ ಸಾಕಾದೀತೇನು?

ನಟರಾಜನ—ವಿಷಯ ಏನು ಬ್ಹಾಳ ಇಲ್ಲ. ಆದರ ಮಹತ್ವದ್ದು. ಇದ ಈಗ ಹೇಳಿದ್ನೆಲ್ಲಾ ಅದನ್ನೆಲ್ಲಾ ಹಾಕಬೇಕು. ಮತ್ತ ಇವರಿಗೆ ಅಂದರ ನಮ್ಮ ಕ್ಲಬ್ಬಿನ ವ್ಯವಸ್ಥಾಪಕರಿಗೆ ೫೦೦ ರೂ. ಪಗಾರ ಕೊಡ್ತೇವಿ. ಪ್ರವಾಸ ಭತ್ತೆ ಬೋನಸ ವಗೈರೆ ಸಹ ಕೊಡ್ತೇವಿ. ಕ್ವಾಲಿಫಾಯಡ ಇರೂದ ಸಹ ಅವಶ್ಯ ಇಲ್ಲಾ. conduct ಸರ್ಟಿಫಿಕೆಟ್ಟು ಸಹ ಬೇಕಾಗಿಲ್ಲ. ೧೫ ರೂ. ಮನಿಯಾರ್ಡರ ಮಾಡಿ ಅರ್ಜಿ ಫಾರ್ಮ ತರಿಸಿಕೊಬೇಕು. ಅವರಿಗೆ ಎಲ್ಲಾ ಮಾಹಿತಿ ಹೇಳ್ತೇವಿ. ಇಷ್ಟು ವಿಷಯ ಹಾಕೂದದ. ಎಷ್ಟು ಚಾರ್ಜ ಆಗ್ತದ ಹೇಳ್ರಿ.

ದೊಡ್ಡಣ್ಣ— ಅರ್ಧ ಪುಟ ಆದ್ರ ಸಾಕಾದೀತು. ಬ್ಯಾಡಾ ಒಂದು ಪೇಜ ಹಾಕೂನಂತ. ಕನ್ಸೆಶನ ರೇಟು ೨೫೦ ರೂಪಾಯಿ ಕೊಟ್ಟು ಬಿಡ್ರಿ.

[ನಟರಾಜನ ಹ್ಯಾಂಡ ಬ್ಯಾಗಿನಿಂದ ಚೆಕ್ ಪುಸ್ತಕ ತೆಗೆದು ೨೫೦/- ರೂಪಾಯಿಗಳಿಗೆ ಒಂದು ಚೆಕ್ ಬರೆದುಕೊಡುವನು.]

ದೊಡ್ಡಣ್ಣ— (ಚೆಕ್ಕ ತೆಗೆದುಕೊಳ್ಳುತ್ತ) ಮತ್ತೆ ನಿಮ್ಮ ಕಂಪನಿ ಹೆಸರೂ, ಅದರ ಉದ್ದೇಶ ಏನ ಅದೆ ಸ್ವಲ್ಪ ಹೇಳಬಿಡ್ರಿ. ಅಂದ್ರ ಮಾಹಿತಿ ಕೇಳೋ ಅವರಿಗೆ ನಾವ ಹೇಳಬೇಕಾಗ್ತದ.

ನಟರಾಜನ— ರಂಭಾ ಆ್ಯಂಡ ಕೊ ನಮ್ಮ ಕಂಪನಿ ಹೆಸರು. ವಿವಾಹೇಚ್ಛು ಯುವಕಯುವತಿಯರ ಮದುವೆ ಮಾಡೂದು ನಮ್ಮ ಕಂಪನಿ ಕಾರ್ಯ. ಅದಕ್ಕಾಗಿ ಅಲ್ಲಲ್ಲಿ ಕ್ಲಬ್ಬುಗಳನ್ನು ತೆರೆದಿದ್ದು ಇಲ್ಲಿಯೂ ತೆರೆಯುತ್ತೇವೆ. ಈ ಕ್ಲಬ್ಬಿನ ವಂತಿಗೆ ಕೊಟ್ಟು ಸದಸ್ಯರಾದರೆ ಮುಗದ ಹೋತು. ಅವರು ಒಪ್ಪುವವರೊಡನೆ ಒಂದು ವರುಷದೊಳಗೆ ವಿವಾಹ ನಡೆಯುವ ವ್ಯವಸ್ಥೆ ಮಾಡ್ತೇವಿ. ಕ್ಲಬ್ಬಿನಲ್ಲಿ ಮನೋರಂಜನೆಯ ಜತೆಗೆ ಕೆಲ ವಿಷಯಗಳ ಶಿಕ್ಷಣ ಕೊಡಲಾಗುವದು. ಅಲ್ದ ಆಟ-ವಿಹಾರ, ವಿನೋದಗಳ ವ್ಯವಸ್ಥಾನೂ ಅದೆ. ನಮ್ಮ ಕಂಪನಿ ರಜಿಸ್ಟರ ಆಗಿದ್ದು ಸರಕಾರದ ಅನುಮತಿ ನಮ್ಮ ಕಾರ್ಯಕ್ಕೆ ಸಿಕ್ಕದೆ.

ದೊಡ್ಡಣ್ಣ— ವಿವಾಹಿತರಿಗೆ ನಿಮ್ಮ ಕ್ಲಬ್ಬಿನಲ್ಲಿ ಪ್ರವೇಶ ಇಲ್ಲೇ ಇಲ್ಲೇನು?

ನಟರಾಜನ— ಅದೇಕೆ? ಅಲ್ಲಿ ಎಲ್ಲರಿಗೂ ಸ್ವಾಗತವಿದೆ. ೧೮ ವಯಸ್ಸು ಮೀರಿದ ಗಂಡಸು, ೧೫ ವಯಸ್ಸು ಮೀರಿದ ಹೆಂಗಸು ಪ್ರತಿಯೊಬ್ಬರಿಗೂ ಸ್ವಾಗತವಿದೆ. ಅಲ್ಲಿ ಸಮಾಜ ಸೇವೆ, ರಾಜಕಾರಣ, ಆರೋಗ್ಯಶಾಸ್ತ್ರ, ಸಂತಾನಸಂಯಮ ಮೊದಲಾದ ಉಪಯುಕ್ತ ವಿಷಯಗಳ ಶಿಕ್ಷಣ, ಜೊತೆಗೆ ಮನರಂಜನೆ ಎಲ್ಲ ದೊರೆಯುವದು.

[ಅಷ್ಟರಲ್ಲಿ ಫೋನಿನ ಗಂಟೆ. ದೊಡ್ಡಣ್ಣ ಫೋನು ತೆಗೆದ ಕೊಳ್ಳುವನು]

ದೊಡ್ಡಣ್ಣ - ಯಾರು ವಸಂತೇನು, ಅಲ್ಲ ವಸಂತರಾವ? ಸಿಟಿ ಸಬ್ ಇನಸ್ಪೆಕ್ಟರ್, ಸಿಟಿ ಪೋಲಿಸ ಸ್ಟೇಶನ್ (ನಟರಾಜನ ದೊಡ್ಡಣ್ಣನಿಗೆ ತಿಳಿಯದಂತೆ ಹೋಗುವನು.) ಏನಂದರಿ? ಹೌದು. ಇದೇ ಈಗ ಬಂದಿದ್ದ. (ಸುತ್ತಲೂ ನೋಡಿ) ಕಾಲುಕಿತ್ತ್ಯಾನ. ಅವರ ಚಕ್ಕು ನಡಿಯೂದಿಲ್ಲ? ಬೋಗಸ ಕಂಪನಿ ಅವರ್ದು? ಜಾಹೀರಾತ ಪ್ರಸಿದ್ಧ ಮಾಡಲಿಕ್ಕೆ ಕೊಟ್ಟಾರ. ಜನತೆಯನ್ನು ಠಕ್ಕಿಸುವ ಸಂಗತಿಗೆ ಸಹಾಯ ಮಾಡಿಧಂಗ ಆಗ್ತದ ಅಂತೀರಿ. ಜಾಹೀರಾತ ಹಾಕೂದಿಲ್ಲ ಆತಿಲ್ಲೊ(ಫೋನು ಕೆಳಗಿಟ್ಟು)ಏನಿದು ಮೂರು ತಿಂಗಳೊಳಗೆ ಬಂದ ಒಂದು ಚೆಕ್ಕು ಬೋಗಸ ಕಂಪನೀದು. ಶ್ರೀಮಂತ ಅಣ್ಣಾ ಅವರು ಮಗನಚುನಾವಣೆಯಸಲುವಾಗಿ ಪೇಪರ ನಡಸೂ,ಕಾಗದಾಕೊಡ್ತೇವಿ ಅಂದವರು, ಈಗ ರೊಕ್ಕ ಕೇಳತಾರ. ಮತ್ತೆ ತಮ್ಮ ಪ್ರಚಾರದ ಸುದ್ದಿ ಬರಲಿಲ್ಲಂತೆ. ಅವಹೇಳನ ಬ್ಯಾರೆ. ಕಂಪೋಜಿಟರಿಗೆ ಮೂರು ತಿಂಗಳ ಸಂಬಳ ಇಲ್ಲ. ಉಪಸಂಪಾದಕ ಪಗಾರ ಇಲ್ದ ದುಡದು ಬಿಟ್ಟ ಹೋದ. ನನ್ನ ಜೀವನದ ಉಸಿರು ಇರುವ ವರೆಗೆ ಪತ್ರಿಕೆಯ ಮುಖಾಂತರ ಜನಸೇವೆ ಮಾಡಬೇಕೆಂತ ಪ್ರತಿಜ್ಞೆ ಮಾಡಿದೆ. ಆದರೆ ಈಗನಸ್ತದ ಪೇಪರ ನನಗ ಬೇಕಾಗೇದ, ಜನರಿಗೆ ಬೇಕಾಗಿಲ್ಲ. (ಕೈಗಡಿಯಾರ ನೋಡಿ) ಅಯ್ಯೋ ೨ ಹೊಡೆಯಿತು. ಇನ್ನೂ ವಸಂತನ ಫೋನು ಬರಲಿಲ್ಲ. ಹ್ಯಾಂಗ ಅದನೋ ಆಕಿ ಪ್ರಕೃತಿ. ಆಪರೇಶನೂ ಆತೋ ಇಲ್ಲೊ. (ಫೋನು ತೆಗೆದುಕೊಂಡು ಮುಂಬಯಿ ಜೆ. ಜೆ. ಹಾಸ್ಪಿಟಲ್ ಸರ್ಜರಿ ವಾರ್ಡ ನಂಬರ ಕೊಡ್ರಿ ಎಂದು ಕೇಳುವನು. ಅಷ್ಟರಲ್ಲಿ ಬಸಪ್ಪ ಪ್ರವೇಶಿಸುವನು.)

(೧೦೦ನೆಯ ಪುಟಕ್ಕೆ)

# ಪೂರ್ವ, ಪಶ್ಚಿಮ — ಹೇಗೆ ಕೂಡೀತು?

ಲೇಖಕರು: ಶ್ರೀ. ಕೆ. ಸಂಪದ್ಗಿರಿರಾವ್, ಎಂ. ಎ., ಬೆಂಗಳೂರು.

೧೯ ನೆಯ ಶತಮಾನದ ಕೊನೆಯ ಭಾಗದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಒಂದು ಬಗೆಯ ಆತ್ಮತೃಪ್ತಿ ಕಂಡುಬಂದಿತು. ವೈಜ್ಞಾನಿಕ ಪರಿಶೋಧನೆಗಳ ಫಲವಾಗಿ ಜೀವನವು ಬಹುಮೇಲ್ಮಟ್ಟಕ್ಕೆ ಬಂದಿರುವುದೆಂಬ ವಿಶ್ವಾಸವೂ ಮಾನವವರ್ಗವು ಸತತವಾಗಿ ಪ್ರಗತಿ ಮಾರ್ಗವನ್ನು ಹಿಡಿದು ಸಾಗುತ್ತಿದೆಯೆಂಬ ದೃಢವಾದ ನಂಬಿಕೆಯೂ ಅದಗಲ್ಲಿ ಸೇರಿದ್ದಿತು. ಆದರೂ ಪಾಶ್ಚಾತ್ಯ ನಾಗರಿಕತೆಯ ವಿಷಯದಲ್ಲಿ ಕೆಲವರು ಅಸಂತುಷ್ಟರಾಗಿ ಇದು ಅವನತಿಯ ಕುರುಹೆಂದು ಹೇಳಿದರು. ಒಟ್ಟಿನಲ್ಲಿ ಪಾಶ್ಚಾತ್ಯ ದೇಶಗಳವರದು ಮೇಲಿನ ಕೈ. ಈ ಮಾತು ಅವರು ಹೇಳುತ್ತಿದ್ದುದು ಹೋಗಲಿ–ಅವರ ಆಳ್ವಿಕೆಗೂ ಪ್ರಭಾವಕ್ಕೂ ಒಳಗಾದ ಪೂರ್ವ ದೇಶದವರು ಸಹ ಹೇಳಿದರು. ಪಶ್ಚಿಮದೇಶದವರು ಪುರೋಗಾಮಿಗಳು, ಕಾರ್ಯಪಟುಗಳು; ಪೂರ್ವದೇಶದವರು ಸ್ವಸ್ಥಚಿತ್ತರು, ಸುಮ್ಮನೆ ಕುಳಿತಿರುವವರು ಎನ್ನುವ ಅಭಿಪ್ರಾಯ ಸಾಮಾನ್ಯವಾಗಿ ವ್ಯಾಪಿಸಿತ್ತು. ಇದರ ಪರಿಣಾಮವಾಗಿ ಪೂರ್ವದೇಶಗಳಲ್ಲಿ ಪಾಶ್ಚಾತ್ಯ ದೇಶಗಳ ಅನುಕರಣವು ರೂಢಿಗೆ ಬಂದಿತು: ಈ ಅನುಕರಣಶೀಲವೇ ಪ್ರಗತಿಯ ಲಕ್ಷಣವೆಂದೂ ಹೇಳುವಷ್ಟು ಪೂರ್ವದೇಶಗಳಲ್ಲಿ ಒಂದು ಸಾಮಾನ್ಯ ಭಾವನೆ ಉಂಟಾಯಿತು.

ಆದರೆ ಈ ೨೦ ನೆಯ ಶತಮಾನದ ಪೂರ್ವಾರ್ಧದಲ್ಲಿ ನಡೆದುಹೋದ ಎರಡು ಮಹಾಯುದ್ಧಗಳ ಪರಿಣಾಮವಾಗಿ ಪ್ರಪಂಚದಲ್ಲಿಯೇ ಒಂದು ಪ್ರಳಯ ಉಂಟಾದಂತೆ ಆಗಿದೆ. ಎಲ್ಲ ಬಗೆಯ ವಿಪ್ಲವಗಳು—ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ–ಆಗಿ ಹೋಗಿವೆ, ಆಗುತ್ತಲೂ ಇವೆ. ಅನೇಕ ಬಗೆಯ ವಿಚಾರಗಳ ಮಥನ ನಡೆಯುತ್ತಿದೆ. ದೇಶಗಳ ನಡುವೆ ಸಮೀಪ, ದೂರ ಎನ್ನುವ ವ್ಯತ್ಯಾಸವೇ ಮಾಯವಾಗಿದೆ. ಇಡೀ ಪ್ರಪಂಚವೇ ಒಂದು ಕುಟುಂಬದಂತಾಗಿದೆ--ಸುದ್ದಿಗಳೂ ವಿಚಾರಗಳೂ ಆಯಾ ಕ್ಷಣದಲ್ಲೆ ಜಗತ್ತಿನ ಎಲ್ಲ ಮೂಲೆಗಳಿಗೂ ಮುಟ್ಟುತ್ತವೆ. ಹೀಗಾಗಿ ಪೂರ್ವ ಮತ್ತು ಪಶ್ಚಿಮ ಎನ್ನುವ ಭೇದವು ಉಳಿದಿದೆಯೇ ಎನ್ನುವ ಪ್ರಶ್ನೆ ಹುಟ್ಟುತ್ತದೆ. ಈ ಎರಡನೆಯ ಮಹಾಯುದ್ಧದಲ್ಲಿ ಪೂರ್ವ ದೇಶವಾದ ಜಪಾನ್ ಮತ್ತೊಂದು ಪೂರ್ವ ದೇಶವಾದ ಚೀನದೊಂದಿಗೆ ಬಹು ದೀರ್ಘಕಾಲದ ಕದನವನ್ನೇ ನಡೆಸಿತು. ಪೂರ್ವ ದೇಶಗಳಲ್ಲಿ ನೆಲಸಿರುವ ಅರಬ್ಬರಿಗೂ ಯಹುದ್ಯರಿಗೂ ಮಧ್ಯೆ ಹುಟ್ಟಿರುವ ಕಲಹ ಇನ್ನೂ ಬಗೆಹರಿಯಲಿಲ್ಲ. ಪಾಶ್ಚಾತ್ಯ ದೇಶಗಳಲ್ಲೂ ಪರಸ್ಪರ ವೈಷಮ್ಯಭಾವ ಬಗೆಹರಿದಿಲ್ಲ. ಅಮೇರಿಕಾ-ರಷ್ಯಾ ಬ್ರಿಟನ-ರಷ್ಯಾ ಇವುಗಳ ವ್ಯವಹಾರ ಸಮರಸವಾಗಿಲ್ಲ. ಶಾಂತಿಪ್ರಿಯರೂ ಸ್ವಸ್ಥಚಿತ್ತರೂ ಎಂದು ಸಾಮಾನ್ಯವಾಗಿ ಹೇಳಿಸಿಕೊಳ್ಳುವ ಪೂರ್ವದೇಶೀಯರಲ್ಲಿ ಅಶಾಂತಿ ತಲೆದೋರಿದೆ. ಚೀನ, ಬರ್ಮ, ಹಿಂದುಸ್ಥಾನ, ಪಾಕಿಸ್ತಾನಗಳಲ್ಲಿ ವಿಪರೀತವಾದ ಕಲಹಗಳೂ ಕಮ್ಯೂನಿಸ್ಟ್ ಪಕ್ಷದವರ ದಾಳಿಗಳೂ ನಡೆಯುತ್ತಿವೆ. ಇಂದಿನ ಕಾಲದ ಕವಿಗಳು ಕಲ್ಪನೆ

ಮಾಡಿಕೊಂಡಿದ್ದ ಪೂರ್ವದೇಶಗಳು ಹಾಗೆಯೇ ಇಂದು ಉಳಿದಿಲ್ಲ. ಇವೂ ಪಾಶ್ಚಾತ್ಯ ದೇಶಗಳಂತೆಯೇ ಆಗಿವೆ.

ಆದರೆ ಈ ಪರಿಣಾಮಕ್ಕೆ ಒಳಗಾಗಿರುವವರು ಪ್ರತಿಯೊಂದು ದೇಶದಲ್ಲಿಯೂ ಬಹುಸಂಖ್ಯಾತರಲ್ಲ. ಭಾರತ ದೇಶವನ್ನೇ ನಿದರ್ಶನವಾಗಿ ತೆಗೆದುಕೊಂಡರೂ ಈ ಬಗೆಯ ಅಂತರ್–ರಾಷ್ಟ್ರೀಯ ಸಂಪರ್ಕವನ್ನು ಪಡೆದವರೂ ಆಧುನಿಕ ಕಾಲದ ವಾಹನ ಮುಂತಾದ ಸೌಕರ್ಯಗಳನ್ನು ಉಪಯೋಗಿಸಿಕೊಳ್ಳುವವರೂ ಪ್ರೌಢ ಶಿಕ್ಷಣ ಹೊಂದಿದವರೂ ಪ್ರಾಯಶಃ ೧೦,೦೦೦ ಜನರಲ್ಲಿ ಒಬ್ಬರು ಇರಬಹುದು. ಉಳಿದವರಲ್ಲಿ ಈ ಆಧುನಿಕ ಕಾಲದ ಮಾರ್ಪಾಟುಗಳು ನಿತ್ಯ ಜೀವನದಲ್ಲಿ ತಮ್ಮ ಅನುಭವಕ್ಕೆ ಬಂದಿರುವುವಾದರೂ—ತಮ್ಮ ವಿಚಾರ ಸರಣಿಯನ್ನೇ ತಿದ್ದಿಲ್ಲ. ದೇಶದಲ್ಲಿನ ಕೆಲವು ಶ್ರೇಷ್ಠ ಜನರ ಆಧುನಿಕತೆಯನ್ನೂ ವಿಚಾರ ಸರಣಿಯನ್ನೂ ಆ ದೇಶದ ಸಾಮಾನ್ಯ ಜನರು ಗ್ರಹಿಸಿಲ್ಲ. ದೇಶದ ಸಮಷ್ಟಿಜೀವನದ ನೀತಿಯಲ್ಲಿ ಮೂಲಭೂತವಾದ ಮಾರ್ಪಾಟು ಆಗಿಲ್ಲ.

ಈ ವಿಷಯವನ್ನು ನಾವು ಐತಿಹಾಸಿಕ ದೃಷ್ಟಿಯಿಂದ ವಿಚಾರ ಮಾಡಬಹುದು- ಒಂದೊಂದು ದೇಶದಲ್ಲಿಯೂ ಬೇರೆಬೇರೆ ಪ್ರದೇಶದಲ್ಲಿ ವಾಸಮಾಡುವವರು, ಪ್ರಕೃತಿಯ ಪರಿಸ್ಥಿತಿಗನುಗುಣವಾಗಿ ಒಂದು ವಿಶಿಷ್ಟ ಮನೋಧರ್ಮವನ್ನು ಪಡೆದಿರುತ್ತಾರೆ. ಉದಾಹರಣೆಗೆ ನದಿಗಳು ಹರಿಯುವ ಪ್ರದೇಶಗಳಲ್ಲಿ ವಾಸಿಸುತ್ತ ಸಸ್ಯಾದಿ ಸಮೃದ್ಧಿಯನ್ನು ಅನುಭವಿಸಿದವರೂ ಅರಣ್ಯ ಪ್ರದೇಶಗಳಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ಸಮಸ್ತ ಭೂತಗಳೊಂದಿಗೂ ಸಾಮರಸ್ಯದಿಂದ ಜೀವಿಸಬೇಕೆಂದು ತಿಳಿದಿದ್ದವರೂ--ಜೀವನದ ರಹಸ್ಯಗಳನ್ನು ಕುರಿತು ಗಹನವಾದ ವಿಚಾರವನ್ನು ನಡೆಸಿದ್ದಾರೆ. ಪೂರ್ವಕಾಲದ ಭಾರತೀಯರೂ ಚೀನ ದೇಶದವರೂ ಒಂದು ಪ್ರತ್ಯೇಕ ವಿಚಾರ ಸರಣಿಯನ್ನೇ ಅನುಸರಿಸಿದರು. ಈ ವಿಚಾರಸರಣಿಯು ಅವರ ಧರ್ಮ, ಸಮಾಜವ್ಯವಸ್ಥೆ, ಆರ್ಥಿಕ ನೀತಿ, ರಾಜನೀತಿ–ಇವುಗಳಲ್ಲಿ ಓತಪ್ರೋತವಾಗಿ ಬೆರೆಯಿತು. ಆದರೆ ಪಾಶ್ಚಾತ್ಯ ದೇಶಗಳಲ್ಲಿ ಸಾಮಾನ್ಯವಾಗಿ ಪ್ರಕೃತಿಯು ಪರಿಸ್ಥಿತಿಯು ಅನುಕೂಲವಿರಲಿಲ್ಲ. ಜನರು ತಮ್ಮ ಆಹಾರಾದಿಗಳಿಗಾಗಿ ಸತತವಾಗಿ ಹೋರಾಟ ನಡೆಸುತ್ತ—ಸಿಕ್ಕಿದ್ದನ್ನು ಇತರರೊಂದಿಗೆ ಹಂಚಿಕೊಳ್ಳಲು ಇಷ್ಟಪಡದೆ, ಸ್ಪರ್ಧೆಯ ಮನೋಭಾವವನ್ನು ಪಡೆದರು. ಅವರ ವಿಚಾರಸರಣಿಯೂ

---

ಪೂರ್ವವೆಂದರೆ ಪೂರ್ವ, ಪಶ್ಚಿಮವೆಂದರೆ ಪಶ್ಚಿಮ. ಅವೆರಡೂ ಕೂಡುವ ಸಂಭವವೇ ಇಲ್ಲ ಎಂದೊಬ್ಬ ಹೇಳಿದ್ದಾನೆ. ಆದರೆ ಶ್ರೀ. ಸಂಪದ್ಗಿರಿರಾಯರಿಗೆ ಇದು ಸಮ್ಮತವಿಲ್ಲ. ಅವೆರಡರ ಸಮನ್ವಯವೇ ಶ್ರೇಯಸ್ಸಿಗೆ ಹಾದಿಯೆಂದು ಅವರು ಪ್ರತಿಪಾದಿಸುತ್ತಾರೆ.

---

ಅವರ ಜೀವನದ ರೀತಿಯಲ್ಲಿ ಅಳವಟ್ಟಿತು. ವ್ಯಕ್ತಿಸ್ವಾತಂತ್ರ್ಯಮತ್ತು ಸ್ಪರ್ಧೆಗಳು ಈ ದೇಶದ ಜನದ ಪ್ರಮುಖ ಲಕ್ಷಣಗಳಾದುವು. ಈ ರೀತಿಯಲ್ಲಿ ಸಮುದಾಯಜೀವನದ ರೀತಿನೀತಿಗಳು ರೂಪುಗೊಂಡವು, ಮತ್ತು ಸಾಂಪ್ರದಾಯಿಕವಾಗಿ ಬೆಳೆದುಬಂದವು.

ಮೇಲೆ ತೋರಿಸಿರುವುದು ಬಹು ಸ್ಥೂಲವಾದ ವರ್ಗೀಕರಣ ಮಾತ್ರ. ಒಂದು ಇಡೀ ಜನಾಂಗವನ್ನೂ ಪ್ರದೇಶವನ್ನೂ ಕುರಿತು ಸ್ಥೂಲ ದೃಷ್ಟಿಯಲ್ಲಿ ಎರಡು ಮಾತುಗಳಲ್ಲಿ ಮಾಡುವ ಸಿದ್ಧಾಂತ ಪೂರ್ಣ ಸತ್ಯವನ್ನೊಳಗೊಂಡದ್ದಲ್ಲ. ಉದಾಹರಣೆಗೆ— ಪಾಶ್ಚಾತ್ಯರು ಭೋಗಜೀವಿಗಳು, ವಿಷಯಾಸಕ್ತರು; ವಿಜ್ಞಾನಶಾಸ್ತ್ರವಿಶಾರದರು; ಬಲಿಷ್ಠರು, ಯುದ್ಧಪ್ರಿಯರು—ಪೌರಸ್ತ್ಯರು ತ್ಯಾಗಿಗಳು, ವಿರಕ್ತರು; ಆಧ್ಯಾತ್ಮಿಕ ವಿದ್ಯಾ ಸಂಪನ್ನರು; ಬಲಹೀನರು; ಶಾಂತಿಪ್ರಿಯರು-ಈ ಬಗೆಯಾಗಿ ನಿಷ್ಕರ್ಷಿಸುವುದು ತೀರ ಮೂರ್ಖತನವೂ ಆಗುವುದು. ಆದರೂ ಪಾಶ್ಚಾತ್ಯ-ಪೌರಸ್ತ್ಯ ಜೀವನಸರಣಿಯನ್ನೂ ಸಂಸ್ಕೃತಿವಿಶೇಷಗಳನ್ನೂ ಬಹುಸೂಕ್ಷ್ಮ ದೃಷ್ಟಿಯಿಂದ ವಿಮರ್ಶೆ ಮಾಡಿದವರಿದ್ದಾರೆ. ಅವರೂ ಪಾಶ್ಚಾತ್ಯ ಪೌರಸ್ತ್ಯದೇಶಗಳ ಮನೋಧರ್ಮದಲ್ಲಿ ವ್ಯತ್ಯಾಸವಿರುವುದೆಂದು ಉಲ್ಲೇಖಿಸಿರುವರು. ಆದರೆ ಈ ಮನೋಧರ್ಮಗಳು ಪರಸ್ಪರ ವಿರೋಧಿಗಳೆಂದು ಹೇಳುವುದು ಸರಿಯಲ್ಲ—ಪರಸ್ಪರ ಪೂರಕಗಳಾಗಿವೆ. ಇವುಗಳ ಸಂಯೋಜನೆಯಿಂದ ಲೋಕಕಲ್ಯಾಣವಾಗುವುದು.

ಪಾಶ್ಚಾತ್ಯ ಮತ್ತು ಪೌರಸ್ತ್ಯ ವಿಚಾರಸರಣಿಗಳನ್ನು ಮೂರು ಭೂಮಿಕೆಗಳಲ್ಲಿ— ಅಥವಾ ಅಂಶಗಳಲ್ಲಿ —ವಿಚಾರಕ್ಕೆ ತೆಗೆದುಕೊಳ್ಳಬಹುದು. ೧) ಧಾರ್ಮಿಕ ಮತ್ತು ಮತಸಂಬಂಧವಾದುದು. ೨) ಆರ್ಥಿಕ ಮತ್ತು ಸಂಪದಭ್ಯುದಯಕ್ಕೆ ಸಂಬಂಧಿಸಿದ್ದು ೩) ಸಾಮಾಜಿಕ ಮತ್ತು ರಾಜನೈತಿಕ ವ್ಯವಸ್ಥೆಗೆ ಸಂಬಂಧಿಸಿದ್ದು.

**ಧಾರ್ಮಿಕ ಕ್ಷೇತ್ರದಲ್ಲಿ**

ಧಾರ್ಮಿಕ ಜೀವನವು ಪ್ರಾಚ್ಯದೇಶಗಳಲ್ಲಿ ಪಡೆದಿರುವಷ್ಟು ಪ್ರಾಮುಖ್ಯ ಪಾಶ್ಚಾತ್ಯರಲ್ಲಿ ಪಡೆಯಲಿಲ್ಲ. ಇಂದಿಗೂ ಪೂರ್ವದೇಶಗಳಲ್ಲಿ ಸಾಧುಗಳಿಗೂ ತಪಸ್ವಿಗಳಿಗೂ ಧರ್ಮೋದ್ಧಾರ ಮಾಡಬಲ್ಲ ವ್ಯಕ್ತಿಗಳಿಗೂ ಸಾಮಾನ್ಯ ಜನರಿಂದ ಸಲ್ಲುವ ಆದರ ಮರ್ಯಾದೆ ಕೇವಲ ರಾಜಕೀಯ ಮುಖಂಡರಿಗಾಗಲಿ, ಐಶ್ವರ್ಯವಂತರಿಗಾಗಲಿ ದೊರೆಯುವುದಿಲ್ಲ. ಈ ಮಾತು ಪಾಶ್ಚಾತ್ಯರಿಗೆ ಅನ್ವಯಿಸುವುದಿಲ್ಲ. ಯಾವುದಕ್ಕೆ ಬೆಲೆಯನ್ನು ಕಟ್ಟುತ್ತಾರೆ, ಯಾವುದನ್ನು ಆದರಿಸುತ್ತಾರೆ—ಎನ್ನುವುದನ್ನು ಪರೀಕ್ಷಿಸಿ ಇಂದು ಜನರ ಮನೋಧರ್ಮವೇನೆಂದು ಸಿದ್ಧಾಂತ ಮಾಡಬಹುದು. ಈ ದೃಷ್ಟಿಯಿಂದ ಪೂರ್ವದೇಶೀಯರಲ್ಲಿ ಸಂಯಮಜೀವನಕ್ಕೂ ತ್ಯಾಗಕ್ಕೂ ಹೆಚ್ಚು ಮನ್ನಣೆ ಇದೆ. ಪಾಶ್ಚಾತ್ಯರಲ್ಲಿ 'ಜೀವನ ಹೋರಾಟ' ದಲ್ಲಿ ಜಯಶೀಲರಾದವರಿಗೂ ಐಶ್ವರ್ಯಕ್ಕೂ ಕೆಲಸಕಾರ್ಯಗಳಲ್ಲಿ ಯಶಸ್ಸು ಪಡೆದವರಿಗೂ ಹೆಚ್ಚು ಮನ್ನಣೆಯಿದೆ.

ಈ ಧಾರ್ಮಿಕ ಜೀವನವನ್ನು ನಡೆಸುವವರು ಯಾವ ಸಿದ್ಧಾಂತಗಳನ್ನು ತಮ್ಮ ಗುರಿಯಾಗಿಟ್ಟುಕೊಂಡಿದ್ದರೂ ಸರಿಯೇ— ಎಲ್ಲರಿಗೂ ತಮ್ಮ ತಮ್ಮ ಇಷ್ಟದೇವತೆಯ ಉಪಾಸನೆಗೂ ಸಾಂಪ್ರದಾಯಿಕವಾದ ಮತದ ಅನುಷ್ಠಾನಕ್ಕೂ ಪೂರ್ಣ ಸ್ವಾತಂತ್ರ್ಯವನ್ನು ಕೊಡುವುದು ಪ್ರಾಚ್ಯದೇಶಗಳ ವಾಡಿಕೆಯಾಗಿದೆ. ಪರಧರ್ಮ ಸಹಿಷ್ಣುತೆ— ಅಷ್ಟೇ ಅಲ್ಲ— ಎಲ್ಲ ಧರ್ಮಗಳನ್ನೂ ಆದರಿಸುವ ಮನೋಭಾವ ಪ್ರಾಚ್ಯದಲ್ಲಿ ಕಂಡುಬರುವಷ್ಟು ಪಾಶ್ಚಾತ್ಯ ದೇಶಗಳಲ್ಲಿ ಕಂಡುಬರುವುದಿಲ್ಲ. ಮೂರು ಶತಮಾನಗಳ ಹಿಂದೆ ಯುರೋಪಖಂಡದಲ್ಲಿದ್ದ ಮತವೈಷಮ್ಯವನ್ನೂ ಭಿನ್ನಮತಾವಲಂಬಿಗಳಲ್ಲಿ ಪರಸ್ಪರ ನಡೆಯುತ್ತಲಿದ್ದ ಕ್ರೂರಕೃತ್ಯಗಳನ್ನೂ— ಅದೇ ಕಾಲಕ್ಕೆ ಭಾರತದಲ್ಲಿ ಅಕ್ಬರನು ಸರ್ವಧರ್ಮಗಳ ಸಮನ್ವಯಕ್ಕೆ ಮಾಡುತ್ತಿದ್ದ ಪ್ರಯತ್ನವನ್ನೂ ಹೋಲಿಸಿದರೆ ಈ ವ್ಯತ್ಯಾಸವು ಎದ್ದುಕಾಣುವುದು. ಶ್ರೀರಾಮಕೃಷ್ಣರ ಮತ್ತು ಮಹಾತ್ಮಾ ಗಾಂಧಿಯವರ ಜೀವನವೂ ಧಾರ್ಮಿಕ ವಿಚಾರಸರಣಿಯೂ ಲೋಕಕಲ್ಯಾಣಕ್ಕೆ ಮಾರ್ಗದರ್ಶಕವಾಗಿವೆ.

ಪ್ರಾಚ್ಯ ದೇಶಗಳ ಆಧ್ಯಾತ್ಮಿಕ ಜೀವನದ ಮೂಲಭೂತವಾದ ತತ್ತ್ವಗಳಿಗೆ ಭಾರತದೇಶದಲ್ಲಿ ಉಪನಿಷತ್ಕಾಲದಿಂದ ಬೆಳೆದುಬಂದ ವಿಚಾರಸರಣಿಯೇ ಆಧಾರವಾಗಿದೆ. ಬೌದ್ಧಧರ್ಮ ಜೈನಧರ್ಮಗಳಿಗೂ ಏಷ್ಯಾಖಂಡದ ಅನೇಕ ದೇಶಗಳಲ್ಲಿ ವ್ಯಾಪಿಸಿದ ಬೌದ್ಧ ತತ್ತ್ವಗಳಿಗೂ ಉಪನಿಷತ್ತುಗಳೇ ಮಾತೃಕೆಯಾಗಿವೆ. ಈಶ್ವರವಾದಕ್ಕೂ ಒಣ ತತ್ತ್ವ ಜಿಜ್ಞಾಸೆಗೂ ಗೌತಮ ಬುದ್ಧ ಮನ್ನಣೆ ಕೊಡಲಿಲ್ಲ. ಧರ್ಮವೇ ಸರ್ವಸ್ವವೆಂದೂ ಸತತವಾದ ಸಾಧನೆಯೇ ಮಾರ್ಗವೆಂದೂ ಬೌದ್ಧರು ಸಾರಿದರು. ಆಶಾರಹಿತವಾದ ಸರ್ವಭೂತಾನುಕಂಪದಿಂದ ಕೂಡಿದ ನೈತಿಕ ಜೀವನಕ್ಕೇ ಪ್ರಾಧಾನ್ಯವನ್ನು ಕೊಟ್ಟರು.

ಅಮೇರಿಕಾ, ಆಫ್ರಿಕಾ ಮತ್ತು ಆಸ್ಟ್ರೇಲಿಯಾ ಖಂಡಗಳಲ್ಲಿ ಆದಿವಾಸಿಗಳನ್ನು ಪಾಶ್ಚಾತ್ಯರು ನಿರ್ದಯೆಯಿಂದ ಕಾಡುಮೃಗಗಳಂತೆ ಬೇಟೆಯಾಡಿ, ಹೊಡೆದು ಕೊಂದರು. ಆದರೆ ಭಾರತೀಯರ ಚರಿತ್ರೆಯಲ್ಲಿ ಅಂತಹ ಪ್ರಸಂಗಗಳನ್ನು ನಾವು ಕಾಣಲಾರೆವು. ಅದಕ್ಕೆ ಪ್ರತಿಯಾಗಿ ಎಲ್ಲ ಜನರನ್ನೂ ತಮ್ಮೊಂದಿಗೆ ಸೇರಿಸಿಕೊಂಡು ಎಲ್ಲರಲ್ಲಿಯೂ ನೈತಿಕ ಮಟ್ಟವು ಹೆಚ್ಚುವಂತೆ ಶಾಂತಿಯುತವಾದ ಪ್ರಯತ್ನಗಳು ನಡೆದುವೆನ್ನುವುದಕ್ಕೆ ನಿದರ್ಶನಗಳು ಸಿಕ್ಕುತ್ತವೆ.

ಭಗವಂತನ ಸಗುಣೋಪಾಸನೆಯನ್ನು ಮಾಡುವ ಜನರಲ್ಲಿ ತಮ್ಮ ಮತದ ಪ್ರಚಾರ ಇಡೀ ಜಗತ್ತಿನಲ್ಲೆ ಆಗಬೇಕೆಂಬ ಆಕಾಂಕ್ಷೆ ಹುಟ್ಟುವುದು ರೂಢಿಯಾಗಿದೆ. ಈ ಮತಾವಲಂಬಿಗಳಲ್ಲಿ ಧನಬಲ, ರಾಜಕೀಯಬಲಗಳೂ ಇದ್ದರೆ ಈ ಪ್ರಚಾರಕಾರ್ಯವು ತೀವ್ರವಾಗಿಯೇ ನಡೆಯುವುದು. ಇದಕ್ಕೆ ಕ್ರೈಸ್ತ ಮತ್ತು ಮಹಮ್ಮದೀಯ ಮತಗಳು ನಿದರ್ಶನವಾಗಿವೆ. ಈ ಪ್ರಚಾರಕಾರ್ಯದಲ್ಲಿ ಸ್ವಮತ

ಪಕ್ಷಪಾತ, ಅನ್ಯಮತಗಳ ದ್ವೇಷ ಬೆಳೆಯುವುದು ಸ್ವಾಭಾವಿಕ. ವೈದಿಕ ಮತಗಳ ಬುಡಕಟ್ಟಿಗೆ ಸೇರಿದವರಲ್ಲಿಯೂ ಅಂತಹ ಸಗುಣೋಪಾಸಕರು ಇದ್ದಾರೆ. ಆದರೆ ಭಾರತ ದೇಶದಲ್ಲಿ ಇಂತಹ ಉಪಾಸಕರಲ್ಲಿ ವೈಷಮ್ಯವು ಬೆಳೆಯದಂತೆ ಸಮನ್ವಯ ಪ್ರಯತ್ನಗಳಾದುದನ್ನು ನಾವು ಕಾಣಬಹುದು. ಅಷ್ಟೇ ಅಲ್ಲದೆ ಹಿಂದು---ಮುಸ್ಲಿಂ ಧರ್ಮಗಳನ್ನು ಸಹ ಸಮನ್ವಯಗೊಳಿಸುವ ಪ್ರಯತ್ನಗಳೂ ನಡೆದಿವೆ.

ಆಧುನಿಕ ಕಾಲದಲ್ಲಿ ಹಿಂದಿನ ಕಾಲದ ಉಪಾಸನೆಗಳೂ ಮತದೀಕ್ಷೆಗಳೂ, ಆಚಾರ ಆಚರಣೆಗಳೂ ಬಹುಮಟ್ಟಿಗೆ ಲೋಪವಾಗಿವೆ. ಈ ವೈಜ್ಞಾನಿಕ ಯುಗದಲ್ಲಿ ಯುಕ್ತಿಯೂ ತರ್ಕಬುದ್ಧಿಯೂ ಪ್ರಧಾನ. ಈ ದೃಷ್ಟಿಗೂ ಅನುಗುಣವಾದ ವಿಚಾರಸರಣಿ ಸನಾತನ ನಮ್ಮ ಧರ್ಮದಲ್ಲಿದೆ. ಅಂಥ ತತ್ತ್ವಾನ್ವೇಷಣ ಕ್ರಮವೂ ಸಿದ್ಧಾಂತಪ್ರತಿಪಾದನ ಕ್ರಮವೂ ಅದರಲ್ಲಿದೆ. ಅದೇ ವೇದಾಂತ ವಿಚಾರ. ಮನುಷ್ಯನ ತರ್ಕಬುದ್ಧಿಯನ್ನು ಬಳಸಿಕೊಂಡು, ಮಾನವನ ಅನುಭವವನ್ನೇ ಸಾಮಗ್ರಿಯನ್ನಾಗಿಟ್ಟುಕೊಂಡು ಅವನ ಜಾಗ್ರದವಸ್ಥೆಯನ್ನು ಮಾತ್ರವಲ್ಲದೆ, ಸ್ವಪ್ನ, ಸುಷುಪ್ತ್ಯವಸ್ಥೆಗಳನ್ನೂ ವಿವೇಚಿಸಿ, ಯಾವ ಮೂಢನಂಬಿಕೆಗಳ ಆಧಾರದ ಮೇಲೂ ನಿಲ್ಲದೆ-ಯುಕ್ತಿಯುಕ್ತವಾದ ಸಿದ್ಧಾಂತಗಳಿವೆ. ಇವು ಕೇವಲ ಸಿದ್ಧಾಂತಗಳಾಗಿ ಉಳಿಯದೆ ಸಾಧನೆಯ ಮೂಲಕ ಮನುಷ್ಯನ ಹಿತಕ್ಕಾಗಿ ಬಳಸಿಕೊಳ್ಳಲಾಗಿವೆ. ಇವು ಕಾಲದೇಶಗಳೆಂಬ ಭೇದವಿಲ್ಲದೆ ಸಮಸ್ತಕಾಲಕ್ಕೂ ಸರ್ವಮಾನವ ವರ್ಗಕ್ಕೂ ಗ್ರಾಹ್ಯವಾಗಿವೆ.

ನಮ್ಮಲ್ಲಿ ರೂಢಿಯಲ್ಲಿರುವ ಚತುರ್ವಿಧ ಪುರುಷಾರ್ಥವೆಂಬ ಭಾವನೆಯನ್ನು ಕುರಿತು ಇಲ್ಲಿ ಸ್ವಲ್ಪ ವಿಚಾರಮಾಡಬಹುದು. ಎಲ್ಲ ಮಾನವರೂ ಆಶಿಸಬೇಕಾದ ಇಷ್ಟಾರ್ಥಗಳನ್ನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂದು ಸಂಕ್ಷೇಪವಾಗಿ ಹೇಳಿ-ಎಲ್ಲಕ್ಕೂ ಮೂಲವಾಗಿ ಧರ್ಮವನ್ನೂ ಗುರಿಯಾಗಿ ಮೋಕ್ಷವನ್ನೂ ನಡುವೆ ಅರ್ಥ ಕಾಮಗಳನ್ನೂ ಜೋಡಿಸಿ, ಧರ್ಮಕ್ಕೂ ಮೋಕ್ಷಕ್ಕೂ ವಿರೋಧವಲ್ಲದ ಅರ್ಥ ಕಾಮಗಳನ್ನು ಸಾಧಿಸಬೇಕೆಂಬುದನ್ನು ರೂಢಿಪಡಿಸಿದರು. ಪಾಶ್ಚಾತ್ಯ ದೇಶಗಳಲ್ಲಿ ಮಾನವ ಜೀವನದ ಧ್ಯೇಯವನ್ನು ಈ ರೀತಿಯ ಸಮಗ್ರ ದೃಷ್ಟಿಯಿಂದ ನಿರೂಪಿಸಿದಂತೆ ಕಾಣುವುದಿಲ್ಲ. ಮಾನವನು ಕೇವಲ ಅರ್ಥಾಭ್ಯುದಯದ ಆಕಾಂಕ್ಷೆ, ಅಥವಾ ಬಲಾಕಾಂಕ್ಷೆ-ಇತ್ಯಾದಿ ವಾದಗಳನ್ನು ಪ್ರತಿಪಾದಿಸುವ ಗ್ರಂಥರಾಶಿಯನ್ನು ಅಲ್ಲಿ ನಾವು ಕಾಣುತ್ತೇವೆ. ಅಂತಹ ಅಪೂರ್ಣವಾದ ದರ್ಶನದ ಆಧಾರದ ಮೇಲೆ ನಿರ್ಮಾಣವಾಗಿರುವ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳನ್ನು ಕಾಣುತ್ತೇವೆ, ಅಷ್ಟೆ. ಆದರೆ ಭಾರತೀಯರ ಈ ಚತುರ್ವಿಧ ಪುರುಷಾರ್ಥವೆಂಬ ಭಾವನೆಯು ಎಷ್ಟು ಸಮಂಜಸವಾದುದು! ಸನಾತನ ಧರ್ಮದ ಸಿದ್ಧಾಂತಗಳು ದೇಶಕಾಲಪರಿಮಿತಿಯಿಲ್ಲದೆ ಎಲ್ಲರಿಗೂ ಲಭ್ಯವಾಗಿವೆ. ಎಲ್ಲರಿಗೂ ಫಲದಾಯಕವಾಗಿದೆ. ಚತುರ್ವಿಧ ಪುರುಷಾರ್ಥವೆಂಬ ದೃಷ್ಟಿ ಲೋಕಕಲ್ಯಾಣಕ್ಕೇ ಸಾಧಕವಾಗಿದೆ.

### ಆರ್ಥಿಕ ಕ್ಷೇತ್ರದಲ್ಲಿ

ಇನ್ನು ಆರ್ಥಿಕ ಜೀವನದ ವಿಚಾರದಲ್ಲಿ ಪೂರ್ವ ಮತ್ತು ಪಶ್ಚಿಮ ದೇಶಗಳ ರೀತಿನೀತಿಗಳಲ್ಲಿ ಅಂತರವನ್ನು ವಿಮರ್ಶಿಸೋಣ. ಆಧುನಿಕ ಕಾಲದಲ್ಲಿ ಆರ್ಥಿಕ ವಿಚಾರಗಳೇ ಅತಿ ಪ್ರಾಮುಖ್ಯವನ್ನು ಪಡೆದಿವೆ. ೧೮ನೇ ಶತಮಾನದಿಂದೀಚೆಗೆ ಪಾಶ್ಚಾತ್ಯ ದೇಶಗಳ ಉದ್ಯೋಗ ವಾಣಿಜ್ಯ ಕ್ರಮಗಳಲ್ಲಿ ಒಂದು ಪ್ರಚಂಡವಾದ ಕ್ರಾಂತಿಯುಂಟಾಯಿತು. ದೊಡ್ಡ ಯಂತ್ರೋಪಕರಣಗಳ ನಿರ್ಮಾಣ, ಮಹಾಪ್ರಮಾಣದಲ್ಲಿ ಪದಾರ್ಥಗಳ ತಯಾರಿಕೆ, ಅವುಗಳ ಮಾರಾಟದ ವಿಶಾಲ ವ್ಯವಸ್ಥೆ, ಇತರ ದೇಶಗಳಲ್ಲಿ ಗಿರಾಕಿಗಳನ್ನೊದಗಿಸಿಕೊಳ್ಳುವ ಕಡು ಹಂಬಲ, ಐಶ್ವರ್ಯವೃದ್ಧಿ ಮತ್ತು ಅದರ ಕೇಂದ್ರೀಕರಣ; ಸೋಷಲಿಸಂ ಕಮ್ಯೂನಿಸಂ ಮುಂತಾದ ಸಿದ್ಧಾಂತಗಳು, ತದನುಗುಣವಾದ ರಾಜ್ಯ ವ್ಯವಸ್ಥೆ— ಇವೆಲ್ಲವೂ ಈ ಎರಡು ಶತಮಾನಗಳ ಸಂಕ್ಷಿಪ್ತ ಚರಿತ್ರೆ. ಇದರ ಜೊತೆಗೆ ವೈಜ್ಞಾನಿಕ ಪರಿಶೋಧನೆಗಳ ಫಲವಾಗಿ ಪ್ರಕೃತಿಯ ಶಕ್ತಿಗಳ ಮೇಲೆ ಆಧುನಿಕ ಕಾಲದ ಪಾಶ್ಚಾತ್ಯ ದೇಶದವರು ಪಡೆದುಕೊಂಡ ಅಭೂತಪೂರ್ವವಾದ ಅಧಿಕಾರ. ಕಾಲಕ್ರಮದಲ್ಲಿ ಪೂರ್ವ ದೇಶದವರಿಗೂ ಈ ನಾಗರಿಕತೆಯ ಫಲವು ಒದಗುತ್ತ ಬಂದಿದೆ.

ಕೈಗಾರಿಕೆಯ ಕ್ಷೇತ್ರದಲ್ಲಿ ಉಪಯೋಗಿಸಲ್ಪಡುವ ಯಂತ್ರಗಳು ಮಹಾಭೂತಗಳಂತೆ ಕೆಲಸ ಮಾಡಬಲ್ಲವು. ಈ ಭೂತಗಳನ್ನು ಕೇವಲ ಲಾಭಾಕಾಂಕ್ಷೆಯಿಂದ ಸ್ಥಾಪಿಸಿ, ಕೊಬ್ಬಿಸುತ್ತಾರೆ. ಹಿಂದಿನ ಕಾಲದ ಸಣ್ಣ ಕೈಗಾರಿಕೆಗಳಿಗೂ ಈಗಿನ ಕಾಲದ ಬೃಹದ್ರೂಪದ ಕೈಗಾರಿಕೆಗಳಿಗೂ ಅಂತರವೇನೆಂದರೆ— ಹಿಂದೆ ಪದಾರ್ಥಗಳ ತಯಾರಿಕೆ ಜನರ ಉಪಯೋಗದ ದೃಷ್ಟಿಯಿಂದಲೇ ಆಗುತ್ತಿತ್ತು, ಈಗ ಮುಖ್ಯವಾಗಿ ಲಾಭದೃಷ್ಟಿಯಿಂದಲೇ ಆಗುತ್ತಿದೆ. ಇದರ ಪರಿಣಾಮವಾಗಿ ಸಣ್ಣ ಕೈಗಾರಿಕೆಗಳು ಮೂಲೆಗೆ ಬಿದ್ದಿವೆ. ಅನೇಕ ದೇಶಗಳಲ್ಲಿ ಈ ಕಸಬುಗಳಿಂದ ಜೀವಿಸುತ್ತಿದ್ದವರು ನಿರುದ್ಯೋಗಿಗಳಾಗಿದ್ದಾರೆ — ಜನಸಾಮಾನ್ಯರಲ್ಲಿ ದಾರಿದ್ರ್ಯ ಬೆಳೆದಿದೆ. ಎಷ್ಟೇ ಅಗ್ಗವಾದರೂ ಈ ಯಂತ್ರಗಳಿಂದ ಹೊರಬೀಳುವ ಪದಾರ್ಥಗಳನ್ನು ಅನೇಕರಿಗೆ ಕೊಳ್ಳುವ ಶಕ್ತಿಯೂ ಇಲ್ಲವಾಗಿದೆ. ಹಣದ ಹಂಚಿಕೆಯು ನ್ಯಾಯಸಮ್ಮತವಾಗಿರುವುದಿಲ್ಲ. ಬಂಡವಾಳಗಾರರಿಗೂ ಕಾರ್ಮಿಕರಿಗೂ ಘರ್ಷಣೆ ಇದ್ದೇ ಇರುತ್ತದೆ.

ಈ ದುರವಸ್ಥೆಯ ಪರಿಹಾರಕ್ಕೆ ಸೋಷಲಿಸಂ, ಕಮ್ಯುನಿಸಂ ಮುಂತಾದ ಕ್ರಮಗಳು ರೂಢಿಯಲ್ಲಿ ಬರುತ್ತಲಿವೆ. ಸರಕಾರಗಳ ಮುಖಾಂತರವೇ ದೊಡ್ಡ ಯಾಂತ್ರಿಕೋದ್ಯಮಗಳನ್ನು ನಡೆಸಬೇಕೆಂದು ಎಲ್ಲರೂ ಒಪ್ಪುವ ಮಾತಾಗಿದೆ. ಆದರೆ ಒಂದು ದೇಶದ ಸರಕಾರವನ್ನು ನಿರ್ವಹಿಸುವ ರಾಜಕೀಯ ಪಕ್ಷವೂ ಅದರ ನಾಯಕರೂ ಈ ಏರ್ಪಾಡಿನಲ್ಲಿ ಅತಿ ಬಲಿಷ್ಠರಾಗುವುದು ಅನಿವಾರ್ಯವಾದುದೆಂಬಂತೆ ಕಂಡುಬರುತ್ತಿದೆ. ಒಂದು ರಾಜಕೀಯ ವ್ಯವಸ್ಥೆಗೆ ಒಳಪಟ್ಟ ಮೇಲೆ ಕೊನೆಯ ಮಾತು ಬಲಪ್ರಯೋಗ. ಆದುದರಿಂದ ಹಿಂಸೆಯೂ ಇದರ ಒಂದು ಅಂಶವೆನ್ನುವುದರಲ್ಲಿ ಸಂದೇಹವಿಲ್ಲ.

ಗಾಂಧಿಯವರು ಸಾರುತ್ತಿದ್ದ ತತ್ತ್ವಗಳು ಇಂತಹ ಆರ್ಥಿಕ ಸನ್ನಿವೇಶದಲ್ಲಿ ಗಮನಾರ್ಹವಾಗಿವೆ. ಮಹಾತ್ಮರು ಯಂತ್ರಗಳ ವಿರೋಧಿಗಳಾಗಿರಲಿಲ್ಲ. ಆದರೆ ಅವುಗಳ ಪರಿಣಾಮ ನಿರುದ್ಯೋಗವೂ ದಾರಿದ್ರ್ಯವೂ ಆಗುವುದಾದರೆ—ಇದನ್ನು ಅವರು ವಿರೋಧಿಸುತ್ತಿದ್ದರು. ಗ್ರಾಮಜೀವನದಲ್ಲಿ ವ್ಯವಸಾಯದ ಜತೆಗೆ ಯಾವುದಾದರೊಂದು ಕೈಕಸಬು ರೂಢಿಯಾಗಿದ್ದ ಪಕ್ಷಕ್ಕೆ ಗ್ರಾಮಸ್ಥರ ದಾರಿದ್ರ್ಯವು ತಕ್ಕಮಟ್ಟಿಗೆ ಪರಿಹಾರವಾಗುವುದೆಂದು ಅವರು ಅಭಿಪ್ರಾಯಪಟ್ಟರು. ಈ ಅಭಿಪ್ರಾಯಗಳು ನಮ್ಮನ್ನು ರೂಕ್ಷಾವಸ್ಥೆಗೆ ಒಯ್ಯುತ್ತವೆಯೆಂಬ ಆಕ್ಷೇಪಣೆಯಿಂದ ಅವರು ಎದೆಗುಂದಲಿಲ್ಲ. ಸಾಮಾನ್ಯ ಜನರಿಗೆ

ಜೀವನೋಪಾಯಗಳನ್ನೊದಗಿಸುವುದೂ ಅವರ ಬಾಳಿನ ಮಟ್ಟವನ್ನು ಹೆಚ್ಚಿಸುವುದೂ ಗಾಂಧಿಯವರ ಆಶಯ. ಅವರಂತೆಯೇ ಚೀನ ದೇಶದ ನಾಯಕರಾಗಿದ್ದ ಡಾ. ಸನ್ ಯಟ್ ಸೇನರವರ ಆಶಯವೂ ಆಗಿದ್ದಿತು.

ದೊಡ್ಡ ಯಂತ್ರೋದ್ಯಮಗಳಿಗೂ ಹಳ್ಳಿಗಳ ಕೈಗಾರಿಕೆಗಳಿಗೂ ಘರ್ಷಣೆಯಾಗದೆ ಅವು ಪರಸ್ಪರ ಪೋಷಕವಾಗುವಂತೆ ವ್ಯವಸ್ಥೆ ಮಾಡುವುದೂ ಸರ್ವಜನರ ಹಿತಕ್ಕಾಗಿ ಐಶ್ವರ್ಯವನ್ನು ನ್ಯಾಯವಾದ ರೀತಿಯಲ್ಲಿ ಹಂಚಿಕೆ ಮಾಡುವುದೂ ಆರ್ಥಿಕ ಪ್ರಪಂಚದಲ್ಲಿ ದೊಡ್ಡ ಸಮಸ್ಯೆಯಾಗಿದೆ. ಇದನ್ನು ಶಾಂತರೀತಿಯಿಂದ ಪರಿಹರಿಸುವುದಕ್ಕಾಗಿ ಗಾಂಧಿಯವರೂ ಡಾ. ಸನ್ ಯಟ್ ಸೇನರವರೂ ಸೂಚಿಸಿರುವ ಮಾರ್ಗ ಅನುಸರಣೀಯವೆಂದು ಕ್ರಮೇಣ ಕಂಡು ಬರಬಹುದು.

## ಸಾಮಾಜಿಕ ಕ್ಷೇತ್ರದಲ್ಲಿ

ಸಾಮಾಜಿಕ ಜೀವನದ ರೀತಿನೀತಿಗಳಲ್ಲಿ ಪೂರ್ವ ಮತ್ತು ಪಶ್ಚಿಮ ದೇಶಗಳಲ್ಲಿ ಬಹಳ ಅಂತರವು ಕಂಡುಬರುವುದು. ಪೂರ್ವ ದೇಶದವರು ಸಾಮಾನ್ಯವಾಗಿ ಹಿರಿಯರ ಸಂಪ್ರದಾಯಗಳಿಗೆ ಹೆಚ್ಚು ಮನ್ನಣೆ ಕೊಡುವವರು, ಜೀವನದಲ್ಲಿ ಸಾಮರಸ್ಯವೂ ಭದ್ರತೆಯೂ ಇರಬೇಕೆಂದು ಸದಾ ಬಯಸುವವರು. ಇಲ್ಲಿ ಕುಟುಂಬವೇ ಸಮಾಜದ ಮೂಲ, ವ್ಯಕ್ತಿಯಲ್ಲ. ಸ್ತ್ರೀಯರೇ ಕುಟುಂಬದ ಆಚಾರ ಸಂಪ್ರದಾಯಗಳಿಗೆ ರಕ್ಷಕರು. ಪೂರ್ವ ದೇಶಗಳಲ್ಲಿ ಸ್ತ್ರೀಯರಿಗೆ ಗೌರವ ಸ್ಥಾನವಿಲ್ಲವೆಂಬುದು ಅನೇಕರಲ್ಲಿ ಉಂಟಾಗಿರುವ ಒಂದು ಭ್ರಮೆ, ದುರಭಿಪ್ರಾಯ. ಪಾಶ್ಚಾತ್ಯ ದೇಶಗಳಲ್ಲಿ ಬಾಹ್ಯಾಚರಣೆಗಳಲ್ಲಿ ಸ್ತ್ರೀಯರಿಗೆ ಸಲ್ಲುವ ಆದರ, ವಸ್ತುತಃ ಅವರು ಅಬಲೆಯರು ಎನ್ನುವ ಅಭಿಪ್ರಾಯಕ್ಕನುಸಾರವಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಕುಟುಂಬಕ್ಕಿಂತಲೂ ವ್ಯಕ್ತಿಯ ಸ್ವಾತಂತ್ರ್ಯವೂ ಹಕ್ಕುಗಳೂ ಮುಖ್ಯವಾಗಿ ಗಣಿಸಲ್ಪಡುವುವು. ಇದರಿಂದ ಅವರ ಕುಟುಂಬಜೀವನ ಸುಖಮಯವಾಗಿಲ್ಲ. ಸ್ತ್ರೀಯರೂ ಪುರುಷರಂತೆ ಸ್ಪರ್ಧೆಯಿಂದ ತುಂಬಿದ ಜೀವನದಲ್ಲಿ ಭಾಗಿಗಳಾಗಿರುವುದರಿಂದ ಅನೇಕ ಸಮಸ್ಯೆಗಳುಂಟಾಗಿವೆ.

ಪಾಶ್ಚಾತ್ಯ ದೇಶಗಳೊಂದಿಗೆ ಸಂಪರ್ಕವಾದ ಬಳಿಕ ಪೂರ್ವದೇಶಗಳಲ್ಲಿಯೂ ಬಹಳ ಬದಲಾವಣೆಗಳು ಆಗಿವೆ. ಅವಿಭಕ್ತ ಕುಟುಂಬಗಳ ಪದ್ಧತಿ ಬಹುಮಟ್ಟಿಗೆ ಮಾಯವಾಗಿದೆ. ಈ ಪದ್ಧತಿಯಲ್ಲಿ ಸಣ್ಣ ಪ್ರಮಾಣದಲ್ಲಿ ಕಮ್ಯೂನಿಸ್ಟ್ ಸಿದ್ಧಾಂತವು ಅಡಕವಾಗಿತ್ತು. ದುರ್ಬಲರ, ನಿರ್ಭಾಗ್ಯರ ರಕ್ಷಣೆ ಆಗುತ್ತಲಿತ್ತು. ಆದರೆ ಒಮ್ಮೊಮ್ಮೆ ವ್ಯಕ್ತಿಯ ಪೂರ್ಣ ವಿಕಾಸಕ್ಕೆ ಅವಕಾಶವಿರುತ್ತಿರಲಿಲ್ಲ. ಪ್ರಾಯಶಃ ಈ ಅವಿಭಕ್ತ ಕುಟುಂಬದ ಪದ್ಧತಿ ಪೂರ್ವದೇಶಗಳಲ್ಲಿಯೂ ಮತ್ತೆ ರೂಢಿಗೆ ಬರುವ ಚಿಹ್ನೆಗಳಿಲ್ಲ.

ಆಧುನಿಕ ಕಾಲದಲ್ಲಿ ಪೂರ್ವ ದೇಶಗಳಲ್ಲಿಯೂ ಸ್ತ್ರೀಯರು ಕೇವಲ ಗೃಹಿಣಿಯರಾಗಿ ಮಾತ್ರ ಉಳಿಯದೆ ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿದ್ದಾರೆ. ಇದು ದೇಶಾಭ್ಯುದಯಕ್ಕೆ ಅಗತ್ಯ. ಆದರೆ ಪಾಶ್ಚಾತ್ಯ ದೇಶಗಳಲ್ಲಿರುವಂತೆ ಎಲ್ಲ ವೃತ್ತಿಗಳಲ್ಲಿಯೂ ಪುರುಷರಂತೆ ಅವರೂ ಸ್ಪರ್ಧಿಗಳಾಗಿ ತಮ್ಮ ಸಹಜ ಸ್ವಭಾವಕ್ಕೂ ಕುಟುಂಬದ ಅಸ್ತಿತ್ವಕ್ಕೂ ಸಾಮರಸ್ಯಕ್ಕೂ ಭಂಗಬರುವುದಾದರೆ ಅದು ಸ್ತ್ರೀಯರ ಪ್ರಗತಿಯ ಸೂಚನೆಯೆಂದು ಹೇಳಲಾಗದು.

ಪೂರ್ವದೇಶಗಳಲ್ಲಿ ಕುಟುಂಬದ ಮೇಲಣ ಮಮತೆಯೂ ಅನೇಕ ಕುಟುಂಬಗಳನ್ನೊಳಗೊಂಡ ಒಂದು ಜಾತಿಯ ಮೇಲಣ ಮಮತೆಯೂ ಹೆಚ್ಚು ಬೆಳೆದುಬಂದಿದೆ. ಸಮಾಜದ ವರ್ಗೀಕರಣವೂ ಜಾತಿಗಳನುಸಾರವಾಗಿದೆ. ಈ ಜಾತಿಗಳಲ್ಲಿ ಹಿಂದಿನ ಕಾಲದಿಂದ ಆನುವಂಶಿಕವಾಗಿ ಬಂದ ಕಸಬುಗಳೂ ವೃತ್ತಿಗಳೂ ಇದ್ದುವು. ಆದರೆ ಈಗ ಬಹುಮಟ್ಟಿಗೆ ವರ್ಣಸಂಕರವೇ ಆಗಿದೆ. ಒಂದು ಜಾತಿಗೆ ಸೇರಿದವರು ಆನುವಂಶಿಕವಾಗಿ ಬಂದಿರುವ ವೃತ್ತಿಯನ್ನೇ ಅವಲಂಬಿಸಬೇಕೆನ್ನುವುದು ಇಂದಿನ ಕಾಲಕ್ಕೆ ಸಲ್ಲದ ಮಾತು. ಆದರೂ ಕೆಲವು ವೃತ್ತಿಗಳಲ್ಲಿ ವಂಶಪರಂಪರೆಯಾಗಿ ಬಂದ ಕುಶಲತೆಯಿರುವುದು. ಅದನ್ನೇ ವೃದ್ಧಿಪಡಿಸಿಕೊಂಡರೆ ಒಳ್ಳೆಯದಾಗುವುದು. ಇದರೆ ವ್ಯಕ್ತಿಗಳು ತಮ್ಮ ತಮ್ಮ ಸ್ವಭಾವಕ್ಕೂ ಗುಣವಿಶೇಷಗಳಿಗೂ ಒಗ್ಗುವ ವೃತ್ತಿಗಳನ್ನು ಕೈಕೊಳುವುದೇ ಎಲ್ಲರಿಗೂ ಹಿತವಾದ ಮಾರ್ಗ.

ಈ 'ವರ್ಣಸಂಕರ' ಕಾಲದಲ್ಲಿ ಈ ಜಾತ್ಯಭಿಮಾನವು ಅಸಂಬದ್ಧವಾದರೂ ರೂಢಮೂಲವಾಗಿರುವದರಿಂದ ದೇಶದ ಹಿತಕ್ಕೇ ಕಂಟಕವಾಗಿ ಪರಿಣಮಿಸಿದೆ. ಸಮಾಜದಲ್ಲಿ ಒಗ್ಗಟ್ಟನ್ನು ಸ್ಥಾಪಿಸಲು ಅಡ್ಡಿಯಾಗಿದೆ. ಜಾತಿಗಳಲ್ಲಿ—ಅಥವಾ ವೃತ್ತಿಗಳಲ್ಲಿ—ಮೇಲು ಕೀಳೆಂಬ ತಾರತಮ್ಯಬುದ್ಧಿ ಇರುವುದರಿಂದ ಹೇಗೆ ಎಲ್ಲ ಮಾನವರೂ ಸಮಾನವಾದ ಗೌರವಕ್ಕೆ ಪಾತ್ರರಾಗಿರಬೇಕೊ ಹಾಗೆಯೆ ಎಲ್ಲ ವೃತ್ತಿಗಳೂ ಸಮಾನವಾದ ಗೌರವಕ್ಕೆ ಪಾತ್ರವಾಗಬೇಕೆಂಬ ಮನೋಭಾವ ವಿಶೇಷವಾಗಿ ಪೂರ್ವ ದೇಶೀಯರಲ್ಲಿ ಉಂಟಾಗಬೇಕಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಐಶ್ವರ್ಯ ಸಾಧನೆಯು ಯಶಸ್ಸನ್ನು ಗಳಿಸುವ ಮುಖ್ಯ ಮಾರ್ಗವಾಗಿರುವುದು. ಪ್ರಾಯಶಃ ಎಲ್ಲ ಬಗೆಯ ವೃತ್ತಿಗಳಲ್ಲಿಯೂ ದಕ್ಷತೆಯಿಂದ ಕೆಲಸ ಮಾಡುವವರಿಗೆ ಐಶ್ವರ್ಯಪ್ರಾಪ್ತಿಯಾಗುವುದು. ದಕ್ಷತೆಗೂ ಕಾರ್ಯಜಯಕ್ಕೂ ಸನ್ಮಾನ ಉಂಟು. ಆದುದರಿಂದ ಅವರಲ್ಲಿ ವೃತ್ತಿಗಳಿಗಾಗಲೀ ವಂಶಗಳಿಗಾಗಲೀ ಮೇಲು ಕೀಳೆಂಬ ಭಾವನೆ ಅನ್ವಯವಾಗುವುದಿಲ್ಲ.

ಪಾಶ್ಚಾತ್ಯ ದೇಶಗಳಲ್ಲಿಯೂ ಮಧ್ಯಕಾಲದಲ್ಲಿ ಅಂದರೆ ಸುಮಾರು ೫೦೦ ವರ್ಷಗಳ ಹಿಂದೆ, ಒಂದು ಬಗೆಯ ಜಾತಿಗಳ ವರ್ಗೀಕರಣವಿದ್ದಿತು. ಮತ್ತು ಯಾವ ಕಾಲದಲ್ಲಿಯೂ ಜಾತ್ಯನುಸಾರವಾದ ವರ್ಗೀಕರಣವಿಲ್ಲದಿದ್ದರೂ ವೃತ್ತಿಗಳನುಸಾರ ಭೇದಗಳಿದ್ದೇ ಇರುತ್ತವೆ. ಅವರಲ್ಲಿ ಸ್ಪರ್ಧೆಯಾಗಗೊಡದಂತೆ, ಏಕದೇಹನ್ಯಾಯದಂತೆ ಸಮಾಜದ ಅಂಗವಾಗಿ ಅವರವರು ವರ್ತಿಸುವುದು ಸಮಾಜ ಜೀವನಕ್ಕೆ ಭದ್ರತೆಯನ್ನೂ ಮಂಗಳವನ್ನೂ ಉಂಟುಮಾಡುವುದು. ಕೆಲವು ಪಾಶ್ಚಾತ್ಯ ವಿದ್ವಾಂಸರು ಆಧುನಿಕ ಕಾಲದಲ್ಲಿ ಧನಾರ್ಜನೆಗೇ ಪ್ರಾಶಸ್ತ್ಯವನ್ನು ಕೊಡುವ ಮನೋಭಾವವನ್ನು ತಪ್ಪಿಸಬೇಕೆಂದೂ ನಿಃಸ್ಪೃಹರಾದ ವಿವೇಕಿಗಳೇ ರಾಜ್ಯದ ಸೂತ್ರಗಳನ್ನು ಧರಿಸುವಂತಿರಬೇಕೆಂದೂ ಅಭಿಪ್ರಾಯಪಡುತ್ತಾರೆ. ಇದು ಆ ದೇಶಗಳವರ ಗಮನಕ್ಕೆ ಮುಖ್ಯವಾಗಿ ಬರಬೇಕಾದ ಅಂಶವಾಗಿದೆ. ಪಾಶ್ಚಾತ್ಯರ ಅಂಧಾನುಕರಣ ಮಾಡುವ ಪೂರ್ವದೇಶೀಯರಿಗೂ ಇದು ಎಚ್ಚರಿಕೆಯನ್ನು ಕೊಡುವ ಮಾತಾಗಿದೆ.

## ರಾಜಕೀಯ ಕ್ಷೇತ್ರದಲ್ಲಿ

ಪಾಶ್ಚಾತ್ಯ ದೇಶಗಳಲ್ಲಿ ಪುರಾತನ ಗ್ರೀಸ್ ಮತ್ತು ರೋಮ ದೇಶಗಳಲ್ಲಿ ಹುಟ್ಟಿ ಬೆಳೆದ ಸಿದ್ಧಾಂತಗಳೂ ಕಾನೂನಿನ ಕ್ರಮಗಳೂ ವಿಕಾಸಗೊಳ್ಳುತ್ತ ಬಂದು ರಾಜ್ಯಾಂಗ ರಚನೆಯಲ್ಲಿ ರೂಪುಗೊಂಡವು. ಕಾಲಕ್ರಮದಲ್ಲಿ ರಾಜರನ್ನೂ ಆಡಳಿತ ವರ್ಗದವರನ್ನೂ ಅಂಕೆಯಲ್ಲಿಡಲು ಶಾಸನಾಂಗವು ಪ್ರಬಲಗೊಳ್ಳುತ್ತ ಬಂದು ಪ್ರಜಾಪ್ರಭುತ್ವದ ತತ್ತ್ವವು ಸಾರ್ಥಕಗೊಳ್ಳುತ್ತ ಬಂತು. ಮಧ್ಯಯುಗದಲ್ಲೂ ಆಧುನಿಕ ಕಾಲದಲ್ಲೂ ನಡೆದ ಕ್ರಾಂತಿಗಳ ಫಲವಾಗಿ ಪಾಶ್ಚಾತ್ಯ ದೇಶಗಳಲ್ಲಿ ಈ ತತ್ವವು ಭದ್ರವಾದ ತಳಹದಿಯ ಮೇಲೆ ಸ್ಥಾಪಿತವಾಗಿದೆ. ಪ್ರಜೆಯ ಹಕ್ಕು, ಅದರ ರಕ್ಷಣೆ, ರಾಜ್ಯ ಶಾಸನ, ಅದರ ನಿಷ್ಪಕ್ಷಪಾತವಾದ ಪ್ರಯೋಗ, ಈ ಲಕ್ಷಣಗಳು, ಘರ್ಷಣೆಯ ಪರಿಣಾಮವಾಗಿ ಪಾಶ್ಚಾತ್ಯದೇಶಗಳಲ್ಲಿ ನಿರ್ದಿಷ್ಟವಾದ ರೂಪಕ್ಕೆ ಬಂದಷ್ಟು ಪೂರ್ವದೇಶಗಳಲ್ಲಿ ಬಂದಿಲ್ಲ.

ಪೂರ್ವದೇಶಗಳಲ್ಲಿ ಈ ಬಗೆಯ ಘರ್ಷಣೆಯನ್ನು, ಬಲಹೀನರು ಬಲವಂತರಿಂದ ಕ್ರಮಕ್ರಮವಾಗಿ ಹಕ್ಕುಗಳನ್ನು ಕಿತ್ತುಕೊಳ್ಳುವು

ದನ್ನು ಚರಿತ್ರೆಯಲ್ಲಿ ನಾವು ಕಾಣುವುದಿಲ್ಲ. ಅರಸರು ಒಳ್ಳೆಯವರಾಗಿದ್ದರೆ ಧರ್ಮದ ಅಂಕೆಯಲ್ಲಿದ್ದುಕೊಂಡು ಯಾರೊಬ್ಬರ ಬಲವಂತವೂ ಇಲ್ಲದೆಯೇ ಪ್ರಜೆಗಳ ಕ್ಷೇಮಚಿಂತನೆಯನ್ನು ಮಾಡಿದ್ದಾರೆ. ದುಷ್ಟರಾಗಿದ್ದರೆ ಪ್ರಾಯಶಃ ರಾಜ್ಯದ ದಂಡನಾಯಕರೊ ಇತರ ಬಲಿಷ್ಠರಾದವರೊ ಅವರನ್ನು ಓಡಿಸಿದ್ದಾರೆ. ಸಾಮಾನ್ಯ ಜನರು ಈ ರಾಜ್ಯದ ವಿಪ್ಲವಗಳಲ್ಲಿ ಪ್ರತ್ಯಕ್ಷವಾಗಿ ಭಾಗಿಗಳಾಗುತ್ತಿರಲಿಲ್ಲ. ಇದಕ್ಕೆ ಕಾರಣವೇನಂದರೆ ನಿತ್ಯ ಜೀವನಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು ಗ್ರಾಮಪಂಚಾಯಿತಿಗಳ ಮೂಲಕವೂ ಸ್ಥಳೀಯ ವ್ಯವಸ್ಥೆಗಳ ಮೂಲಕವೂ ನಡೆದುಹೋಗುತ್ತಿದ್ದವು. ರಾಜ್ಯವಿಪ್ಲವಗಳಲ್ಲಿ ಈ ಸ್ಥಳೀಯ ವ್ಯವಸ್ಥೆಗೆ ಯಾವ ಏಟೂ ಬೀಳುತ್ತಿರಲಿಲ್ಲ. ಸಂಪ್ರದಾಯ, ಪೂರ್ವಾಚಾರ, ಕುಲಪದ್ಧತಿ, 'ಮಾಮೂಲು' ಇವೇ ರಾಜಶಾಸನಕ್ಕಿಂತ ಹೆಚ್ಚಾಗಿ ಜನಸಾಮಾನ್ಯರ ಜೀವನವನ್ನು ರೂಪುಗೊಳಿಸುತ್ತಿದ್ದುವು.

ಪಾಶ್ಚಾತ್ಯ ದೇಶಗಳಲ್ಲಿ ತಮ್ಮ ತಮ್ಮ ರಾಷ್ಟ್ರಗಳ ಪೂರ್ತಿಗೆ ಪ್ರಜಾಪ್ರಭುತ್ವದ ತತ್ತ್ವವನ್ನು ಚನ್ನಾಗಿ ಪಾಲಿಸುತ್ತ ಬಂದರು; ಆದರೆ ಅವರೇ ಅನ್ಯದೇಶೀಯರ ವಿಚಾರದಲ್ಲಿಯೂ ಪರದೇಶಗಳನ್ನು ಗೆದ್ದು ತಮ್ಮ ರಾಜಶಾಸನವನ್ನು ಸ್ಥಾಪಿಸಿದಾಗಲೂ ಬಹಳ ಸಂಕುಚಿತವಾದ ಬುದ್ಧಿಯನ್ನು ತೋರಿಸಿದ್ದಾರೆ. ಇಂದು ಏಷ್ಯಾಖಂಡದಲ್ಲೆಲ್ಲ ಪಾಶ್ಚಾತ್ಯರ ಆಳಿಕೆಗೆ ಪ್ರಬಲವಾದ ಪ್ರತಿಭಟನೆ ಇರುವುದಕ್ಕೆ ಇದೇ ಕಾರಣ. ತಮ್ಮ ರಾಷ್ಟ್ರೀಯತ್ವದ ಹೆಮ್ಮೆಯನ್ನು ಅತಿಯಾಗಿ ಬೆಳೆಸುವ ಕಾರಣದಿಂದಲೇ ಅನೇಕ ಕದನಗಳೂ ಕಲಹಗಳೂ ಉಂಟಾಗಿವೆ, ಉಂಟಾಗುತ್ತಲೂ ಇವೆ. ಈ ವಿಷಯದಲ್ಲಿ ಪೂರ್ವದೇಶಗಳ ಜನರು ಹೆಚ್ಚು ಔದಾರ್ಯವನ್ನೇ ತೋರಿಸಿದ್ದಾರೆ, ವಿಶ್ವಪ್ರೇಮಿಗಳಾಗಿದ್ದಾರೆ. ಸಂಯುಕ್ತ ರಾಷ್ಟ್ರಗಳ ವ್ಯವಸ್ಥೆಯಲ್ಲಿ (United Nations Organisation) ಈ ಪೂರ್ವದೇಶಗಳಿಂದ ಹೋಗಿರುವ ಪ್ರತಿನಿಧಿಗಳು ವಿಶ್ವಶಾಂತಿಗೆ ಹೆಚ್ಚು ಶ್ರದ್ಧೆಯಿಂದ ಶ್ರಮಿಸಬಲ್ಲವರಾಗುತ್ತಾರೆಂದು ವಿಶ್ವಾಸವಿನ್ನಿಟ್ಟುಕೊಳ್ಳಬಹುದು.

ಪ್ರಜಾಪ್ರಭುತ್ವವೆನ್ನಿಸಿಕೊಳ್ಳುವ ದೇಶಗಳಲ್ಲಿಯೂ ಕೆಲವು ಸಮಸ್ಯೆಗಳು ತಲೆದೋರುತ್ತವೆ. ನಿಜವಾಗಿಯೂ ಪ್ರಜೆಗಳ ಹಿತಸಾಧನೆ ಆಗುತ್ತದೆಯೇ ಎಂಬುದು ಸಂದೇಹಾಸ್ಪದವಾಗಿದೆ. ಅಂತರಾಳದಲ್ಲಿ ಹುಟ್ಟಿಕೊಳ್ಳುವ ಪ್ರಬಲ ರಾಜಕೀಯ ಪಕ್ಷಗಳ ನಾಯಕರೂ ಅವರಲ್ಲಿ ಒಮ್ಮೊಮ್ಮೆ ದುಷ್ಟಗೋಷ್ಠಿಗಳೂ, ಓಟುಗಳನ್ನು ಗಳಿಸಬಲ್ಲ ಕೈಗಾರಿಕೆ ವಾಣಿಜ್ಯ ಕ್ಷೇತ್ರಗಳ ಮುಖ್ಯಸ್ಥರೂ ಸೂತ್ರಧಾರಿಗಳಾಗಿ ಸಾಮಾನ್ಯ ಪ್ರಜೆಗಳನ್ನು ಬೊಂಬೆಗಳನ್ನಾಡಿಸುವಂತೆ ಆಡಿಸುವ ಪ್ರಸಂಗಗಳೂ ಇರುತ್ತವೆ. ಆಡಳಿತ ಸೂತ್ರಗಳನ್ನು ವಹಿಸುವವರು ಸಮರ್ಥರಾಗಿಯೂ ನಿಃಸ್ಪೃಹತೆಯಿಂದ ಪ್ರಜಾಸೇವೆಯನ್ನು ನಡೆಸಬಲ್ಲ ನಿಷ್ಠೆಯನ್ನೂ ಪ್ರಾವಿಣ್ಯವನ್ನೂ ಹೊಂದಿದವರೂ ಆಗಿರಬೇಕು. ಇಂತಹ ದಕ್ಷರನ್ನು ಆಡಳಿತಕ್ಕೆ ಒದಗಿಸಿಕೊಳ್ಳುವುದಕ್ಕಾಗಿ, ಚೀನ ದೇಶದಲ್ಲಿ ಅನೂಚಾನವಾಗಿ ಪರೀಕ್ಷಾಕ್ರಮಗಳುಂಟು, ಮತ್ತು ಡಾ|| ಸನ್ ಯಟ್ ಸೇನರ ರಾಜ್ಯಾಂಗ ಯೋಜನೆಯ ಪ್ರಕಾರ ಸರಕಾರದ ಕೆಲಸ ಕಾರ್ಯಗಳನ್ನು ಪರೀಕ್ಷೆಗೆ ಗುರಿಮಾಡುವ ಮೇಲ್ವಿಚಾರಕರ ಏರ್ಪಾಡೊಂದುಂಟು. ಕೌಟಿಲ್ಯಅರ್ಥಶಾಸ್ತ್ರದಲ್ಲಿ ಈಗಿನ ಸಿ. ಐ. ಡಿ. ಶಾಖೆಗೆ ಹೋಲಿಸಬಹುದಾದ ಒಂದು ವ್ಯವಸ್ಥೆ ಇದೆ. ಅಲ್ಲಿನ ಗುಪ್ತಚಾರರು ಪ್ರಜೆಗಳ ನಡವಳಿಕೆಯನ್ನು ಪರೀಕ್ಷಿಸುತ್ತಿರಲಿಲ್ಲ. ಅಧಿಕಾರಿ ವರ್ಗದವರ ಕಾರ್ಯಗಳನ್ನು ರಹಸ್ಯವಾಗಿ ತಿಳಿದು ರಾಜನಿಗೆ ವರದಿಮಾಡುತ್ತಿದ್ದರು.

ರಾಜನೀತಿಯು ಒಂದು ಸಾಧನವೇ ಹೊರತು, ಸಿದ್ಧಿಯಲ್ಲ. ಪಾಶ್ಚಾತ್ಯ ದೇಶಗಳಲ್ಲಿರುವಷ್ಟು ಪ್ರಾಮುಖ್ಯ ಇದಕ್ಕೆ ಪೂರ್ವ ದೇಶಗಳಲ್ಲಿರಲಿಲ್ಲ. ಜನರ ನಿತ್ಯಜೀವನಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಕೇಂದ್ರೀಕರಿಸದೆ ಸ್ಥಳೀಯ ಆಡಳಿತಕ್ಕೆ ಬಿಡುವುದೇ ಪೂರ್ವದೇಶೀಯರ ಮನೋಭಾವಕ್ಕೆ ವಿಹಿತ.

ಈ ಎರಡನೆಯ ಮಹಾಯುದ್ಧದ ಪರಿಣಾಮವಾಗಿ ಹಿಂದೆ ಎಂದೂ ಇಲ್ಲದ್ದದಿದ್ದ ಅಂತರರಾಷ್ಟ್ರೀಯ ಸಂಪರ್ಕಗಳು ಬೆಳೆದುಬಂದಿವೆ. ಈಚೆಗೆ ಆಗುತ್ತಿರುವಷ್ಟು ಪ್ರಪಂಚದ ಅನೇಕ ರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ ಸಮ್ಮೇಳನಗಳೂ, ಸಭೆಗಳೂ, ಅನೇಕ ಕ್ಷೇತ್ರಗಳಲ್ಲಿ ಅನುಭವವನ್ನು ಪಡೆದವರ ಗೋಷ್ಠಿಗಳೂ ಹಿಂದೆ ಎಂದೂ ನಡೆದಿರಲಿಲ್ಲ. ಇವುಗಳ ಮೂಲಕ ಪರಸ್ಪರ ಪರಿಚಯಗಳಿಗೂ ವಿಚಾರಗಳ ವಿನಿಮಯಕ್ಕೂ ಅವಕಾಶಗಳುಂಟಾಗಿವೆ. ಹಿಂದಿದ್ದ ಸಂಕುಚಿತ ದೃಷ್ಟಿಗಳೂ ಕೀಳುಮೇಲೆಂಬ ನಿರಾಧಾರವಾದ ಭಾವನೆಗಳೂ ದೂರವಾಗುತ್ತಿವೆ. ವಿಶ್ವಪ್ರೇಮದ ಸಾಧನೆಗೂ ಲೋಕಕಲ್ಯಾಣಕ್ಕೂ ಈ ಸಂಪರ್ಕಗಳು ಕಾರಣವಾಗಲೆಂದು ಆಶಿಸೋಣ.

ಎಲ್ಲ ಮಾನವರಲ್ಲಿರುವಂತೆ ಎಲ್ಲ ದೇಶಗಳಲ್ಲಿಯೂ ಗುಣಗಳೂ ಇವೆ. ದೋಷಗಳೂ ಇವೆ. ಒಬ್ಬರಿಂದ ಮತ್ತೊಬ್ಬರು ಕಲಿಯಬೇಕಾದ ಅಂಶಗಳು ಅನೇಕವಿರುತ್ತವೆ. ಪಾಶ್ಚಾತ್ಯ ಮತ್ತು ಪ್ರಾಚ್ಯ ಸಂಸ್ಕೃತಿಗಳಲ್ಲಿ ಪರಸ್ಪರ ವಿರೋಧವಿಲ್ಲ. ಅವುಗಳು ಪರಸ್ಪರ ಪೂರಕವಾಗಿವೆ. ವ್ಯಕ್ತಿಗಳ ಉತ್ತಮವಾದ ವಿಕಾಸಕ್ಕೂ ಸಮಾಜದ ಹಿತಸಾಧನೆಗೂ ಲೋಕಕಲ್ಯಾಣಕ್ಕೂ ಪಾಶ್ಚಾತ್ಯರ ಚಟವಟಿಕೆಯೂ ಬೇಕು, ಪೂರ್ವದೇಶೀಯರ ಶಾಂತ ಚಿತ್ತವೂ ಬೇಕು. ಪಾಶ್ಚಾತ್ಯರ ಯುಕ್ತಿಯೂ ತರ್ಕಬುದ್ಧಿಯೂ ಬೇಕು, ಪೂರ್ವ ದೇಶಿಯರ ಪ್ರತಿಭೆಯೂ ಅಂತರ್ದೃಷ್ಟಿಯೂ ಬೇಕು. ಪಾಶ್ಚಾತ್ಯರ ಅನ್ವೇಷಣಾ ಸಾಮರ್ಥ್ಯವೂ, ನಿರ್ದಾಕ್ಷಿಣ್ಯ ಪ್ರವೃತ್ತಿಯೂ ಬೇಕು, ಪೂರ್ವ ದೇಶೀಯರ ಆತ್ಮಸಾಕ್ಷಾತ್ಕಾರದ ಆಕಾಂಕ್ಷೆಯೂ, ತ್ಯಾಗಬುದ್ಧಿಯೂ ಬೇಕು.

**ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ**

# ಬ್ರಹ್ಮಚಾರಿ



ಕಲುಷಿತ ಹೃದಯದ ಕೆಂಗನಸಲಿ ಆ
    ಮಾಯಾನಗರವ ಹೊಕ್ಕಿದ್ದೆ.
ಅಮೃತಶಿಲೆಯ ಚೆಲು-ಬೀದಿ, ನಡುವೆ ನಾ
    ನಡೆಯೆ ರಾಜನೊಲು ಸೊಕ್ಕಿದ್ದೆ.
ಬಳಿಗೆ ಸುಳಿದ ಅದೆ ಆಪ್ತ ಅರಮನೆಯ
    ಒಳಗೆ ನುಸುಳಿ ಕದವಿಕ್ಕಿದ್ದೆ. ೧

ಎಂಥ ಮಹಲು ಅಹ, ದಂತ ಮಲರಿದೊಲು!
    ಇದಕು ಉಂಟು ಸವಿ ಮುಗಮುಗಿಸೆ.
ಕಂಪುಗಾಳಿ ಕೈ ಕರೆದು ತೋರುತಿವೆ
    ಹೂವ ಮಂಚತಡಿ ನಳನಳಿಸೆ.
ಏನೊ ಹಾಡು ಹೊಸಗಾನವೆರೆಯುತಿದೆ
    ಯಾವ ಬೇಟವನೊ ಮನ ನೆನಸೆ. ೨

ಅರೆರೆ! ದೇಹ ಮನ ಪಕ್ಕವಿಡಿದುವೆನೆ
    ಹಾರತೊಡಗಿರಲು ಗರಿಗೆದರಿ,
ಅಲ್ಲಿ ಬಂತು ಸಖಿಮೇಳ ಸುರಗುವರಿ-
    ಗುಂಪು ಕರೆದು ಬಲು ಪುಷ್ಪಸರಿ;
ಹಾರೆ ಸೋತೆ ಮರುಚಣದಿ ಅವರ ಎದೆ
    ಬಿಸಿಯ ಗಾದಿಯೊಳು ವೈಮುದುರಿ. ೩

ಅಮರ ಕನ್ನೆಯರ ನುಣ್ಣ ಬಣ್ಣ ರಸ-
    ಕಣ್ಣ ವರ್ಣಿಸಲು ಆವ ಕವಿ?
(ಹರುಕು ನೆನಪು ಇದೆ: ಮರುಕವೆಳೆದ ರತಿ-
    ಗೆಳತಿ ಕಮಲೆಯದೆ ರೂಪಛವಿ!)
ದೊರೆತ ಸವಿಸಮಯ ಬರಿದೆ ಹೊಗಳುವುದು
    ಕುರುಡ ಒರೆದ ತೆರ ಹಗಲ ರವಿ. ೪

ನಿದ್ದೆ ಅಲ್ಲಿಯೇ ಮುದ್ದ ಕೊಡಲು ಆ
    ಸುದ್ದಿ ಹೇಳುವುದು ತರವೇನು?
ಬೆಳಗಿನುದಯಕಾ ಚೆಲುವೆ ಅಮೃತವನೆ
    ಸಿಂಚಿಸೆಚ್ಚರವ ತರಲಾಸು,
ತೆರೆಯೆ ಎದೆಯ, ಬಳಿ ಕಂಡೆ ಎನ್ನದೆಯೆ
    ಗುಡಿಲು ಸುರಿವ ಇಬ್ಬನಿ ಜೇನು. ೫

ಏನು ಏನು ಬರಿದಿಗಿಲು! ಮಿದುಳ ಪರಿ
    ಮಂಜು ಹಿಡಿದ ಪರಿ ನಸು ಒದ್ದೆ!
ಇರುಳ ಸ್ವಪ್ನದೊಳು ಬ್ರಹ್ಮಚಾರಿಯಿಹೆ—
    ಎಂಬ ಮಾತನೆಯೆ ಮರೆತಿದ್ದೆ!
ನಿನ್ನೆ ಸಂಜೆಯಲಿ ಕಮಲಮುಖಿಯು ನಸು
    ಇಣುಕಿದುದನೆ ಈಗರಿತಿದ್ದೆ! ೬

—ಚಿದಂಬರ ದೀಕ್ಷಿತ

# ಯಕ್ಷಗಾನದ ಪುನರುಜ್ಜೀವನ

—ಲೇಖಕರು: ಶ್ರೀ. ಕೋಟ ಶಿವರಾಮ ಕಾರಂತರು—

**ಕರ್ನಾಟಕಕ್ಕೆ ವಿಶಿಷ್ಟವಾದ ಯಕ್ಷಗಾನವೊಂದು ಕಸುವುಳ್ಳ ದೇಸಿಕಲೆ. ಅದು ಉಳಿಸಿಕೊಳ್ಳಬೇಕಾದ ಸಂಪತ್ತು. ಆದರೆ ಅಂಥ ಅನುಕರಣೆಯಾಗಲಿ ಮೂಢ ಆಧುನಿಕೀಕರಣವಾಗಲಿ ವ್ಯರ್ಥಪಾಂಡಿತ್ಯ ಪ್ರದರ್ಶನವಾಗಲಿ ಅದನ್ನು ಉಳಿಸಲಾರದು. ಅದರ ಹೃದಯವನ್ನರಿತು ಕೃಷಿಮಾಡುವುದೆ ಉಪಾಯ.**

“ಕರ್ಮವೀರ”ದ ವಿಶೇಷ ಸಂಚಿಕೆಗಾಗಿ ಲೇಖನ ಬರೆಯಿರಿ ಎಂದು ಕೇಳುವಾಗ, ಈ ವಿಷಯದ ಮೇಲೆಯೇ ಲೇಖನ ಬರೆಯುವಂತೆ ಪ್ರೇರಿಸಿದ್ದಾರೆ. ನಾಳಿನ ವಿಚಾರ ಹೇಳುವಾಗಲೆಲ್ಲ ಒಂದು ಪ್ರಶ್ನೆಯನ್ನು ಉತ್ತರಿಸಿದಂತೆಯೇ ಆಗುತ್ತದೆ. ಅನೇಕ ಭವಿಷ್ಯದ್ವಾದಿಗಳ ಮಾತು ನಾಳೆ ಸುಳ್ಳಾಗಬಹುದಾದಂತೆ, ನನ್ನ ಪ್ರತ್ಯುತ್ತರವೂ ಸುಳ್ಳಾಗಬಹುದು. ನಾಳಿನ ವಾದ ಹೂಡುವವರು ಭೂತ ವರ್ತಮಾನ ಕಾಲಗಳ ಸ್ಥಿತಿಯನ್ನು ಕಂಡು, ನಾಳಿನ ಕಲ್ಪನೆ ಕಟ್ಟಬೇಕಾಗುತ್ತದೆ. ಹಿಂದಿನದು ಎಷ್ಟೇ ದೊಡ್ಡದಾದರೂ ಆ ಸಂಪತ್ತು ಇಂದಿನವರ ಕೈಯಲ್ಲಿರುವಾಗ, ಅವರು ತೋರುವ ಆದರ, ಅನಾದರ, ದುಂದುಗಾರಿಕೆ, ತಿರಸ್ಕಾರಗಳನ್ನು ಹೊಂದಿಕೊಂಡು, ಆ ಸಂಪತ್ತು ಹೆಚ್ಚಬಹುದು; ಇದ್ದಂತೆಯೇ ಉಳಿಯಬಹುದು; ಇಲ್ಲವೆ ಅದು ಕಣ್ಮರೆಯಾಗಲೂಬಹುದು. ಇದ್ದ ಸಂಪತ್ತು ಉಳಿಯಬೇಕು, ಹೆಚ್ಚಬೇಕು ಎಂಬುದು ನಮ್ಮೆಲ್ಲರ ಆಸೆಯಾಗಿರಬಹುದು. ನಮ್ಮ ಪ್ರವೃತ್ತಿಗೂ ಈ ಅಭಿಲಾಷೆಗೂ ಸಂಬಂಧವಿಲ್ಲದೆ ಹೋದರೆ, ಪ್ರಯತ್ನ ಪೂರ್ವಕವಾದ ಸಂಕಲನ ಇಲ್ಲದೆ ಹೋದರೆ, ನಮ್ಮ ಆಸೆ ಈಡೇರುವುದುಂಟೇ? ಎಲ್ಲ ಆಸೆಗಳ ವಿಚಾರವೂ ಹೀಗೆಯೇ. ಸಂಸ್ಕೃತಿ ಮತ್ತು ಕಲೆಗಳ ವಿಚಾರಗಳೂ ಈ ನಿಯಮಕ್ಕೆ ಹೊರಗಲ್ಲ.



ಯಕ್ಷಗಾನದ ರಾಜವೇಷ

## ಕನ್ನಡ ಸಂಸ್ಕೃತಿಯ ಮುಖ್ಯ ಅಂಗ

ಯಕ್ಷಗಾನವು ಕರ್ನಾಟಕದ ಸಂಸ್ಕೃತಿಯ ಒಂದು ಮುಖ್ಯ ಅಂಗವಾಗಿ ಬಂದಿದೆ. ಅದು ‘ಜಾನಪದ’ ಸಂಸ್ಕಾರ. ‘ಮಾರ್ಗ’ ಸಂಸ್ಕಾರಕ್ಕಿರುವ ಮನ್ನಣೆ ಅದಕ್ಕಿಲ್ಲ. ನಮ್ಮ ಜಾನಪದ ಕಲೆಗಳೆಲ್ಲ ನಾಡಿಗರ ಕೈಯಲ್ಲಿ, ಅವರ ಜೀವನದ ಅಂಗವಾಗಿ ನೂರಾರು ವರ್ಷಗಳಿಂದ ಉಳಿದು, ಬೆಳೆದು ಬಂದ ಸಂಸ್ಕೃತಿಗಳು. ಅವುಗಳ ಕೃಷಿ ಎಂದಾಯಿತೊ ನಮಗೆ ತಿಳಿಯದು. ಆದರೆ ಸಂಪ್ರದಾಯಪರಂಪರೆ ಅವನ್ನು ನಮಗೆ ಇಂದಿನ ತನಕ ಕಾಯ್ದುಕೊಟ್ಟಿದೆ. ನಮ್ಮ ನಾಡಿನಲ್ಲಿ ಜಾನಪದ ಕಲೆಗಳು ಬಹಳವಾಗಿವೆ. ಅವುಗಳನ್ನು ಪ್ರೀತಿಸುವವರ ಸಂಖ್ಯೆಯೂ ವಿಸ್ತಾರವಾಗಿದೆ. ಆದರೆ ವಿದ್ಯಾವಂತರೆಂದೆನಿಸುವ ಮೇಲಿನ ವರ್ಗದ ಜನಕ್ಕೆ, ಅವು ಬೇಡಾದ ವಸ್ತುಗಳಾಗಿ ಉಳಿದಿವೆ. ‘ದೇಸಿ’ ಎಂಬುದು—ಮೊದಲಿನಿಂದಲೂ—ಪಂಡಿತರ ಆದರವನ್ನು ಪಡೆದ ವಸ್ತುವಲ್ಲ. ‘ಮಾರ್ಗ’ ಪದ್ಧತಿಗಳಿಗೆ ದೊರೆತ ಪ್ರೋತ್ಸಾಹ, ಮನ್ನಣೆ ಅದಕ್ಕೆ ಎಂದೂ ದೊರೆತಿಲ್ಲ. ಅದೂ ಒಂದು ಒಳಿತೇ. ಜನಜೀವನದಲ್ಲಿ ಈ ಕಲೆಗಳು ತಮ್ಮ ಶಕ್ತಿಯಿಂದಲೇ ತಾವು ಉಳಿದು, ಬದುಕಿಕೊಂಡಿರುವುದಕ್ಕೆ ಸಹಾಯವಾಗುತ್ತದೆ. ಕೃತಕ ಆವರಣ, ಪೋಷಣೆ, ಕಲೆ ಸಾಹಿತ್ಯಗಳಿಗೆ ದೊರೆತಾಗ ಅವು ಕೃತಕವಾಗಿಯೆ ಬೆಳೆದುಬಿಡುತ್ತವೆ. ಮುದ್ದು ಮಾಡಿದ ಮಗುವಿನಂತೆ, ಅವು ಹಾದಿ ತಪ್ಪಿ ಹೋಗುವುದೂ ಹೆಚ್ಚು. ಆದರೆ ಪರಿಶೀಲನೆ, ಮನ್ನಣೆ, ಕಾಲಕ್ಕೆ ತಕ್ಕ ಸಂಸ್ಕಾರ—ಒಂದು ಕಲೆಗೆ ದೊರೆಯದೆ ಹೋದರೆ, ಜನಜೀವನದ ನಾಗರಿಕತೆ ಬದಲಾಗುತ್ತ ಬರುವಾಗ, ನೋಟ ಬದಲಿಸುವಾಗ, ಜಾನಪದ ಕಲೆಗಳು ಮೂಲೆಪಾಲಾಗುತ್ತವೆ. ಅವುಗಳ ಸ್ಥಾನದಲ್ಲಿ ಅನ್ಯದೇಶೀಯ ಕಲೆಗಳು ಬಂದು ಸೇರುತ್ತವೆ.

ಯಕ್ಷಗಾನ ಕಲೆಯು ಮೂಲೆಪಾಲಾಗಬೇಕಾದ ವಸ್ತುವಲ್ಲ ಎಂದು ನನಗನಿಸುತ್ತದೆ. ಅದರಲ್ಲಿನ ಕೆಲವೊಂದು ಗುಣಗಳು ಹಿರಿದಾದುವು. ಭಾವನಿರೂಪಣೆಗೆ ಬೇಕಾದಂಥ ಅತ್ಯಮೂಲ್ಯ ಲಕ್ಷಣಗಳುಳ್ಳ ಕಲೆಯದು. ಈ ಲಕ್ಷಣಗಳ ಉಪಯೋಗವನ್ನು ಜನ-ಸಾಂಪ್ರದಾಯಿಕವಾಗಿ ಕಾಯ್ದುಕೊಂಡಿದ್ದರೂ ಅವುಗಳ ಹುಟ್ಟು ಬೆಳವಣಿಗೆಗಳೆರಡೂ ಪ್ರತಿಭಾಸಂಪನ್ನರಿಂದಲೇ ಉಂಟಾದುವು ಎಂದು ನನಗನಿಸುತ್ತದೆ. ಅವನ್ನು ಇಂದು ಬಳಸುವ, ಪ್ರಯೋಗಿಸುವ ಜನಗಳಲ್ಲಿ 'ಅನುಕರಣೆ'ಗಿಂತ ಹೆಚ್ಚಿನ ಶಕ್ತಿ ಕಾಣಿಸದಿದ್ದುದರಿಂದಲೇ ಅದು ಜಡವಾಗುತ್ತ ಬಂದಿದೆ. ಯಕ್ಷಗಾನಕ್ಕಿಂತ ಹೆಚ್ಚಾಗಿ, ಇತರ ಕಲೆಗಳಲ್ಲಿನ ಮೋಹಕ ಗುಣ, ಅಥವಾ ಪಾಂಡಿತ್ಯ, ನಮ್ಮ ಜನಗಳನ್ನು ಎಳೆಯುತ್ತಿರುವುದರಿಂದ, ಯಕ್ಷಗಾನ ಈಗಿರುವಂತೆಯೇ ನಾಳೆಯೂ ಉಳಿಯಲಾರದು ಎಂದೆನಿಸುತ್ತದೆ. ಉಳಿಸಲು ಯೋಗ್ಯನಾದ ಒಂದು ಸಂಪತ್ತು ನಮಗೆ ಇದ್ದೂ ಅದು ನಮ್ಮ ಅನಾದರಕ್ಕೆ ಅಥವಾ ದುರಭಿ-ರುಚಿಗಳಿಗೆ ಗುರಿಯಾಗಿ ಹಾಳಾಗುವುದಾದರೆ, ವ್ಯಥೆಪಡಬೇಕು. ಏಕೆಂದರೆ— ಜನರ ಈ ಮನೋವೃತ್ತಿ, ಇಂದು ಯಕ್ಷಗಾನವನ್ನು ಕೊಲ್ಲಬಹುದಾದಂತೆ, ನಾಳೆ ನಮ್ಮ ಇನ್ನುಳಿದ ಸಾಂಸ್ಕೃತಿಕ ಸಂಪತ್ತುಗಳನ್ನೂ ಕೊಲ್ಲಬಹುದು.

### ಕಲೆಗಳ ಸಮ್ಮಿಲನ

ಯಕ್ಷಗಾನ ಕಲೆ ಕೇವಲ ಗಾನಕಲೆಯೂ ಅಲ್ಲ, ನೃತ್ಯಕಲೆಯೂ ಅಲ್ಲ, ಸಾಹಿತ್ಯವೂ ಅಲ್ಲ, ಬರಿಯ ನಾಟಕವೂ ಅಲ್ಲ. ಇವೆಲ್ಲವುಗಳಿಂದ ಕೂಡಿಕೊಂಡ ಒಂದು ಸಂಯುಕ್ತ ಕಲೆ. 'ಮಾರ್ಗ' ಕಲಾವಿದರು 'ಗಂಧರ್ವಗಾನ', 'ನಾಟ್ಯ', 'ನೃತ್ಯ', 'ನಾಟಕ'ಗಳನ್ನು— ಸಮಾವೇಶಗೊಳಿಸಿ, ಕೃಷಿಮಾಡಿದಂತೆ, ಕನ್ನಡದ ಜನಪದ ಈ ಕಲೆಯನ್ನು ಬೆಳೆಸಿಕೊಂಡಿತು. 'ಗಂಧರ್ವಗಾನ'ಕ್ಕೆ ಪ್ರತಿಯಾಗಿ ಇಲ್ಲಿ 'ಯಕ್ಷಗಾನ' ಕಾಣುತ್ತೇವೆ. 'ನಾಟ್ಯ' ವಲ್ಲದಿದ್ದರೂ ನೃತ್ತದಿಂದಲೂ ನೃತ್ಯದಿಂದಲೂ ಭಾವಪ್ರಕಟನೆಗೆ ಇಲ್ಲಿ ದಾರಿಯಿದೆ. ಗೀತದಲ್ಲಿ ಸಾಹಿತ್ಯದ ಅಂಶವಿದೆ, ಮಾತಿನಲ್ಲೂ ಇದೆ. ನಾಟಕಕ್ಕೆ ಅನುಕೂಲವಾದ ಕಥಾನಕವನ್ನೂ ರಂಗಸಲಕರಣೆಗಳನ್ನೂ ಇಲ್ಲಿ ಕಾಣುತ್ತಲಿದ್ದೇವೆ. ಇವೆಲ್ಲವು— ಭರತ ಮುನಿಯಂತೆ ಇನ್ನೊಬ್ಬ ಮುನಿಯಿಂದ ಬಂದುವೆಂದಾಗಲಿ, ಇಂದ್ರನ ಮುಂದೆ ಯಕ್ಷರು ಹೂಡಿದ ಆಟ ಎಂದಾಗಲಿ ಹೇಳಿ ಪೌರಾಣಿಕ ಕಾಲಕ್ಕೆ ಇದರ ಮೂಲವನ್ನು ಎಳೆದುಕೊಂಡು ಹೋಗುವ ಆಸೆ ನನಗಿಲ್ಲ. ಆ ರೀತಿಯ ಪುರಾಣೇತಿಹಾಸಗಳ ಮಿಶ್ರಣಕ್ಕೆ ನನ್ನ ಮನಸ್ಸು ಸಮ್ಮತಿಸುವುದೇ ಇಲ್ಲ. ಆದರೂ ಸಾಧಾರಣವಾಗಿ ಇದು ಇಂಥ ಕಾಲದಲ್ಲೇ ಹುಟ್ಟಿ ಬೆಳೆಯಿತು ಎಂದು 'ಯಕ್ಷ' 'ಯಕ್ಕಡಿಗರ್' ಎಂಬ ಒಂದೆರಡು ಪದಗಳಿಗೇನೇ ಜೋತು ಬಿದ್ದು, ಸಂಶೋಧನೆ ಮುಂದುವರಿಸುವ ಸಾಹಸವೂ ನನಗಿಲ್ಲ. ಅದರಿಂದಾಗಿ ಯಾವ ಕಲೆಯ ಮೇಲ್ಮೆಯೂ ಹೆಚ್ಚುವಂತಿಲ್ಲ. 'ಪ್ರಾಚೀನತೆ' ಯಿಂದಲೇ ಕಲೆ ಮಾನ್ಯ, ಅಮಾನ್ಯವೆರಡೂ ಆಗುವುದಿಲ್ಲ. ಅದರ ಯೋಗ್ಯತೆ ಅದರಲ್ಲಿರುವ ಭಾವ, ರಸ, ಚಿತ್ರಣಶಕ್ತಿಗಳಿಂದ ಬರ-ಬೇಕಾದದ್ದು.

ನರಸಿಂಹ



### ಸಾಹಿತ್ಯ ಗೌಣ, 'ನಾದತರಂಗತೆ' ಪ್ರಧಾನ

ಯಕ್ಷಗಾನಕಾವ್ಯಗಳನ್ನು ಪರಿಶೀಲಿಸಿದರೆ ಕನ್ನಡ ನಾಡಲ್ಲಿ ಬಳ್ಳಾರಿ, ಬಿಜಾಪುರ, ಕೋಲಾರ, ಉತ್ತರ ದಕ್ಷಿಣ ಕನ್ನಡಗಳಲ್ಲಿ ನೂರಾರು ಯಕ್ಷಗಾನ ಪ್ರಸಂಗಗಳು ದೊರೆಯುತ್ತವೆ. ಈ ನಾಟಕಗಳನ್ನೆಲ್ಲ ಹೆಚ್ಚಾಗಿ 'ಪ್ರಸಂಗ' ಎಂದೇ ಕರೆದಿದ್ದಾರೆ. ಅವುಗಳ ಭಾಷೆ ಎರಡು ಮೂರು ಶತಮಾನಗಳಿಗಿಂತ ಹಿಂದಿನ ಭಾಷೆಯಾಗಿ ಕಾಣಿಸುವುದಿಲ್ಲ. ಅವುಗಳಲ್ಲಿನ ಸಾಹಿತ್ಯಾಂಶವೂ ತೀರ ಸಾಮಾನ್ಯವಾದದ್ದು. ಬಳಕೆಯಲ್ಲಿರುವ ನಮ್ಮ ನಾಡಿನ ಹೆಸರಾದ ಪ್ರಸಂಗಗಳೂ ಗೇರಸೊಪ್ಪೆ ಸಾಂತಪ್ಪಯ್ಯ, ಪಾರ್ತಿ ಸುಬ್ಬರಂಥ ಭಾಗವತರೂ— ಒಂದೆರಡು ಶತಮಾನದ ಈಚೆಗಿನ ಸಾಮಾನ್ಯ ಕವಿಗಳು. ಅವರನ್ನು ರನ್ನ-ಪಂಪರ ಮಟ್ಟಕ್ಕೆ ಮುಟ್ಟಿಸುವ ಸಾಹಸ ನಾನಂತೂ ಮಾಡಲಾರೆ. ಕಾವ್ಯಸಾಹಿತ್ಯ ಬೇರೆ. ಕೃಷಿ ಮಾಡಿದ ಸಾಹಿತ್ಯವಂತೂ ನಮ್ಮಲ್ಲಿ ತುಂಬ ಇದೆ. ಕಾವ್ಯಾಭ್ಯಾಸಿಗಳಾದ ಜನರ ಮುಂದೆ, ಪಾರ್ತಿ ಸುಬ್ಬನಂತಹ ವ್ಯಕ್ತಿಗಳು ರನ್ನ ಪಂಪರ ಮಟ್ಟಕ್ಕೆ ಮುಟ್ಟುತ್ತಾರೆ— ಎಂದರೆ ತೀರ ದೊಡ್ಡ ಮಾತಾಯಿತು. ರನ್ನ, ಕಾಳಿದಾಸರು ಅಥವಾ ಅನ್ಯ ಕವಿಗಳು ಸಾಹಿತ್ಯದ ಮೂಲಕ ಭಾವಪ್ರಕಾಶನಕ್ಕೆ ಹೋದವರು. ಅವರ ಪ್ರತಿಭೆಯೆಲ್ಲವೂ ಭಾಷೆಯ ಮೂಲಕವಾಗಿಯೇ ವ್ಯಕ್ತವಾಯಿತು. ಯಕ್ಷಗಾನ ರಚಿಸಿದ ಹಾಡುಗಬ್ಬದ ಗೀತಕಾರರು ಭಾವಬಿಂಬಕ್ಕೆ, ಭಾವಚಿತ್ರಣಕ್ಕೆ, ರಸವೈಖರಿಗೆ ಮಾನವನ ಉಕ್ಕು, ಉಲ್ಲಾಸ, ಕೋಪತಾಪಗಳ ಪ್ರಕಟನೆಗೆ— ಗೀತವನ್ನು ಮುಖ್ಯ ಸಾಧನವಾಗಿ ಬಳಸಿಕೊಂಡರು. ಭಾಷಾಸಾಹಿತ್ಯವನ್ನು ಬಹುಮಟ್ಟಿಗೆ ನೆಪಕ್ಕಾಗಿ ಉಪಯೋಗಿಸಿಕೊಂಡವರು. ವಿಚಾರಗಳನ್ನು ಸೂಚಿಸುವುದಕ್ಕೆ ಶಬ್ದಸಮುದಾಯ ಅವರಿಗೆ ಬೇಕಿತ್ತು. ಆದರೆ ಭಾವರಸಗಳ ವಿವಿಧ ವೈಖರಿಯನ್ನು ಅವರು ಕಟ್ಟಿ ಪ್ರದರ್ಶಿಸಿದುದು ಕಾವ್ಯಧರ್ಮವನ್ನನುಸರಿಸಿ ಅಲ್ಲ; ಪ್ರಧಾನವಾಗಿ 'ನಾದತರಂಗತೆ' (musical rythm)ಯನ್ನು ಬಳಸಿಕೊಂಡು.

ನಾದತರಂಗತೆಯ ವೈಖರಿಯಿಂದ, ಪ್ರತಿಭೆಯಿಂದ, ಅರ್ಥ-ಪೂರ್ಣತೆಯಿಂದ, ನವರಸಗಳನ್ನು ಹೊರಹೊಮ್ಮಿಸಿದ್ದನ್ನು ನಾನು ಯಕ್ಷಗಾನದಲ್ಲಿ ಕಂಡಷ್ಟು, ನಮ್ಮ ನಾಡಿನ ಇತರ ಜಾನಪದ ಇಲ್ಲವೆ ಮಾರ್ಗಸಂಗೀತಗಳಲ್ಲಿ ಕಂಡಿಲ್ಲ. ಆ ದೃಷ್ಟಿಯಿಂದ ನನಗೆ ಯಕ್ಷಗಾನ ಕೃತಿಕಾರರು ಪ್ರತಿಭಾಸಂಪನ್ನರಾಗಿ ಕಾಣುತ್ತಾರೆ. ಅವರು ಎಷ್ಟೋ ವೇಳೆ "ಚ ಚ ಡ"ಗಳಂಥ ಅರ್ಥದುರ್ಬಲವಾದ ಮಾತುಗಳನ್ನೇ ಬಳಸಿದ್ದರೂ ನಾದತರಂಗವಿಶೇಷದಿಂದ ಹೊಮ್ಮಿಸಿದ ಆ ಶಬ್ದಗಳಲ್ಲಿ, ಭಾವಪೂರ್ಣತೆಯನ್ನು ಕಂಡಿದ್ದೇನೆ. ಯಕ್ಷಗಾನಗೀತವು ಜೀವ ತುಂಬಿಸಿ ಕುಣಿಸಿಲ್ಲದ ಯಾವ ರಸವೂ ಇಲ್ಲ ಎಂದೆನಿಸುತ್ತದೆ ನನಗೆ. ಇಲ್ಲಿ ನನ್ನ ವಿಚಾರಸರಣಿಗೂ ಸಾಂಪ್ರದಾಯಿಕ 'ಮಾರ್ಗ' ಸಂಗೀತಪ್ರಿಯರ ವಿಚಾರಸರಣಿಗೂ ಭೇದ ಬಂದೇಬಂದೀತು. ನಾನು ಸಂಗೀತವನ್ನು ಮನ್ನಿಸುವುದು-ಪಾಂಡಿತ್ಯದ ದೃಷ್ಟಿಯಿಂದಲ್ಲ. ಗೀತ ರಚನೆ ನನಗೆ ಅದರ ರಾಗ, ತಾಳಗಳ ವಿಸ್ತಾರ, ಸಂಖ್ಯೆ, ಹೆಸರುಗಳಿಂದ ಎಂದೂ ಮೋಹಕವಾಗಿಲ್ಲ. ಅವು ಅಪಾರ ಪಾಂಡಿತ್ಯವನ್ನು ತೋರ ಬಹುದು. 'ಪಾಂಡಿತ್ಯ' ಎಂದೂ 'ಕಲೆ'ಯಲ್ಲ. ಭಾವವಿಕಸನವೇ ಕಲೆಯ ಗುರಿ. ಅದು ಒಂದೇನೆ ಕಲೆಗೆ ಪ್ರಮಾಣ. ಯಾವ ದೇಶದ ಸಂಗೀತವೇ ಇರಲಿ, ಅದು ಬೆಳೆಯುತ್ತಿರುವುದು 'ನಾದತರಂಗತೆ'ಯ ಮೇಲೆ. ನಾದತರಂಗತೆಯಲ್ಲಿ ಸ್ವಾಭಾವಿಕವಾದ-ಮೇಳ (unity), ಬೆಳವಣಿಗೆ (growth), ಸಂಚಾರದಲ್ಲಿ ತೂಕ (balance) ಇವುಗಳೆಲ್ಲ ಇಲ್ಲದೆ ಹೋದರೆ, ಗಾನ ಕಿವಿಗೆ ಅಭ್ಯಾಸಬಲದಿಂದ ಇಂಪು ಕೊಟ್ಟರೂ ಭಾವಪೂರ್ಣತೆಯನ್ನುಂಟುಮಾಡಲಾರದು.

## ಹಿಮ್ಮೇಳದ ಇತಿಮಿತಿ

ಯಕ್ಷಗಾನ ಗಾಯಕರು, ನಾಲ್ಕಾರು ರಾಗಗಳಲ್ಲಿ, ಅನ್ಯ ಜಾನಪದ ಗಾಯಕರಂತೆ ಹಾಡಿದವರು. ನಾದತರಂಗತೆ ತಾಲಪ್ರಧಾನವಾದುದ ರಿಂದ, ಅವರ ವಾದನಸೌಕರ್ಯ ಚಂಡೆ ಮದ್ದಲೆಗಳ ಸಹಾಯದಿಂದ ಬೆಳೆದಿದೆ. ಆದರೆ ಈ ವಾದ್ಯಗಳನ್ನು ಬಹಿರಂಗ ವಾದ್ಯಗಳಾಗಿ ಬಯಲಲ್ಲಿ ಉಪಯೋಗಿಸುತ್ತಿದ್ದುದರಿಂದಲೋ ಏನೋ— ರೌದ್ರ, ಬೀಭತ್ಸ, ರೋಮಾಂಚಕಾರಕ ಗುಣಗಳಿಗೆ ಅವು ಪಳಗಿದಷ್ಟು ಉಳಿದ ರಸಗಳಿಗೆ ಪಳಗಿಲ್ಲ; ಆದರೆ ಪಳಗಲಾರದ್ದಲ್ಲ. ಶೃಂಗಾರಕ್ಕೆ, ದುಃಖಕ್ಕೆ—ಇವು ಬಂದಾವೆ? ಎಂದು ನನಗೆ ಅನಿಸಿದ ಕಾಲವೊಂದಿತ್ತು. ಒಮ್ಮೆ ಶ್ರೀ. ಕೆಮ್ಮಂಜೆ ನಾರಾಣಪ್ಪ ಎಂಬವರು ಚಂಡೆಯಂಥ ಕಟುವಾದ್ಯ ಬಾರಿಸಿದ್ದನ್ನು ಕೇಳಿದೆ. ಲಲಿತದಲ್ಲೂ ಶೋಕದಲ್ಲೂ ಆ ವಾದ್ಯ ಅವರ ಕೈಯಲ್ಲಿ ಅನುಗುಣವಾದ ಧ್ವನಿ ಹುಟ್ಟಿಸಿದ್ದನ್ನು ಕೇಳಿದ ಮೇಲೆ, ನನ್ನ ಅಭಿಪ್ರಾಯ ಬದಲಿಸಬೇಕಾಯಿತು. ಯಕ್ಷಗಾನ ಪ್ರಸಂಗಗಳಲ್ಲಿ, ರುದ್ರರಸಗಳೇ ಕಾಳಗಕ್ಕೆ ಅನುಕೂಲಗಳಾದುದರಿಂದ (ಯಕ್ಷಪ್ರಸಂಗದ ಕಥಾನಕಗಳು ಕಾಳಗದಲ್ಲಿ ಉನ್ನತಿ ಪಡೆಯುವುವು) ಇತರ ರಸಗಳನ್ನು ಅದುಮಿ, ಅವೇ ಬಲವಾಗಿ ಬೆಳೆದುವು. ಹೀಗಾಗಿ ಬಹು ಮಟ್ಟಿನ ಜನ, ಮೃದಂಗ ಚಂಡೆಗಳನ್ನು ಶೋಕ, ಕರುಣ, ಲಲಿತ ವಿಚಾರಗಳಿಗೆ ಸಮನಾಗಿ ತಿದ್ದಿಕೊಳ್ಳಲಾರದೆ ಹೋದರು. ಇದಕ್ಕೆ ಜನರ ಅಸಂಸ್ಕೃತಿಯೇ ಕಾರಣ.

## ಅಭಿವ್ಯಕ್ತಿಯ ರೀತಿ

ಅಭಿನಯದ ಭಾಗ ಯಕ್ಷಗಾನದಲ್ಲಿ ಬಹು ಕಡಿಮೆ. ರಸಾವೇಶ ಗಳನ್ನು ನೃತ್ಯ, ಗೀತ, ಮಾರ್ಗಗಳಿಂದ ತೋರಿಸುವಾಗ ಅಭಿನಯ ವಿಶೇಷವಾಗಿ ಬೆಳೆಯಲಾರದು. ಕೀರ ಸ್ವಲ್ಪ ಕಡೆಗಳಲ್ಲಿ ಅಭಿನಯ,



ಚಂಡಿ

ಮುದ್ರೆಗಳನ್ನು ತೋರಿಸುತ್ತಾರೆಂಬುದು ನಿಜವಾದರೂ ಕೇರಳದ ಕಥಕ್ಕಳಿಗೂ ಯಕ್ಷಗಾನಕ್ಕೂ ಈ ಭಾಗದಲ್ಲಿ ಸಂಬಂಧ ಕಾಣುವುದಿಲ್ಲ. ಅದು ಕೇವಲ ಅಭಿನಯ, ಹಾವ, ಪ್ರಧಾನವಾದುದು. ಭರತ ನಾಟ್ಯದ ಅನುಕರಣೆಯಲ್ಲಿ ಬೆಳೆದು, ಸಾಹಿತ್ಯವನ್ನು ಅನುವಾದಿಸಹೋದದ್ದು. ಯಕ್ಷಗಾನಸಾಹಿತ್ಯ ಶಬ್ದಾರ್ಥವನ್ನು ಹಾವಗಳಿಂದ ಸೂಚಿಸುವ ಪ್ರಯತ್ನ ಮಾಡಲಿಲ್ಲ. ಹಾಗೆ ಅದು ಮಾಡದಿದ್ದುದೇ ಒಳಿತಾಯಿತು. ಭಾವಪ್ರದರ್ಶನಗಳನ್ನು ನೃತ್ಯ, ನಾದತರಂಗಗಳ ಮೂಲಕ ಪ್ರಕಟಿಸಿ ಅದು ತನ್ನ ಕೆಲಸ ಮಾಡಿಕೊಂಡಿದೆ.

ಈಗ, ಯಕ್ಷಗೀತದಂತೆ ಪ್ರಾಮುಖ್ಯವಾದ, ನೃತ್ಯದ ವಿಚಾರ ಮಾಡೋಣ. ಈ ನೃತ್ಯ ತರಂಗತೆಯ ಮೇಲೆ ಹೊಂದಿದ ನೃತ್ಯ. ಅಭ್ಯಾಸಕ್ಕೆ— ಬಾಲಗೋ ಸೋ, ಸ್ತ್ರೀವೇಷಗಳೋ, ಕೋಡಂಗಿ ಗಳೋ— ಪ್ರಸಂಗಾರ ಸಾ ಬಂದು, ಭರತನಾಟ್ಯಕಾರರು 'ತಿಲ್ಲಾಣ' 'ಅಲರಿಪು' ಾರಿತು, ತೋರಿಸುವಂತೆ, ಪದಗತಿಗಳ ಚಮತ್ಕಾರವನ್ನು ಸ್ವತಂ ುಲ್ಲಿ ತಿವಿದು ಧಿದರೂ ಕಥಾನಕ ತೊಡಗಿದ ಮೇಲೆ ಹೀಗಾಗುವುದಿ ಸಾರಿತು; ಭಾಗವತನ ಗೀತಪ್ರಬಂಧ (musical com ಲೆಗೆ ಭಸ್ಮಾಸುರ ಹೊಂದಿಕೊಂಡು, ಕುಣಿತ ನಡೆಯುವುದರಿಂದ ರಕೆಯೆರೆದಿತ್ತು; ಂಗಬದ್ಧವಾಗಿದೆ, ಭಾವ ಪ್ರಕಟನೆಗೆ ಅನುಕ ಳದವ, ನಾದಪ್ರಬಂಧವನ್ನು ಮುರಿದು, ತನ್ನ ಹೇಳ ಹಣೆಗಣ್ಣು ವೇಷಧಾರಿಗಳನ್ನು ಹೆಚ್ಚಾಗಿ ಕುಣಿಸುವುದಿಲ್ಲ. ಆದುದರಿಂದ, ಕುಣಿತ ತನ್ನ ಗತಿ, ತಾಲ, ರಂಗ ಚಲನಗಳಿಂದ ವಿವಿಧ ಭಾವಗಳಿಗೆ ಸಹಾಯಕವಾಗಿ ಬೆಳೆಯುತ್ತ ವೆ.

ಸಾಮಾನ್ಯವಾಗಿ ಹಿಮ್ಮೇಳದ ಚರ್ಮವಾದ್ಯಗಳನ್ನು ಕಟು ವಾಗಿಯೇ ಬಾರಿಸುವುದರಿಂದ, ಕರುಣ, ಶೃಂಗಾರದಂತಹ ರಸಗಳ ಬೆಳವಣಿಗೆಯು ಯಕ್ಷಗಾನದಲ್ಲಿ ನಮಗೆ ಅಷ್ಟೊಂದು ಚೆನ್ನಾಗಿ ಕಾಣುತ್ತಲಿಲ್ಲ. ಉದ್ವೇಗ, ರೌದ್ರ, ಕೋಪಗಳೇ ಚೆನ್ನಾಗಿ ಬೆಳೆದು ಬಂದ ಅಂಗಗಳಾಗಿ ಕಾಣುತ್ತವೆ.

ಯಕ್ಷಸಾಹಿತ್ಯವು ತೀರ ಪ್ರಾಚೀನ ಪರಂಪರೆಯದಲ್ಲವಾದರೂ ಗೀತಸಂಪ್ರದಾಯದಲ್ಲಿ ಕಾಣತಕ್ಕ ನೂರಾರು ಬಗೆಯ ಪ್ರಬಂಧಗಳು (compositions) ಒಂದೆರಡು ದಿನದ ಬೆಳವಣಿಗೆಯವುಗಳಲ್ಲ. ಬಹು ಹಿಂದಿನ ಸಂಸ್ಕಾರದ ಮೇಲೆಯೇ ಅವನ್ನು ಕಟ್ಟಿರಬೇಕು. ಬರಿಯ 'ತರನನನ' ಹಾಡಿಯೇ ಅವು ಬೆಳೆದು ಬಂದಿದ್ದರೂ ಕೆಲವು ಶತಮಾನಗಳ ಪುಷ್ಟಿಯೇ ಅವುಗಳಲ್ಲಿ ಕಾಣುತ್ತದೆ. ಅವುಗಳ ಲ್ಲಿನ ಈ ಶಕ್ತಿಗಳಿಂದ- ನೃತ್ಯದಲ್ಲಿನ ಶಕ್ತಿಗಳು ಯಾವ ಬಗೆಯ ಭಾವ ಚಿತ್ರಣಕ್ಕೂ ಸಹಾಯವಾಗಿರುವುದರಿಂದ— ಈ ಕಲೆ ದೊಡ್ಡದು— ಉಳಿಸಿಕೊಳ್ಳಬೇಕಾದದ್ದು, ಬೆಳೆಯುವ ಅವಕಾಶವುಳ್ಳದ್ದು— ಎಂದು ನನಗನಿಸುತ್ತದೆ.

**ವೇಷಭೂಷೆಯ ಪ್ರಭೇದಗಳು**

ಯಕ್ಷಗಾನದಲ್ಲಿ ಬಳಸುವ ವೇಷಭೂಷಣಗಳು ಕರ್ನಾಟಕದ ಒಂದೊಂದು ಕಡೆ ಒಂದೊಂದು ತೆರನಾಗಿವೆ. ಕರ್ನಾಟಕದ ಕೆಲವು ಕಡೆಗಳಲ್ಲಿ— ಸುತ್ತಮುತ್ತಲಿನ ದೇವಾಲಯ ಶಿಲ್ಪಗಳಲ್ಲಿ ಕಾಣುವ, ನಾಟಕಗಳಲ್ಲಿ ಕಾಣುವ, ಗೊಂಬೆಗಳ ವರ್ಚಸ್ಸು ಕಾಣುತ್ತದೆ ನಿಜ. ಆದರೆ ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಈ ವರ್ಚಸ್ಸು ಕಾಣಿ-ಸುತ್ತಲಿಲ್ಲ. ಇಲ್ಲಿಯ ಉಡುಗೆ, ಅಲಂಕಾರಗಳು, ಮುಖವರ್ಣಿಕೆಗಳು ಕೇರಳದಿಂದ ಎಷ್ಟೋ ಭಿನ್ನವಾಗಿಯೂ ಇವೆ. ಅವು ಕೋಲಾರ (ಕಾಸರಗೋಡುಪ್ರಾಂತ್ಯದಲ್ಲಿ ಅದು ಕೇರಳವನ್ನು ಅನುಕರಿಸುತ್ತದೆ.) ಚಿತ್ರದುರ್ಗ ಪ್ರಾಂತ್ಯಗಳ ಉಡುಗೆಗಳಿಗಿಂತ ಭಿನ್ನವಾಗಿವೆ. ಅಲ್ಲದೆ, ನಾಡಿನ ಹಿಂದಿನ ಚಿತ್ರಶಿಲ್ಪಕಲೆಗಳಲ್ಲಿ ಕಾಣಿಸುವ ವೇಷಭೂಷಣ, ಅಲಂಕಾರಗಳಿಗಿಂತಲೂ ಭಿನ್ನವೂ ಸ್ವತಂತ್ರವೂ ಆಗಿವೆ. ಅವು ತಮ್ಮ ಚೆಲುವಿನಲ್ಲಿ, ಪುಷ್ಟಿಯಲ್ಲಿ, ಜಾವಾ, ಬಲಿ ದೇಶದವರು ಬಳಸುವ ಮುಖವಾಡ, ಉಡುಗೆಗಳಷ್ಟೇ ಸುಂದರವಾಗಿವೆ. ನಾಡಿನ ಒಂದು ಮೂಲೆಯಲ್ಲಿ, ಆಚೀಚಿನ ಅಥವಾ ಹಿಂದಿನ ಸಂಪರ್ಕವಿಲ್ಲದೆ, ಈ ಬಗೆಯ ಉಡುಗೆಗಳು ಹೇಗೆ ಬೆಳೆದಿರಬಹುದು—ಎಂಬುದೇ ಸೋಜಿ-ಗದ ವಿಷಯ. ಬೇಲೂರಿನ ಶಿಲ್ಪವೂ ಈ ಪ್ರೇರಣೆಯನ್ನು ಯಕ್ಷ ಭೂಷಣಗಳಿಗೆ ಕೊಟ್ಟಿಲ್ಲ. ಇತ್ತೀಚೆಗೆ ನಾನು ಕಂಡ ಒಂದೆರಡು ನಾಗಕುಲದವರ ಉಡುಗೆಗಳ ಚಿತ್ರಕ್ಕೂ ಇದಕ್ಕೂ ಹೆಚ್ಚಿನ ಸಾಮ್ಯ ಕಾಣುತ್ತದೆ. ನಮ್ಮ ಅವರ ಸಂಪರ್ಕ, ಇತ್ತೋ ಇಲ್ಲವೋ! ಅಂತೂ ಯಕ್ಷಗಾನದ ವೇಷ, ಅಲಂಕಾರಗಳು ಕಲಾಸಂಪನ್ನರ ಕೃತಿಗಳು. ವಿದೇಶೀಯರೂ ಅವನ್ನು ಬಹಳವಾಗಿ ಮೆಚ್ಚಿದ್ದಾರೆ. ಅವು ಉಳಿಸಿ ಕೊಳ್ಳಲು ಯೋಗ್ಯವಾದವುಗಳು. ಅವು ತುಂಬ ಪ್ರಾಚೀನವಾದವೂ ಇರಬೇಕು. ಆದರೆ ಇಂದು ಅವುಗಳ ಮೇಲಿನ ಮೋಹ ಅಸಂಸ್ಕೃತ ಜನಗಳಲ್ಲಿ ತಪ್ಪುತ್ತಿದೆ. ನಮ್ಮ ಜನಗಳ ಸೌಂದರ್ಯದೃಷ್ಟಿ ಬದಲಾ-ಗಿದೆಯೋ ಏನೋ! ಯಕ್ಷಗಾನದ ಸ್ತ್ರೀವೇಷಗಳು ಉಳಿದ ವೇಷ ಗಳಿಗೆ ಹೊಂದುವಂತೆಯೇ ಇಲ್ಲ. ಆ ವೇಷಗಳ ಉಡುಗೆ ಬೀದಿಯ ಬಸವೆಯರ ಉಡುಗೆಯಂತಿದೆ. ಯಕ್ಷಗಾನದಲ್ಲಿ ನಾಟಕ ಸಿನೆಮ ಗಳ ವೇಷಗಳನ್ನು ಅನುಸರಿಸುವ ಚಾಳಿಯೂ ಈಗೀಗ ಬರುತ್ತಿದೆ. ಹೀಗಾಗಿ, ಒಂದು ವೇಷಕ್ಕೂ ಅದೇ ಸನ್ನಿವೇಶದಲ್ಲಿ ಬರುವ ಇನ್ನೊಂದು ವೇಷಕ್ಕೂ ಹೊಂದಿಕೆಯಿಲ್ಲದ್ದಾಗಿ ಆಭಾಸವುಂಟಾಗುತ್ತಿದೆ.

ರಾವಣನ ಮುಖವರ್ಣಿಕೆ



**ಉಳಿಸಿಕೊಳ್ಳಬೇಕಾದ ಕಲೆ**

ಇಷ್ಟೆಲ್ಲ ಹೇಳಿದ್ದು, ಈಗ ಪ್ರಚಾರದಲ್ಲಿರುವ ಬಯಲಾಟಗಳ ಯೋಗ್ಯತೆಯನ್ನು ಕುರಿತಾದ ಮಾತು. ಅದರ ಗುಣದೋಷಗಳ ವಿಮರ್ಶೆ, ಅದರ ಪುನರುಜ್ಜೀವನ ಎಂತು? ಎಂದು ಪ್ರಶ್ನೆಮಾಡಿದರೆ, ಅದು ನಮ್ಮ ಮೇಲೆಯೇ ಹೊಂದಿಕೊಂಡಿದೆ ಎನ್ನಬೇಕು. ಕಲೆ ಉಳಿಯುವುದು ಅನುಕರಣೆಯಿಂದಲ್ಲ; ಬೆಳೆಯುವುದೂ ಅನುಕರಣೆ ಯಿಂದಲ್ಲ. ಸಾಂಪ್ರದಾಯಿಕವಾದ ಕಲೆಯ ಮುಖ್ಯ ಅಂಗಗಳನ್ನು, ಸೌಂದರ್ಯಶಾಸ್ತ್ರದ ದೃಷ್ಟಿಯಿಂದ ಪರಿಶೀಲಿಸಿ, ಯಾವುದು ಕಾಲಕ್ಕೆ ತಕ್ಕುದು ಎಂದು ಆರಿಸಿ, ಬೆಳೆಯಿಸುವುದರಿಂದ ಒಂದು ಕಲೆ ಬೆಳೆಯಬೇಕಾದರೆ ನಮ್ಮ ಭಾವರಸಗಳಿಗೆ, ಅದು ಒಂದು ಸಾಧನ ವಾಗಿ ಉಪಯೋಗಿಸಲ್ಪಡಬೇಕು. ಆ ಸಾಧನದ ಮೂಲಕ ಕನಸು ಕಾಣುವ ಕಲಾವಿದರು ಇರಬೇಕು. ಕಲೆ ಶಾಸ್ತ್ರವಲ್ಲ, ಕಲಿಸಿ ಬರುವ ವಸ್ತುವಲ್ಲ, ವ್ಯಕ್ತಿಯಲ್ಲಿ ತುಂಬಿರುವ ಭಾವಪ್ರಕಾಶನದ ಉತ್ಕಟ ಅಪೇಕ್ಷೆಯಿಂದ ಅದು ಬೆಳೆಯಬೇಕು, ಉಳಿಯಬೇಕು. ಆ ಅಪೇಕ್ಷೆ ಯಿಲ್ಲದ ವ್ಯಕ್ತಿಗಳಿಂದ, ಕಲೆಯ ಪುನರುಜ್ಜೀವನವಾಗಲಾರದು. ಎಷ್ಟೋ ಕಲೆಗಳು ವಾಸ್ತವಿಕ ವಿಚಾರಗಳ ಚಿತ್ರಣಗಳಿಗೆ ಒಪ್ಪುತ್ತವೆ. ಅದನ್ನು 'realism' ಅನ್ನುತ್ತೇವೆ. ಕಲಾಸಾಧನದ ಹೊರಗಿನ ರೂಪ, ನಿತ್ಯಜೀವನದಲ್ಲಿ ಕಾಣುವಂತೆಯೇ ಇರಬೇಕಾದಲ್ಲಿ ಯಕ್ಷ-ಗಾನಕಲೆ ಅದಕ್ಕೆ ನೆರವಾಗಲಾರದು. ಅದು ಒಂದು ಬಗೆಯ ವಾಸ್ತವಿಕವಲ್ಲದ ಚಿತ್ರಣ ಸಾಧನ. ಸಾಧನದ ಹೊರಗಿನ ರೂಪ ನಿತ್ಯ ಜೀವನದ ಅನುಕರಣೆಯನ್ನು ಮಾಡದೆ ಹೋದಮಾತ್ರಕ್ಕೆ, ಕಲೆಗೆ ತಕ್ಕುದಲ್ಲ ಎಂದಾಗಲಾರದು. ಕಲೆ ತಾದ್ರೂಪಿಕತೆಯನ್ನು ನೆಚ್ಚಿ ಕೊಂಡ ಸಾಧನವಲ್ಲ. ಅದಕ್ಕೆ ಬರುವ 'ಪ್ರೇರಣೆ' ಸತ್ಯವಾಗಿದ್ದರೆ

ಸಾಕು. ಮಾನವನನ್ನು ಕೆರಳಿಸುವ ವಿಷಯ, ವಸ್ತುಗಳು, ಸನ್ನಿವೇಶಗಳು ನಿಜವಾಗಿದ್ದರೆ ಸಾಕು. ಯಾವುದೇ ಬಗೆಯ ಅನುಕೂಲ ಸಾಧನದಿಂದ, ಕಲೆ ತನ್ನ ಕೆಲಸ ಮಾಡಬಲ್ಲುದು. 'ಪಂಚತಂತ್ರ'ದ ಕತೆ ತಾದ್ರೂಪಿಕ ಸತ್ಯವೇ ? ಸಾವಿತ್ರೀಸತ್ಯವಾನರ ಕತೆ ತಾದ್ರೂಪಿಕ ಸತ್ಯವೇ? ಹಾಗೆಂದು ಇತಿಹಾಸ ಬಲ್ಲವ ಹೇಳಲಾರ. ಆದರೆ ಜೀವನವನ್ನು ಕುಣಿಸುವ ಕೌಟಿಲ್ಯ, ಸಾಮ, ದಾನ, ಭೇದ, ದಂಡ, ನೀತಿಗಳು ಸತ್ಯವಾದುವು. ಪ್ರಣಯಿ ಪ್ರಣಯಿನಿಯರ ಗೆಳೆತನವನ್ನು ಸಾವಿಗೂ ಮೀರಿ, ಸಾವನ್ನು ತಡೆದು, ಕಾಯ್ದುಕೊಳ್ಳಬೇಕೆಂಬ ಮಾನವರ ಹಂಬಲ ಸತ್ಯವಾದುದು. ಆದುದರಿಂದ ಯಕ್ಷಗಾನ ಪ್ರಸಂಗಗಳು, ಹಿಂದಿನ ಭಾರತ ರಾಮಾಯಣಗಳನ್ನು, ಪುರಾಣಗಳಲ್ಲಿನ ಕಥಾನಕಗಳನ್ನು ಹೇಳಿದಷ್ಟೇ ಚೆನ್ನಾಗಿ, ಇಂದು ನಾಳಿನ ಕತೆಗಳನ್ನು ಹೇಳುವ ಶಕ್ತಿಯುಳ್ಳವು. ಆದರೆ ನಾಡಿನ ಗಾಯಕರು, ನರ್ತಕರು, ನಾಟ್ಯಕಲಾವಿದರು, ರಂಗನಿರ್ದೇಶಕರು ಕಲಾಪ್ರೇರಣೆಗೂ ಕಲಾಸಾಧನಕ್ಕೂ ಇರುವ ನಿಕಟ ಸಂಬಂಧವನ್ನು ಕುರಿತು ತಿಳಿದುಕೊಂಡರೆ, ಈ ಕಲೆ ನಾಡಿಗೆ ಕೀರ್ತಿ ತರುವ ಕಲೆಯಾಗಿ ಉಳಿದೀತು. ಕನ್ನಡಿಗರು ಹಿಗ್ಗುವಂತಾದೀತು. ಬದಲು ಬರಿಯ ಶಾಸ್ತ್ರಕ್ಕೋ, ಪಾಂಡಿತ್ಯಕ್ಕೋ, ನಾವೀನ್ಯಕ್ಕೋ ಜೋತುಬಿದ್ದರೆ ಒಂದಲ್ಲ ಒಂದು ದಿನ, ಊರಲ್ಲಿ ಈಗಿನಂಥ ವಿದ್ಯಾವಂತರ ಸಂಖ್ಯೆ ಬೆಳೆದಂತೆ, ಯಕ್ಷಗಾನ ಕಲೆಗೆ ದೊರೆಯುವ ಪ್ರೋತ್ಸಾಹ ಕುಂದಿ, ಇದು ಹೆಸರಡಗಿ ಹೋದೀತು.

---

# ಎಚ್ಚರಿಕೆ

೧

ಅಣೋರಣೀಯಾನ್ ಮಹತೋ ಮಹೀಯಾನ್ !
ಅಣುವಿನಷ್ಟು ಬಿತ್ತ ಪಾಪ
ಬೆಳಸಬಹುದು ಮಹಾ ಶಾಪ.
ಹಿರೋಷಿಮ, ನಾಗಾಸಾಕಿ;
ಇಲ್ಲಿ ಆ್ಯಟಂ ಬಾಂಬು ಹಾಕಿ:
ತೊಟ್ಟಿಲಲ್ಲಿ ಸತ್ತ ಮಗು
ಬಾಡಲಿಲ್ಲ ನಕ್ಕ ನಗು;
ಲಾಲಿ ಹಾಡುತಿದ್ದ ಬಾಯಿ
ತೆರೆದು ಸತ್ತು ಬಿದ್ದ ತಾಯಿ;
ಹೂಮಾಲೆಯ ಮುಗ್ಧ ವಧು
ಕುಡಿಯಲಿಲ್ಲ ಪ್ರಣಯ ಮಧು;
ಲಕ್ಷ ಜೀವ ಸುಟ್ಟ ಪಾಪ
ಹೊಯ್ಯುತಿತ್ತು ನೆಲದ ಶಾಪ;
ಮೇಲಕೆದ್ದ ಹೆಣದ ಧೂಪ
ಕೂಗಿ ಕೂಗಿ ಹೇಳುತಿತ್ತು:
ವಿಜ್ಞಾನದ ಭಸ್ಮಾಸುರ,
ನಿನಗಿದು ಕೊನೆಯೆಚ್ಚರಿಕೆ !
ತಲೆಯೊಳಿದ್ದ ಸುಡುವ ಹರಕೆ
ನಿನ್ನ ತಲೆಗೆ ಸಂದೀತು !
ನಿನ್ನ ಹರಕೆ ನಿನ್ನ ತಲೆಗೆ
ಮತ್ತೆ ಮರಳಿ ಬಂದೀತು.
ಜೋಕೆಯಿದೊ ! ಎಚ್ಚರಿಕೆ !
ಸೃಷ್ಟಿ ಕನಲಿ ಕೇಳುತಿತ್ತು.

೨

ರಣಭೈರವ ಹಕ್ಕಿಯೀಸಿ
ಹಾರಿ ಬರಲು ರೆಕ್ಕೆ ಬೀಸಿ
ಸೀಳಿ ಬರಲು ಬಾನ ಮೌನ—
ಸಿಳ್ಳು ಹೊಡೆಯುವೀ ವಿಮಾನ—
ಕೆಳಗೆ ನೆಲದ ತಾಯ ತೊಡೆಯ
ಮೇಲೆ ಮಲಗಿದೂರಿನೆಡೆಯ
ಕಂಡ ಕಣ್ಣು ಯಮನ ಕಣ್ಣು—
ಕೈ ತೆರೆಯಿತು ಸಿಡಿಲ ಹಣ್ಣು—
ನೆಲದ ಹಾಲು ಕುಡಿದು ಜೀವ
ಮುಗಿಲನೇರಿ ನೆಲದ ಸಾವ
ಬಿತ್ತುತಿತ್ತು ಬೆಳೆಯುತಿತ್ತು,
ಸುಡುವ ಸಿಡಿಲು ಹೊಳೆಯುತಿತ್ತು,
ಯಮನ ದಂಡವಳೆಯುತಿತ್ತು;
ನೆಲದ ನೂರು ಯೋಜನ
ಜನಪದಗಳೆ ನಿರ್ಜನ;
ಸಾವು ಸುತ್ತಿ ಸುಳಿಯುತಿತ್ತು;
ಕೇಳುತಿತ್ತು ಜೀವಸಪ್ಪಿ,
ಕನುರಿದವರ ಕಸಿವಿಸಿ;
ಹೊಗೆಯ ಮೋಡವಾಗಿ ಕವಿದು
ಮುಗಿಲಿನ ಬಳಿ ಸಾರಿತು,
ಕಳವಳ ವಿಷ ಕಾರಿತು,
ಕೊಂದವರೆದೆಯಲ್ಲಿ ತಿವಿದು
ನೆಲದ ಶಾಪ ಸಾರಿತು;
ನೆಲದ ತಲೆಗೆ ಭಸ್ಮಾಸುರ
ಹಸ್ತ ಹರಕೆಯೆರೆದಿತ್ತು;
ವಿಜ್ಞಾನ ಶಿವನ ಹಣೆಗಣ್ಣು ತೆರೆದಿತ್ತು !

ಎಸ್. ಆರ್. ಎಕ್ಕುಂಡಿ

ಚಿಕ್ಕ ಕತೆ

# ಇಟಲಿಯ ಸೈನಿಕ

ಶ್ರೀ. ಎಂ. ಗೋಪಾಲಕೃಷ್ಣ ಅಡಿಗ, ಬಿ. ಎ. (ಆನರ್ಸ್)

**ಜಾಲಹಳ್ಳಿಯ ನೆರೆಹೊರೆಯಲ್ಲಿ ಇಟಲಿಯ ಯುದ್ಧಬಂದಿಗಳು ನಡೆಸಿದ ಅತ್ಯಾಚಾರಗಳಿಂದ ನೆತ್ತರು ಕುದಿದು ಒಬ್ಬ ತರುಣ ಇಡಿ ಶ್ವೇತವರ್ಣದ ಜನಾಂಗಕ್ಕೇ ಹೆಸರಿಟ್ಟ. ಅದರೆ ಪೋಲೀಸರ ಕಾವಲಿನಲ್ಲಿ ಇಟಲಿಯ ಆ 'ಪಿಶಾಚ'ಗಳಲ್ಲೊಬ್ಬ ಅವನ ಕಣ್ಣೆದುರಲ್ಲಿ ನಡೆದುಕೊಂಡ ರೀತಿಯಿಂದ ಅವನ ಕಲ್ಪನೆಯೆಲ್ಲ ತಲೆಕೆಳಗಾಯಿತು.**

"ದುಷ್ಟರು, ಪಾಪಿಗಳು, ಎರಡು ಕಾಲಿನ ಪಶುಗಳು, ಶುದ್ಧ ಮೃಗಗಳು!" ಎಂದು ಕಾಫಿ ಲೋಟವನ್ನು ಮೇಲಕ್ಕೆತ್ತಿ ತುಟಿಗೆ ತಾಗಿಸಿ ತತ್‌ಕ್ಷಣವೇ ಕೆಳಕ್ಕಿಟ್ಟು ಗೊಣಗಿದ ನಮ್ಮ ರಾಮರಾಯ. ರಾಮರಾಯ ಬಯ್ಯುವುದರಲ್ಲಿ ನಿಸ್ಸೀಮ ಎಂದು ನನಗೆ ಗೊತ್ತು. ಆತನ ನಾಲಗೆಯೆಂದರೆ ಸಾಣೆಗಿಟ್ಟ ಹದವಾದ ಚೂಪಾದ ಆಯುಧ. ಅದನ್ನು ಅವನು ಆಡಿಸತೊಡಗಿದರೆ ಅಕ್ಕಪಕ್ಕದಲ್ಲಿರುವ ವಿರೋಧಿಯ — ಕೆಲವೊಮ್ಮೆ ಗೆಳೆಯನದು ಕೂಡ — ತಲೆಯೋ ಕೈಯೋ ಮೂಗೋ ಕತ್ತರಿಸಿ ಬೀಳುತ್ತಿದ್ದುದರಲ್ಲಿ ಸಂದೇಹವಿಲ್ಲ. "ಆ ನಾಲಗೆಯಿಂದ ನಾಲ್ಕು ಗಜವಾದರೂ ದೂರವಿರಬೇಕಯ್ಯ!" ಎಂದು ನಾನು ಲೋಕೋಪಕಾರ ದೃಷ್ಟಿಯಿಂದ ಎಲ್ಲರಿಗೂ ಸಲಹೆ ಕೊಡುತ್ತಿದ್ದೆ. ಆದರೆ ಆ ಪಂಚಪಂಚ ಉಷಃಕಾಲದ ಕಾಫಿ ಮುಹೂರ್ತದಲ್ಲಿ ಅವನ ನಾಲಗೆ ಹೀಗೆ ಚುರುಕಾದುದು ಹೇಗೆ ಎಂದು ನನಗೆ ಹೊಳೆಯದಾಯಿತು. ಎದ್ದು ಮುಖ ತೊಳೆದ ಮೇಲೆ ಕಾಫಿ ಕುಡಿದ ಹೊರತೂ ಮಾತಾಡುವುದಕ್ಕಿರಲಿ, ಬಯ್ಯುವುದಕ್ಕೂ ಉತ್ಸಾಹ ಬಾರದ ಜಾತಿಗೆ ಸೇರಿದವರು ನಾವು! — ಹೀಗಿರುವಾಗ?

ಗಜಾನನಭವನದ ಒಂದು ಮೂಲೆಯ ಮೇಜಿನ ಮುಂದೆ ನಾವು ಚಾತಕಪಕ್ಷಿಗಳಂತೆ ಕುಳಿತಿದ್ದೆವು. ಅದೇ ನಮ್ಮ ಮಾಮೂಲು ಸ್ಥಳ. ಕಾಫಿಯ ವಿಚಾರದಲ್ಲಿ ನಮ್ಮ ಅಭಿರುಚಿ ಬಹಳ ಮೇಲ್ಮಟ್ಟದ್ದಾಗಿದ್ದರೂ ಯುದ್ಧ ಬಂದ ಮೇಲೆ ನಾವು ಅದನ್ನು ಅಮೃತದ ಮಟ್ಟದಿಂದ ಚರಂಡಿ ನೀರಿನ ಮಟ್ಟಕ್ಕೆ ಇಳಿಸಬೇಕಾಗಿ ಬಂದಿತ್ತು— ಆಪದ್ಧರ್ಮವಾಗಿ. ಹೀಗಿರುವಾಗ ರಾಮರಾಯ ಆ ರೀತಿಯಲ್ಲಿ ಮಾಣಿಯನ್ನು ಶಪಿಸಿ ಬದುಕುವುದು ಸಾಧ್ಯವಿರಲಿಲ್ಲ. "ನಮ್ಮಲ್ಲಿ ದೊರೆಯುವ ಕಾಫಿ ಇಂಥದೇ ಸ್ವಾಮಿ! ತಾವು ಇಲ್ಲಿಗೆ ದಯಮಾಡಿಸಿ ಅಂತ ನಾವು ತಮಗೆ ಅಕ್ಷತೆ ಕೊಟ್ಟಿಲ್ಲವಲ್ಲ!" ಎಂದು ನಿರ್ಭಯವಾಗಿ ಎದೆ ತಟ್ಟಿ ಹೇಳುವ ದೊಡ್ಡಸ್ತಿಕೆಯ ಮಟ್ಟಕ್ಕೇರಿದ್ದ ನಮ್ಮ ಹೋಟಲೊಡೆಯ ಶ್ರೀನಿವಾಸಾಚಾರ್ಯ. ಮಾಣಿಯನ್ನು ಬಯ್ದು ಬದುಕುವ ಕಾಲ ಅದಲ್ಲ. ಹೀಗೆಲ್ಲ ಯೋಚಿಸಿ, "ಏಕಯ್ಯಾ, ಶುರುಮಾಡಿಬಿಟ್ಟೆಯಲ್ಲ ಬೆಳಗಾಗುತ್ತಲೇ!" ಎಂದು ನಾನು ಕೊನೆಗೂ ಹಾವಿನ ಹುತ್ತವನ್ನು ತಡಕಬೇಕಾಯಿತು.

"ಯಾಕೆ? ಯಾಕೆ? ಎಂದು ಕೇಳುತ್ತೀಯಲ್ಲ— ನೀನು ಶುದ್ಧ ಬೆಪ್ಪ ಕಾಣೋ! ಇಂಥ ಅನ್ಯಾಯ ರಾಜಾರೋಷಾಗಿ ನಡೆದಿದ್ದು ಕೂಡಾ ಏನೂ ಗೊತ್ತಿಲ್ಲದವನಂತೆ, ಪಾಪದವನಂತೆ ನಾಲಗೆ ಆಡಿಸುತ್ತಾ ಕೂತಿದ್ದೀಯಲ್ಲ— ಮುಂಕುದಿಣ್ಣೆ!" ಎಂದು ನನ್ನ ಪ್ರಾಣಸ್ನೇಹಿತ ನನಗೆ ತಗಲಿಕೊಂಡೇಬಿಟ್ಟ. ಹೀಗೆ ಜನಜನಿತವಾಗಿರುವ ಆ ಅನ್ಯಾಯ ಅದೆಂಥದಿರಬಹುದು? ಒಂದು ಪಕ್ಷ ಅಂಥ ಅನ್ಯಾಯ ನಡೆದಿದ್ದರೂ ನಾನು ಕೂತುಕೊಳ್ಳದೆ ಇನ್ನೇನು ಮಾಡಬೇಕು? ನನಗಂತೂ ಗೊತ್ತಾಗಲಿಲ್ಲ.

ನನ್ನ ದಿಗ್ಭ್ರಾಂತಿಯನ್ನು ಕಂಡು ನನ್ನ ಸ್ನೇಹಿತನಿಗೂ ಕನಿಕರ ಹುಟ್ಟಿರಬೇಕು. ಅವನು ಎಲ್ಲವನ್ನೂ ವಿವರಿಸಿದ: "ಕೇಳಿಲ್ಲವೇನೋ ಗುಗ್ಗೂ-ಆ ಇಟಲಿಯ ಸೈನಿಕರ ಹಾವಳಿಯನ್ನು! ಅವರನ್ನೆಲ್ಲ ಇಲಿಗಳಂತೆ ಕೂಡಿಹಾಕಿದ್ದಾರಲ್ಲ ನೋಡು ಆ ಬೋನು, ಜಾಲಹಳ್ಳಿ ಕ್ಯಾಂಪು— ಅಲ್ಲಿಂದ ಆ ಮೃಗಗಳು ನಿನ್ನೆ ಮಧ್ಯಾಹ್ನದ ಹೊತ್ತಿಗೆ ತಪ್ಪಿಸಿಕೊಂಡು ಪೋಲಿ ಅಲೆಯತೊಡಗಿದುವಂತೆ. ಅಲ್ಲೇ ಸಮೀಪದ ಹಳ್ಳಿಯಲ್ಲಿ ಹೊಲದ ಕೆಲಸ ಮಾಡುತ್ತಿದ್ದ ಹೆಂಗಸರ ಮೇಲೆ ಈ ತೋಳಗಳು ಬಿದ್ದುವಂತೆ. ತಡೆಯಲು ಬಂದ ಹಳ್ಳಿಯವರನ್ನು ಹೊಡೆದು ಬಡಿದು ಹೆಂಗಸರ ಮೇಲೆ ಅತ್ಯಾಚಾರ ನಡಸಿ ಹೋದುವಂತೆ ಈ ಪಶುಗಳು! ಏನಯ್ಯಾ ಎಂಥ ಜನ ಅವರು! ಎರಡು ಕಾಲಿನ ಪಶುಗಳಲ್ಲವೇನಯ್ಯಾ? ಅವರನ್ನೆಲ್ಲ ಹಿಡಿದು ತೋಫಿನ ಬಾಯಿಗೆ ಕೊಡಬೇಕು, ಜೀವಸಹಿತ ಸುಟ್ಟುಬಿಡಬೇಕು. ಅವರ ಕುಲವೇ ನಾಶವಾಗಬೇಕು." ನನ್ನ ಸ್ನೇಹಿತ ಉದ್ವೇಗದಿಂದ ಮಾತನಾಡುತ್ತಿದ್ದ.

ನಾನು ತುಂಬ ಸೌಮ್ಯವಾದಿ! ಎಲ್ಲರೂ ನನ್ನಂಥವರೇ ಆದರೆ ಮಹಾತ್ಮಾ ಗಾಂಧಿಯವರ ಉಪದೇಶದ ಅಗತ್ಯವೇ ಇಲ್ಲವೆಂದು ನನ್ನ ಗೆಳೆಯರೆಲ್ಲ ನನ್ನನ್ನು ಗೇಲಿ ಮಾಡಿ ಸಂತೋಷಪಡುತ್ತಿದ್ದರು. ಆದರೂ ಈ ಮಾತು ಕೇಳಿ ನನ್ನ ರಕ್ತವೂ ಕುದಿಯಿತು. ನನ್ನಲ್ಲಿ ದೇಶಾಭಿಮಾನ ಕೆರಳಿತು. ರೋಷದ ಬಿರುಗಾಳಿಯ ಹೊಡೆತಕ್ಕೆ ನನ್ನ ನಾಲಗೆಯೂ ಆಡಿತು.

"ಲೋ, ಇದು ನನಗೆ ಗೊತ್ತೇ ಇರಲಿಲ್ಲವಲ್ಲ. ಅಯ್ಯೋ! ಎಂಥ ನರಪಶುಗಳಯ್ಯ ಅವರು! ಹೆಂಗಸರ ಮೇಲೆ ಅತ್ಯಾಚಾರ ನಡಸುವ ಆ ಜನ ಎಂಥ ನೀಚರಿರಬಹುದು? ಈ ಪಾಶ್ಚಾತ್ಯ ಕುಲವೇ ಅಂಥದು. ರಾಕ್ಷಸಕುಲ. ರಾವಣ ಕುಂಭಕರ್ಣ ಮಾರೀಚರ ಜಾತಿ. ಇಂಥ ಅಸಹ್ಯ ಮನಸ್ಸಿನ ಮೇಲೆಯೇ ಅವರ ಸಂಪೂರ್ಣ ನಾಗರಿಕತೆ ನಿಂತಿದೆ. ನಾವು ಮೂಡಣದವರೆಲ್ಲ ಅನಾಗರಿಕರಂತೆ. ನಮ್ಮನ್ನು ಆಳಿ ಪಳಗಿಸಲು ಬಂದ ದೇವರುಗಳಂತೆ ಅವರು! ಮನುಷ್ಯಮಾತ್ರರಾದವರು ತಲೆ ತಗ್ಗಿಸುವಂಥ ಕೆಲಸ ಮಾಡುವ ಈ ಜನ ನಾಶವಾಗದೆ ಲೋಕಕ್ಕೆ ಸುಭಿಕ್ಷವಿಲ್ಲ. ಬಿಡಬಾರದಯ್ಯ ಹೀಗೆ ಅವರನ್ನು — ಹಿಡಿದು ಸುಟ್ಟುಹಾಕಬೇಕು, ಬಡಿದುಹಾಕಬೇಕು, ನಿರ್ನಾಮ ಮಾಡಬೇಕು." ನನ್ನಲ್ಲಿ ಬುಸುಗುಟ್ಟುತ್ತಿದ್ದ ಈ ರೋಷ ನನಗೇ ವಿಚಿತ್ರ ಎನ್ನಿಸಿತು. ಆದರೆ ನಾನು ಹೆಂಗಸರಲ್ಲಿ ತುಂಬ ಗೌರವವುಳ್ಳವ, ಅವರಿಗಾದ ಅವಮಾನವನ್ನು ಸಹಿಸುವುದು ನನಗೆ ಎಂದೂ ಸಾಧ್ಯವಲ್ಲ.

ಇಷ್ಟರಲ್ಲಿ ನನ್ನ ಗೆಳೆಯ ತನ್ನ ಮಾತು ಮುಂದುವರಿಸಿ ಅತ್ಯದ್ಭುತವಾದ, ಅತಿ ಪ್ರಶಂಸನೀಯವಾದ ಯೋಜನೆಗಳನ್ನು ರೂ-

ಗೊಳಿಸುವುದರಲ್ಲಿ ಅವನು ಮಹಾನಿಪುಣ. "ನಾವು ಇದನ್ನೆಲ್ಲ ನೋಡಿ ಕೈಕಟ್ಟಿಕೊಂಡು ಕುಳಿತಿರಬಾರದು. ಹಳ್ಳಿಹಳ್ಳಿಗೆ ಹೋಗಿ ಜನರನ್ನು ತಯ್ಯಾರು ಮಾಡಬೇಕು. ಆತ್ಮರಕ್ಷಣೆಗೆ, ತಮ್ಮ ಸ್ತ್ರೀಯರ ರಕ್ಷಣೆಗೆ ಪ್ರತಿಯೊಬ್ಬರೂ ಕಂಕಣ ಕಟ್ಟಿ ಮುಂದೆ ಬರಬೇಕು. ಆ ಕಾಲ ಬಂದಿದೆ ಈಗ. ಇಲ್ಲವಾದರೆ ನಮ್ಮ ಜನಕ್ಕೆ ಉಳಿಗಾಲವಿಲ್ಲ. ಯುದ್ಧವೆಂದು ಸೈನಿಕರನ್ನು ತಂದು ಎಲ್ಲ ಊರುಗಳಲ್ಲೂ ಬೀಡು ಬಿಡಿಸುತ್ತಿದ್ದಾರೆ; ಯುದ್ಧದ ಸೆರೆಯಾಳುಗಳೆಂದು ಇಟಲಿಯ ಕೋತಿಗಳನ್ನು ತಂದು ಬೋನಿನಲ್ಲಿಟ್ಟು ಪ್ರದರ್ಶಿಸುತ್ತಿದ್ದಾರೆ. ಈ ಸೈನಿಕರೋ ಶಿಲಾಯುಗದ ನಾಗರಿಕರು. ಸಂಸ್ಕೃತಿಯ ಗಂಧ ಕೂಡ ಇಲ್ಲ ಅವರಿಗೆ. ಮನುಷ್ಯತ್ವ ಅವರ ಚರ್ಮಕ್ಕಿಂತ ಒಳಕ್ಕೆ ಪ್ರವೇಶ ಮಾಡಿರುವುದಿಲ್ಲ. ಅವರ ಈ ಪಶುವಿಲಾಸಗಳನ್ನು ಎದುರಿಸಲು ಬೇಕಾದುದು ಈಗ ಗಜಾನನಭವನವಲ್ಲ, ಮಾರುತೀವಿಲಾಸ."

"ಅಲ್ಲ, ನಮ್ಮ ಪೋಲೀಸರೇನು ಮಣ್ಣು ತಿನ್ನುತ್ತಿದ್ದಾರೇನೋ? ಇಷ್ಟೆಲ್ಲ ಅನಾಚಾರ ಮಾಡಿದ ಆ ಪಾಪಿಗಳನ್ನು ಹಿಡಿದು ಬಡಿಯಬಾರದೇನಯ್ಯ?" ಎಂದು ಕೇಳಿದೆ ನಾನು.

"ನೀನು ಮಂಕ ಎಂದು ನಾನು ಆಗಲೆ ಹೇಳಲಿಲ್ಲವೆ?" ಎಂದು ರಾಮರಾಯ ತನಗೆ ಸ್ವಾಭಾವಿಕವಾದ ತಿರಸ್ಕಾರಧ್ವನಿಯಿಂದ ನನ್ನನ್ನು ಮೂದಲಿಸಿದ. "ಪೋಲೀಸರು ಏನಾದರೂ ಜನರಿಗೆ ಒಳ್ಳೆಯದಾಗುವುದನ್ನು ಮಾಡಬಹುದೆಂದು ನಂಬಿರುವೆಯಲ್ಲ, ಮಗೂ! ಪೋಲೀಸರು ಇರುವುದು ಪಾಪದವರನ್ನು ಗೋಳುಹುಯ್ದುಕೊಳ್ಳುವುದಕ್ಕೆ, ಅವರಿವರಿಂದ ಲಂಚ ಹಿಂಡಿಕೊಳ್ಳುವುದಕ್ಕೆ, ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವವರನ್ನು ಹೊಡೆದು ಬಡಿದು ಗುಂಡು ಹೊಡೆದು ಸಾಯಿಸುವುದಕ್ಕೆ! ಅವರ ಕರ್ತವ್ಯ ಅದು. ನಮ್ಮ ಹೆಂಗಸರ ಮಾನಭಂಗವಾದರೆ ಅವರಿಗೇನಯ್ಯಾ? ನೀನೂ ಸರಿಯೆ. ಆತ್ಮಾವಲಂಬನೆಯ ಅರ್ಥ ನಿನಗೆ ತಿಳಿಯುವುದು ಯಾವಾಗಲೋ? ಎಲ್ಲದಕ್ಕೂ ಪೋಲೀಸರು, ಪೋಲೀಸರು ಎಂದು ಹೊಡಕೊಳ್ಳುವುದಕ್ಕಾಗುತ್ತದೆಯೇ? ಅವರ ಮೇಲೆ ಭಾರ ಹಾಕಿ ನಮ್ಮ ಗಂಡಸುತನವನ್ನು ಮಾರಿಕೊಳ್ಳುವುದಕ್ಕಾಗುತ್ತದೆಯೆ? ನಾವೆಲ್ಲ ಒಂದಾಗಿ ಈ ಅನ್ಯಾಯವನ್ನು ತಡೆಯಬೇಕು."

ಈ ಅನ್ಯಾಯವನ್ನು ಆತ ಹೇಗೆ ತಡೆಯುವನೋ ನನಗೆ ಗೊತ್ತಾಗಲಿಲ್ಲ. ನಾವೆಲ್ಲ ಒಂದಾಗುವುದು ಯಾವ ಸುವರ್ಣಯುಗದಲ್ಲೋ!— ಅದೂ ನನಗೆ ಹೊಳೆಯಲಿಲ್ಲ. ಸರಕಾರವಿಲ್ಲದೆ ಜನರಿಂದ ಇಂಥ ಅತ್ಯಾಚಾರ ನಿಲ್ಲಿಸಲು ಸಾಧ್ಯವಿಲ್ಲ ಎಂದು ನನಗೆ ತೋರಿತು. ಆದರೆ ನಾನೇನೂ ಮಾತಾಡಲಿಲ್ಲ. ನನ್ನ ಗೆಳೆಯ ರೇಗಿರುವಾಗ ಮಾತಾಡದಿರುವುದೇ ಜಾಣತನ, ಆತನ ಮಾತಿಗೆ ಹೂಗುಟ್ಟುವುದೇ ಮರ್ಯಾದೆ ಉಳಿಸಿಕೊಳ್ಳುವ ದಾರಿ ಎಂದು ನನಗೆ ಗೊತ್ತಿತ್ತು.

ಇಷ್ಟು ಹೊತ್ತಿಗೆ ನನ್ನ ಗೆಳೆಯನ ಕಾಫಿ ಆರಿಹೋಗಿತ್ತು. ಆರಿದ ಕಾಫಿಯನ್ನೇ ಅವನು ಗಟಗಟ ಕುಡಿದು ಜೇಬಿನಿಂದೊಂದು ಸಿಗರೇಟು ತೆಗೆದು ಹೊತ್ತಿಸಿಕೊಂಡು ಎದ್ದು ನಿಂತ. ಏನೋ ಮಹಾಕಾರ್ಯವನ್ನು ಸಾಧಿಸಿಯೇಬಿಡಲು ಹೊರಡುತ್ತಿರುವ ಮಹಾಯೋಧನಂತೆ "ನಾನು ಬರುತ್ತೇನಯ್ಯ" ಎಂದು ಹೇಳಿ ಹೊರಟೇಬಿಟ್ಟ.

ಹೋಟಲಿನಲ್ಲಿ ಜನಸಂದಣಿ ಜಾಸ್ತಿಯಾಗುತ್ತ ಬರುತ್ತಿತ್ತು. ಅಲ್ಲಲ್ಲಿ ಒಂದು ಕುರ್ಚಿಯಲ್ಲಿ ಇಬ್ಬರು, ಕುರ್ಚಿಯ ತೋಳುಗಳ ಮೇಲೆ ಇನ್ನಿಬ್ಬರು ಹೀಗೆ ಗಜಾನನಭಕ್ತರು ಬಂದು ವಿಶ್ರಮಿಸಿಕೊಳ್ಳುತ್ತಿದ್ದರು. ಇನ್ನು ಇಲ್ಲಿರುವುದು ತರವಲ್ಲ ಎಂದು ನಾನು ಹೋಟಲಿನಿಂದ ಹೊರಟೆ. ಇಟಲಿಯ ಸೈನಿಕರ ಅತ್ಯಾಚಾರದ ವಿಚಾರವೇ ನನ್ನ ಮನಸ್ಸನ್ನೆಲ್ಲ ತುಂಬಿತ್ತು. ಮನುಷ್ಯ ಇಂದ್ರಿಯಗಳ ದಾಸನಾಗಿಬಿಟ್ಟರೆ ಹೇಗೆ ಪಶುವಿಗೂ ಕೀಳಾಗಿ ವರ್ತಿಸುತ್ತಾನೆ ಎಂದು ನಾನು ಚಿಂತಿಸತೊಡಗಿದೆ. ಈ ಇಟಲಿಯ ಸೈನಿಕರೋ ಶೀರ ಹೇಡಿಗಳು. ಯುದ್ಧವಿದ್ಯೆಯಲ್ಲಿ ಪಲಾಯನಸೂತ್ರವೊಂದನ್ನು ಮಾತ್ರ ಚೆನ್ನಾಗಿ ಮನನ ಮಾಡಿದವರು. ಈ ಮೃಗಗಳನ್ನು ಸೆರೆಹಿಡಿದು ತಂದಿಟ್ಟರೆ ಇಲ್ಲಿ ಪರದೇಶದಲ್ಲೂ ತಮ್ಮ ಮೂರು ಕಾಸಿನ ಯೋಗ್ಯತೆಯನ್ನು ತೋರಿಸುತ್ತಿದ್ದಾರಲ್ಲ! ಇದರಿಂದ ತಮ್ಮ ದೇಶಕ್ಕೇ ಕೆಟ್ಟ ಹೆಸರು ಬರುವುದೆಂದು ಅವರಿಗೆ ಅನಿಸುವುದಿಲ್ಲವೇ? ಅಥವಾ ಅವರ ನಾಗರಿಕತೆಯ, ಅವರ ದೇಶದ ಯೋಗ್ಯತೆಯಾದರೂ ಅಷ್ಟರಲ್ಲೇ ಇದೆ. ಅವರ ನಾಗರಿಕತೆಯೇ ಹಾಗೆ; ಪೂರಾ ತಳಕು, ಕೇವಲ ಬಹಿರಂಗದ ಆಡಂಬರ; ಶುದ್ಧವಾದ ವಸ್ತ್ರಭೂಷಣಗಳು, ಶುಚಿಯಾದ ಮನೆಗಳು, ಅಗಣಿತ ವಿಲಾಸಸಾಮಗ್ರಿಗಳು, ಮಹಾ ನಗರಗಳು, ಪುಸ್ತಕ ಭಂಡಾರಗಳು, ವಿಜ್ಞಾನಶಾಲೆಗಳು. ಆದರೆ ಅವರ ಮನಸ್ಸು ಕಾಡು ಮನುಷ್ಯರ ಮನಸ್ಸಿನಂಥದೇ. ಬಿಳಿ ತೊಗಲಿನ ಜನವೆಲ್ಲ ಹೀಗೆಯೆ. ಈ ಇಂಗ್ಲೀಷರನ್ನು ನಾವು ನೋಡಿಲ್ಲವೇ? ಅವರ ಆ ಮಹಾ ನಾಗರಿಕತೆಯ ಅನುಭವ ನಮಗೆ ದೊರೆತಿಲ್ಲವೇ?

ಈ ಯೋಚನೆಯಲ್ಲಿ ತಲ್ಲೀನನಾಗಿ ನಾನು ಹೋಟಲಿನಿಂದ ಸ್ವಲ್ಪ ದೂರ ಹೋಗಿರಬಹುದು. ಅಷ್ಟರಲ್ಲಿ ಬಸ್ ನಿಲ್ದಾಣದ ಹತ್ತಿರ ಯಾರೋ "ನಮಸ್ಕಾರಾ ಸ್ವಾಮಿ" ಎಂದರು. ತಿರುಗಿ ನೋಡಿದೆ: ಪಕ್ಕದ ಮನೆಯ ಸಂಪತ್ತು. "ನಮಸ್ಕಾರ" ಅಂದೆ.

"ಕೇಳಿದಿರಾ?" ಎಂದ ಆತ.

"ಏನನ್ನು?"

"ಇಟಲಿಯ ಸೈನಿಕರ—"

"ಓಹೋ, ಅದೋ! ಈಗ ತಾನೇ ನಮ್ಮ ರಾಮರಾಯ ಹೇಳಿದ. ಹಳ್ಳಿಯನ್ನು ನುಗ್ಗಿ ಹೆಂಗಸರನ್ನು ಬಲಾತ್ಕರಿಸಿ—"

"ಅದೂ ಹೌದು. ಆದರೆ ಅಷ್ಟಕ್ಕೇ ನಿಂತಿಲ್ಲ, ಸ್ವಾಮಿ, ಅವರ ಹಾವಳಿ. ಪಟ್ಟಣದಲ್ಲೆಲ್ಲ ಅದೇ ಮಾತು ಈಗ. ಗುಟ್ಟಹಳ್ಳಿಯಲ್ಲಿ ಆ ಘಟಿಂಗರು ಏನು ಮಾಡಿದರು ಗೊತ್ತೆ?"

"ಇಲ್ಲ, ಇಲ್ಲ; ಏನು ಮಾಡಿದರು?"

"ಈಗ ತಾನೇ ಗುಟ್ಟಹಳ್ಳಿಯ ಗುಂಡಣ್ಣ— ಹಿಂದುಸ್ತಾನ ಏರ್‌ಕ್ರಾಫ್ಟಿನಲ್ಲಿ ಕೆಲಸಮಾಡುತ್ತಿದ್ದಾನಲ್ಲ ಆ ಗಿಣಿಮೂಗಿನ ಆಕಾಶರಾಯ— ಸಿಕ್ಕಿದ್ದ, ಆತ ಹೇಳಿದ. ಅವರ ಬೀದಿಯ ಕೊನೆಯ ಮನೆಯಲ್ಲಿ ದರ್ಜಿ ವಿಠೋಬ ವಾಸಿಸುತ್ತಿರುವನಂತೆ. ನಿನ್ನೆ ರಾತ್ರಿ ಸುಮಾರು ಎಂಟು ಗಂಟೆ ಹೊತ್ತಿಗೆ ಯಾರೋ ಬಂದು ಬಾಗಿಲು ತಟ್ಟಿದರಂತೆ. ವಿಠೋಬನೇ ಚಿತ್ತಯಿಸಿದನೆಂದು ಆತನ ಹೆಂಡತಿ ಬಾಗಿಲು ತೆಗೆದರೆ ಕೂಡಲೇ ಮೂವರು ಇಟಲಿಯವರು ತೂರಾಡುತ್ತಾ ಒಳಗೆ ನುಗ್ಗಿ ಹೊಲಸು ಮಾತುಗಳ ಮಳೆಗರೆಯುತ್ತ ಆ ಬಡ ಹೆಂಗಸನ್ನು ಕಚ್ಚಿ ಹೊಡೆದು ಬಡಿದು ಬೆದರಿಸಿ ಅವಳ ಮಾನಭಂಗ ಮಾಡಿದರಂತೆ. ಆ ಹೆಂಗಸಿನ ಕೂಗು ಕೇಳಿ ಬಂದ ನೆರೆಹೊರೆಯವರನ್ನೂ ಹೊಡೆದು ಹೋಗಿಬಿಟ್ಟರಂತೆ. ಏನು ಸ್ವಾಮಿ, ಎಂಥ ಕಾಲ ಬಂತಪ್ಪಾ! ನಮ್ಮ ಮನೆಯಲ್ಲೂ ನಮ್ಮ ಹೆಂಗಸರು ಸುರಕ್ಷಿತವಾಗಿ ಇರುವಂತಿಲ್ಲವಲ್ರಿ, ಒಳ್ಳೇ ಕಾಲ ಬಂತಪ್ಪಾ!"

"ಅವರ ಮೇಲೆ ಪೋಲೀಸರು ಏನೂ ಕ್ರಮ ತೆಗೆದುಕೊಳ್ಳಲಿಲ್ಲವೇ?" ಎಂದು ನಾನು ತುಟಿ ಕಚ್ಚಿಕೊಂಡೆ; ನನ್ನ ಗೆಳೆಯನ ಟೀಕೆ ಜ್ಞಾಪಕಕ್ಕೆ ಬಂತು.

"ಅಯ್ಯೋ ನಮ್ಮ ಪೋಲೀಸರನ್ನು ಬಿಡಿ, ಸ್ವಾಮಿ. ದೂರು ಕೊಟ್ಟವರನ್ನೇ ತರಾಟೆಗೆ ತೆಗೆದುಕೊಳ್ಳುತ್ತಾರೆ" ಎಂದು ಹೇಳಿ, "ಸೌದೆ ಅಂಗಡಿಗೆ ಹೋಗಿ ಕಾವಲಿರುತ್ತೇನೆ," ಎಂದು ಸಂಪತ್ತು ಹೊರಟುಬಿಟ್ಟ.

ನಾನು 'ಜನ್ಮಭೂಮಿ' ಪತ್ರಿಕೆಯೊಂದನ್ನು ಕೊಂಡುಕೊಂಡು ನನ್ನ ಕೊಠಡಿಯ ಕಡೆಗೆ ಹೊರಟೆ. ಬೀದಿಯುದ್ದಕ್ಕೂ ಜನ ಅಲ್ಲಲ್ಲಿ ಗುಂಪುಗುಂಪಾಗಿ ನಿಂತು ಮಾತಾಡುತ್ತಿದ್ದರು. 'ಇಟಲಿಯ ಸೈನಿಕರು', 'ಹೆಂಗಸರು', 'ಅತ್ಯಾಚಾರ', 'ಹೆಂಗಸರು ಬೀದಿಯಲ್ಲಿ ಹೋಗುವುದೇ ಕಷ್ಟ' ಇತ್ಯಾದಿ ಮಾತುಗಳು ನನ್ನ ಕಿವಿಗೆ ಬಿದ್ದವು. ಪತ್ರಿಕೆ ಮಾರುವ ಹುಡುಗರು "'ಜನ್ಮಭೂಮಿ' ಒಂದಾಣೆ, 'ದೀನವಾಣಿ' ಒಂದಾಣೆ—'ಇಟಲಿಯ ಸೈನಿಕರ ಅತ್ಯಾಚಾರ'" ಎಂದು ಕೂಗಿಕೊಳ್ಳುತ್ತಿದ್ದರು.

ಪತ್ರಿಕೆಯನ್ನು ತೆರೆದು ನೋಡಿದೆ. ಮೊದಲನೆಯ ಪುಟದಲ್ಲಿ 'ಇಟಲಿಯ ಸೈನಿಕರ ಅತ್ಯಾಚಾರ' ಎಂಬ ತಲೆಬರಹ ದಪ್ಪಕ್ಷರಗಳಲ್ಲಿ ಅಚ್ಚಾಗಿತ್ತು. ದೇಶಾಭಿಮಾನಿಗಳಲ್ಲಿ ಅಗ್ರಗಣ್ಯರಾದ ಸಂಪಾದಕರು ಆ ವಿಷಯದ ಮೇಲೆ ನೆತ್ತರು ಬಿಸಿಯೇರುವಂಥ ವೀರಾವೇಶದ ಸಂಪಾದಕೀಯವೊಂದನ್ನು ಬರೆದಿದ್ದರು. ಸರಕಾರದವರು ತಕ್ಕ ಕ್ರಮ ತೆಗೆದುಕೊಳ್ಳಬೇಕೆಂದೂ ಜನರಲ್ಲಿ ಹಬ್ಬಿರುವ ಹೆದರಿಕೆಯನ್ನು ನಿವಾರಣೆಮಾಡಬೇಕೆಂದೂ ಅಭಿಪ್ರಾಯಪಟ್ಟಿದ್ದರು.

ನಾನು ರೂಮಿನಲ್ಲಿ ಕೂತು ಪತ್ರಿಕೆ ನೋಡುತ್ತಿರುವಾಗಲೇ ಸುಬ್ರಹ್ಮಣ್ಯಂ ದಯಮಾಡಿಸಿದ. ಆತ ಗಾಂಧೀಭಕ್ತ, ಖಾದೀಧಾರಿ. ಒಂದೆರಡು ಸಲ ಜೈಲಿಗೂ ಹೋಗಿ ಬಂದ ಸ್ವಯಂಸೇವಕ. ಈಗ ವಿದ್ಯಾರ್ಥಿ ಕಾಂಗ್ರೆಸ್ಸಿನ ಮುಖಂಡ. ಅಹಿಂಸೆ, ಸತ್ಯ ಎಂಬ ಮಾತುಗಳು ಅವನಲ್ಲಿ ಶ್ವಾಸೋಚ್ಛ್ವಾಸದಷ್ಟೆ ಸಹಜವಾಗಿದ್ದುವು. ನನಗೆ ಅವನೆಂದರೆ ಬಲು ದಿಗಿಲು. ಪ್ರತಿಸಲ ನನ್ನ ಕೊಠಡಿಗೆ ಬಂದಾಗಲೂ 'ಅಹಿಂಸೆ' ಮತ್ತು 'ಸತ್ಯ'ದ ಮೇಲೆ ಆತ ಒಂದು ಘನವಾದ ಭಾಷಣವನ್ನು ಮಾಡದೆ ಇರುತ್ತಿರಲಿಲ್ಲ. ಬಹು ನಿಧಾನವಾಗಿ ಅನ್ಯಾದೃಶವಾದ ತಾಳ್ಮೆಯಿಂದ, ಅಹಿಂಸಾಮಾರ್ಗದಲ್ಲೇ ಮೃದು-ಮಧುರವಾಗಿ ಕೊರೆಯುವ ಜಾತಿ ಅವನದು. ಸಿಟ್ಟಿಗೆದ್ದು ಬಯ್ದರೂ ಆತ ಕೋಪಿಸಿಕೊಳ್ಳುವಂಥವನಲ್ಲ. 'ಇನ್ನೂ ಸ್ನಾನ ಮಾಡಿಲ್ಲ', 'ಒಂಭತ್ತು ಗಂಟೆಗೆ ವಿಶ್ವೇಶ್ವರಪುರದಲ್ಲಿ ವಿಶ್ವನಾಥರಾಯರನ್ನು ನೋಡಬೇಕಾಗಿದೆ', 'ಆಫೀಸಿಗೆ ಈ ದಿನ ಹತ್ತು ಗಂಟೆಗೆ ಹೋಗಬೇಕಾಗಿದೆ' ಎಂದು ನಾನಾ ನೆಪಗಳನ್ನು ಮುಂದೊಡ್ಡಿದ್ದರೂ ಅವನು ಸ್ವಲ್ಪವೂ ಅಪ್ರತಿಭನಾಗುತ್ತಿರಲಿಲ್ಲ. ತನ್ನ 'ಲೆಕ್ಚರ್' ಮುಗಿಸದೆ ಬಿಡುತ್ತಿರಲಿಲ್ಲ. ಮನುಷ್ಯರ ಒಳ್ಳೆತನದಲ್ಲಿ, ಕೊನೆಯ ಪಕ್ಷ ನನ್ನ ಒಳ್ಳೆತನದಲ್ಲಿ, ಅವನಿಗೆ ಅಚಲವಾದ ನಂಬಿಕೆ. ಅವನನ್ನು ಕೆಣಕಿ ಕೆರಳಿಸಲು ನಾನೂ ಆಗಾಗ ಪ್ರಯತ್ನಿಸುತ್ತಿದ್ದೆ. ಈ ದಿನ ನನಗೆ ಬಲವಾದ ಒಂದು ಕಾರಣವೂ ಸಿಕ್ಕಿತ್ತು, ಮನುಷ್ಯಕುಲವನ್ನೇ ಜಾಲಾಡಲು.

"ಕೇಳಿದೆಯೇನೋ ಇಟಲಿಯ ಸೈನಿಕರ ಅತ್ಯಾಚಾರವನ್ನು? ನಿನ್ನ ಅಹಿಂಸೆಯನ್ನು ಹೇಗಯ್ಯ ಉಪಯೋಗಿಸುತ್ತೀಯೆ, ಈ ಸಂದರ್ಭದಲ್ಲಿ ಈ ಪಶುಗಳ ಮೇಲೆ?" ಎಂದು ಇಂದು ನಾನೇ ಮಾತಿಗೆ ಪೀಠಿಕೆ ಹಾಕಿದೆ.

"ನೀನು ಹೇಳುವುದು ಸ್ವಲ್ಪ ನಿಜ ಅನ್ನು. ಪ್ರತಿಯೊಬ್ಬನ ಹೃದಯಾಂತರಾಳದಲ್ಲೂ ಹುದುಗಿರುವ ಒಳ್ಳೆತನದ ಚಿಂತಾರತ್ನದ ಮೇಲೆ ಅಷ್ಟು ಕೊಳೆ, ಅಷ್ಟು ಧೂಳು ಕೂತಿದೆ. ಆ ರತ್ನದ ಪ್ರಭೆ ಕಾಣಿಸುತ್ತಿಲ್ಲ. ಅದರ ಕಾಂತಿ ಬಾಳನ್ನು ಬೆಳಗುತ್ತಿಲ್ಲ. ಅದರ ಮೇಲೆ ರಾಶಿರಾಶಿಯಾಗಿ ಬಿದ್ದಿರುವ ಧೂಳನ್ನು ಎತ್ತಿಹಾಕಬೇಕಾಗಿದೆ. ಅದು ಒಂದೆರಡು ದಿನಗಳಲ್ಲಿ ಆಗುವ ಕೆಲಸವಲ್ಲ. ಸಂತತಪ್ರಯತ್ನದಿಂದ ಮಾತ್ರ ಅದು ಸಾಧ್ಯ."

"ಒಂದೆರಡು ದಿನ ಏನು?— ಎಂದಿಗೂ ಎಲ್ಲ ಮನುಷ್ಯರೂ ನಿಜವಾದ ಮನುಷ್ಯರಾಗುವುದು ಸಾಧ್ಯವಿಲ್ಲ. ಅಲ್ಲೊಂದು ಇಲ್ಲೊಂದು ಉನ್ನತಜೀವ, ಉದಾತ್ತಚರಿತ ಆಗಾಗ ನಮಗೆ ಕಾಣಿಸಿಕೊಳ್ಳಬಹುದು— ಅಷ್ಟೆ. ಏನಯ್ಯಾ, ಈ ಇಟಲಿಯ ಸೈನಿಕರು ಪಶುಗಳೇ ಹೊರತು ಅವರಲ್ಲಿ ಮನುಷ್ಯತ್ವ ಕೊಂಚವೂ ಇಲ್ಲ ಎಂದು ನಿನಗೆ ಅನ್ನಿಸುವುದಿಲ್ಲವೆ?" ಎಂದು ನಾನು ಕೇಳಿದೆ.

"ನೋಡು, ನಿನ್ನದು ಯಾವಾಗಲೂ ದುಡುಕುವ ಸ್ವಭಾವ. ಎಲ್ಲೋ ಒಂದು ವಿಶಿಷ್ಟ ಸಂಗತಿಯನ್ನು ತೆಗೆದುಕೊಂಡು ಅದರ ಮೇಲೆ ಒಂದು ಸಿದ್ಧಾಂತವನ್ನೇ ಕಟ್ಟಲು ಪ್ರಯತ್ನಿಸುತ್ತೀ. ಇಟಲಿಯ ಸೈನಿಕರಲ್ಲಿ ಕೆಲವರ ವರ್ತನೆಯನ್ನು ಕಂಡು ಅವರೆಲ್ಲರೂ ಇಂಥ ಪಶುಗಳೇ ಎಂದಾಗಲೀ ಇಟಲಿಯವರೆಲ್ಲ ಅನಾಗರಿಕರೆಂದಾಗಲೀ ಅಥವಾ ಆ ಸೈನಿಕರಲ್ಲಿ ಕೂಡಾ ಒಳ್ಳೆತನ ಕಿಂಚಿತ್ತೂ ಇಲ್ಲ ಎಂದಾಗಲೀ ಸಿದ್ಧಾಂತ ಮಾಡುವುದು ತಪ್ಪಲ್ಲವೆ? ಪ್ರತಿಯೊಂದು ಸಂದರ್ಭದಲ್ಲಿ ಅದರದರ ವಾತಾವರಣವನ್ನೂ ಹಿನ್ನೆಲೆಯನ್ನೂ ಗಮನಿಸಿ—"

"ಓ ಬಿಡಯ್ಯ, ಪುನಃ ಶುರುಮಾಡಿಬಿಟ್ಟಿಯಲ್ಲ ನಿನ್ನ ವೇದಾಂತ. ನಿನ್ನ ವಾತಾವರಣ, ನಿನ್ನ ಹಿನ್ನಲೆ- ಇವನ್ನೆಲ್ಲಾ ಯಾರು ಕೇಳುತ್ತಾರೆ? ನಿಸ್ಸಹಾಯರಾದ ಹೆಂಗಸರ ಮೇಲೆ ಅತ್ಯಾಚಾರ ನಡೆಯುತ್ತಿರುವಾಗ ಅದನ್ನೆಲ್ಲಾ ಕಟ್ಟಿಕೊಂಡು ಏನು ಕಡಿಯಬೇಕು? ದೊಡ್ಡ ಬಡಿಗೆ ಹಿಡಿದು ಬಡಿಯಬೇಕು-ಅಷ್ಟೆ."

"ನೀನು ಪುನಃ ತಪ್ಪು ಮಾಡುತ್ತಿರುವೆ! ತಾಳ್ಮೆಗೆಟ್ಟಿರುವೆ. ರೋಗದ ಮೂಲ ಕಾರಣ ತಿಳಿಯದೆ ಅದನ್ನು ಪರಿಹಾರ ಮಾಡುವುದು ಹೇಗೆ? ಬಡಿಗೆ ಯಾರದು ದೊಡ್ಡದೋ, ಬಡಿಯುವ ತ್ರಾಣ ಯಾರಿಗೆ ಹೆಚ್ಚಾಗಿದೆಯೋ ಅವರಿಗೆ ಜಯ ನಿಶ್ಚಯವಲ್ಲವೆ? ಸ್ವಲ್ಪ ವಿರಾಮವಾಗಿ ಸಾವಧಾನದಿಂದ ಯೋಚಿಸಿದರೆ ಆಗ ನಿನಗೇ ಗೊತ್ತಾಗುತ್ತದೆ. ಆದರೆ ಅದಕ್ಕೆ ನೀನು ಸಿದ್ಧನಾಗಿಲ್ಲ."

"ನಮ್ಮ ಹೆಂಗಸರ ಮೇಲೆ ನಡೆದ ಅತ್ಯಾಚಾರ ಕೇಳಿಯೂ ಇಷ್ಟು ಶಾಂತನಾಗಿದ್ದೀಯಲ್ಲ, ಮಹಾರಾಯ, ನೀನು ನಿಜವಾಗಿಯೂ ಸ್ಥಿತಪ್ರಜ್ಞನೇ ಸರಿ."

"ಹಾಗಲ್ಲ— ನನಗೆ ದುಃಖವಾಗಿಲ್ಲವೆಂದುಕೊಳ್ಳಬೇಡ. ಆದರೆ ಇಂಥ ದೌರ್ಜನ್ಯ ಎಲ್ಲ ಕಾಲದಲ್ಲೂ ಎಲ್ಲ ಕಡೆಗಳಲ್ಲೂ ನಡೆಯುತ್ತ ಬಂದಿದೆಯಲ್ಲ. ಅದರ ನಿವಾರಣೆ ಆಗುವುದು ಹೇಗೆ? ಎಂದು ನಾನು ಯೋಚಿಸುತ್ತೇನೆ. ಮೊನ್ನೆ ನಾನು ಒಬ್ಬ ಇಟಲಿಯ ಸೈನಿಕನನ್ನು ಕಂಡೆ. ಆತನ ಮುಖ ಎಲ್ಲ ಭಾವಗಳ ಗೋರಿಯಂತೆ ಕಂಡಿತು. ನನಗೇಕೋ ಅದರ ಮೇಲೆ ಅನಂತ ದುಃಖ ಮುದ್ರಿತವಾಗಿದೆ ಎನ್ನಿಸಿತು. ನನಗೂ ಆಶ್ಚರ್ಯವಾಗುತ್ತದೆ; ಅಂಥ ಮುಖದ ಹಿಂದುಗಡೆ ಇಂಥ ಮನೋವೃತ್ತಿಗಳು ಹೇಗೆ ಗುಪ್ತವಾಗಿರಬಹುದು?"

"ಹೇಗೆ, ಎಂದು ಯೋಚಿಸುತ್ತ ಮೀನಮೇಷ ಎಣಿಸುತ್ತಿರುವಾಗಲೇ ಆಗುವ ಅತ್ಯಾಚಾರ ಆಗಿಯೇ ಹೋಗುತ್ತದೆ. ಪಶುಜಾತಿಗೆ

ಸೇರಿದ ಮನುಷ್ಯರಿಗೆ ತಿಳಿಯುವುದು ಬಡಿಗೆಯ ಭಾಷೆಯೊಂದೇ. ಹೋಗು, ಹೋಗು; ನಿನ್ನ ಅಹಿಂಸೆಯನ್ನು ಹುಲಿಸಿಂಹಗಳಿಗೆ ಬೋಧಿಸು," ಎಂದು ಕೊಂಚ ಸಿಟ್ಟಿನಿಂದಲೇ ಹೇಳಿದೆ. ಆದರೆ ನಮ್ಮ ಗೆಳೆಯ ಎಂದಿನಂತೆಯೇ ಶಾಂತವಾಗಿದ್ದು ಆ ಕ್ಷಣವೇ 'ಬರುತ್ತೇನಯ್ಯ' ಎಂದು ಹೇಳಿದ. ನನಗೆ ಆಶ್ಚರ್ಯವಾಯಿತು. "ಏಕಯ್ಯ ಇಷ್ಟು ಬೇಗ, ಈ ದಿನ?" ಎಂದೆ. "ಮೀಟಿಂಗ್ ಇದೆಯಯ್ಯಾ, ಮೀಟಿಂಗ್ —ಸ್ವಯಂಸೇವಕರ ಮೀಟಿಂಗ್— ನಾನು ಅಧ್ಯಕ್ಷ— ಹೊರಡಬೇಕು— ಹತ್ತು ಗಂಟೆಗೆ ಹಾಜರಿರಬೇಕು" ಎಂದು ಹೊರಟೇಬಿಟ್ಟ.

ಹೀಗೆ ಏಳೆಂಟು ದಿನಗಳು ಕಳೆದುವು. ಇಟಲಿಯ ಸೈನಿಕರ ಅತ್ಯಾಚಾರದ ವಿಚಾರ ಒಂದಕ್ಕೆ ಹತ್ತಾಗಿ ನೂರಾಗಿ ಬೆಳೆಯುತ್ತಿತ್ತು. ಎಲ್ಲೆಲ್ಲಿ ನೋಡಿದರೂ ಅದೇ ಮಾತು, ಅದೇ ಕಥೆ. ಹಳ್ಳಿಯಿಂದ ಮೊಸರು ತರುತ್ತಿದ್ದ ಹೆಂಗಸೊಬ್ಬಳನ್ನು ಇನ್‌ಸ್ಟಿಟ್ಯೂಟಿನ ಹತ್ತಿರ ತಡೆದು ಕಾಡಿದರು; ಲಾಲ್‌ಬಾಗಿನ ಹತ್ತಿರ ಯಾವಳನ್ನೋ ಅಡ್ಡ ಹಾಕಿದರು; ರಾತ್ರಿ ಹತ್ತು ಗಂಟೆ ಹೊತ್ತಿಗೆ ರಾಜಾ ಮಿಲ್ಲಿನ ಹತ್ತಿರ ಗಾಡಿಯಲ್ಲಿ ಬರುತ್ತಿದ್ದ ಹೆಂಗಸರಿಬ್ಬರನ್ನು ಬೀದಿಗೆಳೆದರು—ಇತ್ಯಾದಿಯಾಗಿ ವದಂತಿಗಳು ಹಬ್ಬಿದ್ದುವು. ಹೆಂಗಸರು ಹಗಲು ಹೊತ್ತು ಕೂಡಾ ಮನೆ ಬಿಡಲು ಹೆದರುತ್ತಿದ್ದರು. ಮನೆಯಲ್ಲಿದ್ದರೂ ಯಾವ ಹೊತ್ತಿಗೆ ಏನೋ ಎಂದು ಥರಥರ ನಡುಗುತ್ತಿದ್ದರು.

ಇದನ್ನೆಲ್ಲ ಕೇಳಿ ಕೇಳಿ ನನಗೆ ಸಾಕಾಗಿಹೋಗಿತ್ತು, ಸರಕಾರದ ಮೇಲೆ, ಪೋಲೀಸರ ಮೇಲೆ, ನಮ್ಮ ಜನದ ಮೇಲೆ ಅಸಾಧ್ಯ ಸಿಟ್ಟು ಬಂದಿತ್ತು. ಸೆರೆಯಾಳುಗಳಾದ ಸೈನಿಕರು ತಪ್ಪಿಸಿಕೊಳ್ಳುವುದು ಹೇಗೆ? ತಪ್ಪಿಸಿಕೊಂಡರೂ ಪೋಲಿಯಲೆಯಲು ಅವರನ್ನು ಏಕೆ ಬಿಡಬೇಕು? ಹೇಳುವವರು ಕೇಳುವವರು ಯಾರೂ ಇಲ್ಲವೆ? ಪೋಲೀಸರು ಮಣ್ಣು ತಿನ್ನುತ್ತಿದ್ದಾರೆಯೆ? ಜನ ಬಳೆತೊಟ್ಟುಕೊಂಡಿದ್ದಾರೆಯೆ? ಸರಕಾರ ಎಲ್ಲಿ ಹೋಯಿತು—ಏನಾಯಿತು?

ಅಂದು ಭಾನುವಾರ, ರಜೆ. ಗೆಳೆಯರನ್ನೆಲ್ಲ ತಪ್ಪಿಸಿಕೊಂಡು ನಾನೊಬ್ಬನೇ ಏಕಾಂಗಿಯಾಗಿ ಜನರಿಲ್ಲದ ಸ್ಥಳ ಹುಡುಕಿಕೊಂಡು 'ಸಂಚಾರ' ಹೋಗಬೇಕೆಂದು ನಿರ್ಧರಿಸಿದ್ದೆ. ಐದು ಗಂಟೆಯವರೆಗೂ ರೂಮಿನಲ್ಲೇ ಇದ್ದರೆ ನನ್ನ ಉದ್ದೇಶ ನೆರವೇರಲಾರದೆಂದು ನನಗೆ ಗೊತ್ತು. ಆದ್ದರಿಂದ ರಜಾ ದಿನಗಳಲ್ಲಿ ನನಗೆ ಬಹುಪ್ರಿಯವಾದ ನಿದ್ದೆಗೂ ಶರಣುಹೊಡೆದು ಎರಡೂವರೆಗೇ ರೂಮು ಬಿಟ್ಟೆ. ಅಕಸ್ಮಾತ್ತಾಗಿ ಸಿಟಿ ಬಸ್ಸಿನಲ್ಲಿ ಸ್ಥಳ ಸಿಕ್ಕಿದ್ದರಿಂದ ಮೆಜೆಸ್ಟಿಕ್ ತನಕ ಆಯಾಸವಿಲ್ಲದೆ ಬಂದು ತಲುಪಿದೆ. ಅಲ್ಲಿ ಇಲ್ಲಿ ಸಿನೇಮಾ ಮಂದಿರಗಳನ್ನೆಲ್ಲ ಎಡತಾಕುತ್ತಾ ಕೊನೆಗೆ 'ಸಿಟಿ ಲಂಚ್ ಹೋಂ'ಗೆ ಬಂದು ತಲುಪಿದೆ. ಬಿಸಿಬಿಸಿಯಾದ ಕಾಫಿಯನ್ನು ಹೊಟ್ಟೆಗೆ ಹುಯ್ದುಕೊಂಡು 'ಮಿನರ್ವಾ' ಸಿನೇಮಾ ಮಂದಿರಕ್ಕೆ ನುಗ್ಗಿದೆ.

ಸಿನೇಮಾ ಮುಗಿಯುವಾಗ ಆರು ಗಂಟೆ ಆಗಿತ್ತು. ಪುನಃ 'ಸಿಟಿ ಲಂಚ್ ಹೋಮಿ'ನಲ್ಲಿ ಮಸಾಲೆ ದೋಸೆ ಕಾಫಿ ಮುಗಿಸಿಕೊಂಡು ಜನರಿಲ್ಲದ ಕಡೆ ಹುಡುಕಿಕೊಂಡು ಹೊರಟೆ. ಆದರೆ ದಾರಿಯುದ್ದಕ್ಕೂ ಜನರೇ. ಯುನೈಟೆಡ್ ಇಂಡಿಯಾ ಭವನದ ಬಳಿಗೆ ಬಂದು ಅಲ್ಲಿಂದ ಸೌತ್ ಪೆರೇಡ್‌ಗೆ ಹೋಗುವ ದಾರಿ ಹಿಡಿದೆ. ಅಲ್ಲಿ ಜನ ಜಾಸ್ತಿ ಇರಲಿಲ್ಲ. ಅಲ್ಲೊಬ್ಬ ಇಲ್ಲೊಬ್ಬ ಕಾಣಿಸಿಕೊಳ್ಳುತ್ತಿದ್ದರು— ಅಷ್ಟೆ.

ಆಗಲೂ ನನ್ನ ಮನಸ್ಸಿನಲ್ಲಿ ಇಟಲಿಯ ಸೈನಿಕರ ಯೋಚನೆಯೇ. ಅವರ ವಿಚಾರದಲ್ಲಿ ನನಗೆ ಅಸಾಧ್ಯ ಜುಗುಪ್ಸೆ ಬಂದುಬಿಟ್ಟಿತ್ತು. ಇಂಥವರು ಯಾಕೆ ಮನುಷ್ಯರೂಪದಲ್ಲಿ ಹುಟ್ಟಿರಬೇಕು? ಮಾನವ ಕುಲ ಪಶುಸಂಕುಲವಾಗಿ ಹೋಗುತ್ತಿದೆಯಲ್ಲ! ಹಸಿವುಗಳು ಮಾನವನಿಗೂ ಪಶುವಿಗೂ ಸಮಾನವಾಗಿಯೇ ಇರುತ್ತವೆ– ನಿಜ. ಆದರೆ ಅವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಮಾಡಿದ ಸಾಹಸವೇ ಮಾನವನಾಗರಿಕತೆಯ ಇತಿಹಾಸ ಅಲ್ಲವೆ? ಹಸಿವೇ ರೋಗವಾದರೆ ಆಗ? ಸಮಾಜವೇ ಹಾಳಾಗಿ ಹೋಗುವುದಲ್ಲ! ನಾಗರಿಕತೆ ಕೇವಲ ಒಂದು ಸೋಗು ಮಾತ್ರ ಆಗಿಹೋಯಿತಲ್ಲ! ಸುಸಂಸ್ಕೃತರೆನ್ನಿಸಿಕೊಂಡವರಲ್ಲೇ ಆಗಾಗ ಪಶುಧರ್ಮ ಸುಸ್ಪಷ್ಟವಾಗಿ ಕಾಣಿಸಿಕೊಳ್ಳುವುದಿಲ್ಲವೆ? ನಯವಾದ ನುಣುಪಾದ ಚರ್ಮದಲ್ಲೂ ಹುಲಿ ಸಿಂಹ ತೋಳಗಳ ಹಲ್ಲು ಉಗುರುಗಳು ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುತ್ತವಲ್ಲ! ಕೋಕಿಲ ಕಂಠದಲ್ಲೂ ಗರ್ಜನೆ ಹೆಜ್ಜೆಯಿಟ್ಟು ಬರುತ್ತದಲ್ಲ! ನಯದ ನಾಜೂಕಿನ ಪಾಂಡಿತ್ಯದ ಆಧ್ಯಾತ್ಮಿಕ ವಾಕ್ಸರಣಿಯಲ್ಲೂ ಅದೇನೋ ಆಗಾಗ ಗುರುಗುಟ್ಟುವುದು ನಮಗೆ ಕೇಳಿಸುತ್ತದಲ್ಲ! ಹಾಗಾದರೆ ಸಂಸ್ಕೃತಿ ಒಂದು ಪರದೆ, ಅದರ ಹಿಂದೆ ಪಶುವಿಹಾರ ಎಂದು ಸಿದ್ಧಾಂತಕ್ಕೆ ಬರಬಹುದೆ? ಆದರೆ ಪರಹಿತಕ್ಕಾಗಿ ದೇಹ ತೆತ್ತವರು, ಸ್ತ್ರೀಮಾನರಕ್ಷಣೆಗೆ ಎಲ್ಲವನ್ನೂ ಮುಡಿಪಾಗಿಟ್ಟವರು, ಸತ್ಯಕ್ಕಾಗಿ ನ್ಯಾಯಕ್ಕಾಗಿ ಧರ್ಮಕ್ಕಾಗಿ ಆದರ್ಶಕ್ಕಾಗಿ ರಕ್ತ ಚೆಲ್ಲಿದವರು— ಅವರ ವಿಚಾರವಾಗಿ ಏನು ಹೇಳುವುದು? ಕೆಲವೇ ಕೆಲವು ವ್ಯಕ್ತಿಗಳಲ್ಲಿ ಈ ಅಲೌಕಿಕ ದಿವ್ಯಪ್ರಭೆ ಎಲ್ಲಿಂದ ಬಂತು?— ಬರುತ್ತದೆ. ಆ ಬೆಳಕು ಪ್ರತಿಯೊಬ್ಬರಲ್ಲೂ ಮಲಗಿರಬಹುದೆ? ಆದರೆ ಅದನ್ನು ಎಚ್ಚರಿಸುವುದು ಹೇಗೆ? ಕೆರಳಿಸುವುದು ಹೇಗೆ? ಅದನ್ನು ಕಾಣದೆ ಕತ್ತಲಲ್ಲಿ ತೊಳಲುವವರು ಎಂದು ದಾರಿಗೆ ಬರುವುದು? ಅಯ್ಯೋ, ಎಂದು? ನನ್ನ ಅಂತಃಕರಣ ಆರ್ದ್ರವಾಯಿತು. ತಂಗಾಳಿ ಮೆಲ್ಲನೆ ಬೀಸಿ ಬಂತು, ಕಾದ ತಲೆ ಕೊಂಚ ತಣಿಯಿತು. ಇಷ್ಟು ಹೊತ್ತಿಗೆ ಹೊತ್ತು ಮುಳುಗಿರಬೇಕು. ಪಡುವಲ ಮೋಡಗಳೆಲ್ಲ ನೆತ್ತರಲ್ಲಿ ನೆನೆದಿದ್ದುವು. ಬೀದಿಯುದ್ದಕ್ಕೂ ಮರದ ದಟ್ಟವಾದ ನೆಳಲು ನೀಡಿತ್ತು. ಬೆಳಕು ಕ್ಷಣ ಕ್ಷಣಕ್ಕೂ ಮುಸಕುಮುಸಕಾಗುತ್ತಿತ್ತು. ನನ್ನ ಮನಸ್ಸಿನಲ್ಲಿ ಏನೋ ಒಂದು ವಿವರಿಸಲಾರದ ನೋವು. ನನ್ನ ಅಂತಃಕರಣವೊಂದು ಮಂಜಿನ ರಾಶಿಯಂತೆಯೂ ಯಾವುದೋ ಬಿಸಿಗೆ ಅದು ಕರಗುತ್ತಿರುವುದಾಗಿಯೂ ತೋರಿತು. ಕಣ್ಣೀರಿನ ಚಿಲುಮೆ ಚಿಮ್ಮಿ ಚಿಮ್ಮಿ ನನ್ನ ಕಣ್ಣುಗಳ ಹಿಂದೆ ದೊಡ್ಡ ಕಡಲಿನಂತೆ ತಡೆದು ನಿಂತಿದೆ ಎನ್ನುವಂತಾಯಿತು. ಈ ಜಗತ್ತಿನಲ್ಲಿ ಆಗುತ್ತಿರುವ ಅನ್ಯಾಯದ ದಾರುಣ ಅನುಭವಗಳ ಶೋಕಸಾಗರದ ಭಾರ ನನ್ನನ್ನು ಅದುಮುತ್ತಿರುವುದಾಗಿ ನನಗೆ ತೋರಿತು.

ದೂರದಲ್ಲಿ ಇದ್ದಕ್ಕಿದ್ದಂತೆ ಕೇಳಿಬಂದ ಬೂಟ್ಸುಗಳ ಖಟ್ ಖಟ್ ಶಬ್ದದಿಂದ ನನ್ನ ಧ್ಯಾನಮಗ್ನತೆಗೆ ಭಂಗ ಬಂತು. ಸುತ್ತಲೂ ನೋಡಿದೆ: ನನ್ನ ಮುಂದುಗಡೆಯಿಂದ ಯಾರೋ ಮೂವರು ನಡೆದು ಬರುತ್ತಿರುವುದು ಕಾಣಿಸಿತು. ದೂರದಲ್ಲಿ ಅವರ ಆಕೃತಿಗಳು ಕೊಂಚ ದಟ್ಟವಾದ ನೆಳಲಿನಂತೆ ಅಸ್ಪಷ್ಟವಾಗಿ ಕಂಡುವು. ಆ ಕಡೆಯಿಂದ ಇನ್ನಾರೂ ಇತ್ತ ಬರುತ್ತಿರಲಿಲ್ಲ. ಹಿಂತಿರುಗಿ ನೋಡಿದರೆ ನನಗೆ ಹತ್ತಾರು ಗಜಗಳ ದೂರದಲ್ಲಿ ಒಬ್ಬ ಹೆಂಗಸು ತನ್ನ ಮಗುವನ್ನೆತ್ತಿಕೊಂಡು ಬೇಗ ಬೇಗ ಹೆಜ್ಜೆಯಿಡುತ್ತ ಬರುತ್ತಿದ್ದಳು. ಅವಳ ಮುಖ

ಅವ್ಯಕ್ತವಾದೊಂದು ಭೀತಿಯಿಂದ ವಿವರ್ಣನಾದಂತಿತ್ತು. ಎಲ್ಲಿ ಏನಾಗುವುದೋ ಎಂಬ ಭಯ ಅಚ್ಚೊತ್ತಿದಂತಿತ್ತು ಆಕೆಯ ಮುಖದ ಮೇಲೆ. ಆಕೆ ಬಿಡುತ್ತಿದ್ದ ನೀಳವಾದ ಉಸಿರೂ ನನಗೆ ಕೇಳುತ್ತಿತ್ತು.

ಥಟ್ಟನೆ ನನಗೆ ಪುನಃ ಇಟಲಿಯ ಸೈನಿಕರ ನೆನಪು ಬಂತು. ಒಮ್ಮೆ ನಡುಗಿದೆ; ಏನೋ ಒಂದು ಅಶುಭದ ಪೂರ್ವಸೂಚನೆ ಬಂದಂತೆ. ನನ್ನ ಗತಿ ಕುಂಠಿತವಾಯಿತು; ಹೆಜ್ಜೆ ನಿಧಾನವಾಯಿತು. ಪುನಃ ಮುಂದೆ ನೋಡಿದೆ. ಈಗ ಆ ವ್ಯಕ್ತಿತ್ರಯ ನನ್ನ ಹತ್ತಿರ ಬಂದಿದ್ದರು. ನಡುವಿನಲ್ಲೊಬ್ಬ ಸೈನಿಕ, ಆತನ ಎರಡೂ ಬದಿಗಳಲ್ಲಿ ಇಬ್ಬರು— ಬಹುಶಃ ಪೋಲೀಸ್ ಇನ್ಸಪೆಕ್ಟರರು.

ಅವರ ಆಕೃತಿ ಇನ್ನೂ ಸ್ಪಷ್ಟವಾಯಿತು. ನಡುವಿನವನ ಬಿಳಿ ಮುಖ ಈಗ ಸ್ಪಷ್ಟವಾಗಿ ಕಾಣಿಸಿತು. ಸಮವಸ್ತ್ರ ಧರಿಸಿದ್ದ ಸೈನಿಕ, ಇಟಲಿಯ ಸೈನಿಕ. ಅವನ ಮುಖದ ಕಡೆ ನೋಡಿದೆ. ಬಿಳಿಚಿಕೊಂಡಿತ್ತು. ಕಣ್ಣುಗಳ ಸುತ್ತಲೂ ಕಪ್ಪು ಬಣ್ಣದೊಂದು ವೃತ್ತ. ಕಣ್ಣು ಮಾಸಲು, ಮಂಜು; ಭಾವಶೂನ್ಯ, ಅರ್ಥಶೂನ್ಯ. ಹಳೆಯ ದೇವಾಲಯಗಳಲ್ಲಿ ಕಲ್ಲಿನಲ್ಲಿ ಕಡೆದಿರುವ ಗೊಂಬೆಗಳ ಕಣ್ಣು, ಅಂಥದೇ ಮುಖ, ಕಲ್ಲು ಮುಖ. ಮುಖ ಒಂದು ಒರಟು ಬಂಡೆಯಂತೆ ಕಂಡಿತು. ಸುಖವೋ ದುಃಖವೋ, ಶಾಂತಿಯೋ ಅಶಾಂತಿಯೋ, ಉನ್ಮಾದವೋ ಭ್ರಾಂತಿಯೋ,— ಯಾವ ಭಾವವೋ ಆ ಮುಖದಲ್ಲಿ ಹೇಳಬರುವಂತಿರಲಿಲ್ಲ. ಹಾ, ಇಂಥ ಮುಖವುಳ್ಳವನು ಎಂಥ ದೌರ್ಜನ್ಯವನ್ನಾದರೂ ಎಂಥ ಅಮಾನುಷ ಕೃತ್ಯವನ್ನಾದರೂ ಕೊಂಚವೂ ಅಳುಕದೆ, ಹಿಂಜರಿಯದೆ ಮಾಡಿ ಮುಗಿಸಬಲ್ಲ ಎಂದೆನಿಸಿತು ನನಗೆ.

ಅವನ ಪಕ್ಕದಲ್ಲಿದ್ದ ಪೋಲೀಸ್ ಅಧಿಕಾರಿಗಳ ಕಡೆಗೆ ನೋಡಿದೆ. ಅವರು ನಮ್ಮ ಜನರೇ. ತಲೆ ಮೇಲೆ ಹ್ಯಾಟ್ ನೋಡಿ ಅವರು ಪೋಲೀಸ್ ಇನ್ಸ್‌ಪೆಕ್ಟರುಗಳೇ ಇರಬೇಕು ಎನಿಸಿತು. ಅವರ ಮುಖದಲ್ಲಿ ಕಠೋರ ತಿರಸ್ಕಾರ ಹೊರಹೊಮ್ಮುತ್ತಿತ್ತು. ಕಣ್ಣು ಕೆಂಡದಂತಿತ್ತು. ಆಗಾಗ ಅವರು ಕೆಂಗಣ್ಣಿನಿಂದ ತಮ್ಮ ನಡುವೆ ನಿಧಾನವಾಗಿ ಒಂದೇ ಧಾಟಿಯಲ್ಲಿ ಗತ್ತಿನಲ್ಲಿ ಹೆಜ್ಜೆಯಿಡುತ್ತಿದ್ದ ಆ ಘಾತಕನೆಡೆಗೆ ನೋಡುತ್ತಿದ್ದರು. ಆದರೆ ಅವನಿಗೆ ಇದಾವುದರ ಪರಿವೆಯೂ ಇದ್ದಂತೆ ತೋರಲಿಲ್ಲ. ಯಾವುದೋ ಕನಸುನಾಡಿನಲ್ಲಿ ಏನನ್ನೋ ಹುಡುಕುತ್ತಿರುವವನಂತೆ, ವರ್ತಮಾನವನ್ನು ಸಂಪೂರ್ಣವಾಗಿ ಮರೆತವನಂತೆ, ಕಂಡನು. ಆ ಮುಹೂರ್ತದಲ್ಲಿ ನನಗೆ ಆ ಮುಖ ಅನಂತ ಕರುಣೆಯ ಶಿಲಾಪ್ರತಿಮೆಯಂತೆ ತೋರಿತು. ಹಾಗೆ ತೋರಿದ್ದು ಒಂದೇ ಒಂದು ಕ್ಷಣ ಮಾತ್ರ. ಮರುಕ್ಷಣದಲ್ಲೇ ನನ್ನ ಮನಸ್ಸಿನಲ್ಲಿ ಪ್ರತಿಹಿಂಸಾಭಾವ ತಾಂಡವವಾಡತೊಡಗಿತು. ಇಟಲಿಯ ಸೈನಿಕರಿಂದ ನಮ್ಮ ಹೆಂಗಸರಿಗಾದ ಅಪಮಾನ ಅತ್ಯಾಚಾರ ಎಲ್ಲ ಜ್ಞಾಪಕ ಬಂದು ರೋಷಾವೇಶದಿಂದ ನನ್ನ ಮೈ ಉರಿಯತೊಡಗಿತು. ಏನೋ ಒಂದು ಅತಿ ಅಸಹ್ಯ ಅತಿ ಅಮಾನುಷವಾದುದನ್ನು ಕಂಡಾಗ ಹುಟ್ಟುವಂಥ ಜುಗುಪ್ಸೆ ನನ್ನ ಮನಸ್ಸನ್ನು ಕವಿಯಿತು, ಓಕರಿಕೆ ಬರುವಂತಾಯಿತು.

ಈ ಇಟಲಿಯ ಸೈನಿಕನನ್ನು ಅವರು ಎಲ್ಲಿಗೆ ಎಳೆದುಕೊಂಡು ಹೋಗುತ್ತಿರಬಹುದು ಎಂದು ಯೋಚಿಸುತ್ತಿರುವಾಗಲೇ ಅವರು ನನ್ನಿದಿರಿಗೆ ಬಂದುಬಿಟ್ಟರು. ಇಷ್ಟು ಹೊತ್ತಿಗೆ ನನ್ನ ಹಿಂದೆ ಬರುತ್ತಿದ್ದ ಹೆಂಗಸು ನನಗಿಂತ ಕೊಂಚ ಮುಂದಾಗಿದ್ದಳು. ಪೋಲೀಸರನ್ನೂ ಆ ಸೈನಿಕನನ್ನೂ ಕಂಡು ಆಕೆ ಥರಥರ ನಡುಗತೊಡಗಿದಳು. ಇದ್ದಕ್ಕಿದ್ದಂತೆ ಆ ಸೈನಿಕ ಅವಳ ಕಡೆಗೆ ತನ್ನ ಮುಖ ತಿರುಗಿಸಿದ. ಆತನ ಕಣ್ಣು ಭಾವಾವೇಗದಿಂದ ಹೊಳೆಯುತ್ತಿತ್ತು. ಆ ಹೆಂಗಸಿಗೆ ಆ ರಾಕ್ಷಸ ತನ್ನ ಕಡೆಗೆ ಬಾ ಎಂದು ಕೈಸನ್ನೆ ಮಾಡಿದ. ಇದನ್ನು ಕಂಡು ನಾನು ಒಂದು ಪಕ್ಕಕ್ಕೆ ಸರಿದು ನಿಂತೆ. ಅಬ್ಬಾ, ಈತನ ಧಾರ್ಷ್ಟ್ಯವೇ! ಇಷ್ಟು ಜನ ಇರುವಾಗಲೂ ಇವನ ಪಶುವೃತ್ತಿ ಕೆರಳಿತೆ? ಏನು ಮಾಡಿಬಿಡುವನೋ, ನಮ್ಮ ಪೋಲೀಸರು ಏನು ಮಾಡುವರೋ, ಎಂದು ಭ್ರಾಂತನಾದೆ.

ಹೆಂಗಸು ಗಡಗಡ ನಡುಗತೊಡಗಿದಳು. ಪೋಲೀಸರ ಕಣ್ಣುಗಳು ಕೋಪದಿಂದ ಉರಿದುವು. "ಹೀಗೆ ಬಾ ಅಮ್ಮಾ, ಈ ಕಳ್ಳ ನೀಚ ಏನು ಮಾಡುತ್ತಾನೋ ನೋಡೋಣ. ನಾವಿದ್ದೀವಿ, ಹೆದರಬೇಡ" ಎಂದರು ಪೋಲೀಸರು.

ಆ ಹೆಂಗಸು, ಪಾಪ, ದಿಕ್ಕುಕಾಣದಾದಳು. ಅವಳಿಗೆ ಏನು ಮಾಡಬೇಕೆಂದು ತೋಚಲಿಲ್ಲ. ತತ್ತರಿಸುತ್ತಿದ್ದಳು. ಮುಖದಲ್ಲಿ ದಾರುಣ ಸಂಕಟ, ಭಯದ ಕರಾಳಚ್ಛಾಯೆ. ಕಕ್ಕಾಬಿಕ್ಕಿಯಾಗಿ ಅವಳು ಪೋಲೀಸರ ಮುಖದ ಕಡೆ ನೋಡುತ್ತಿದ್ದಳು. ನಮ್ಮ ಪೋಲೀಸರ ಮಾತಿನಲ್ಲೂ ವಿಶ್ವಾಸ ಹುಟ್ಟುವುದು ಕಷ್ಟವಲ್ಲವೆ? ಪುನಃ ಪೋಲೀಸರು ಹೇಳಿದರು: "ಬಾ ತಾಯೀ; ಹೆದರಬೇಡ. ಈ ಅಯೋಗ್ಯನಿಗೆ ಬುದ್ಧಿ ಕಲಿಸ್ತೀವಿ, ಬಾ!"

ನಿನಾದ ಅಗಾಧ ಮೌನ. ಗಾಳಿ ಕೂಡ ನಿಶ್ಚಲ. ಆಕಾಶದಲ್ಲಿ ಒಂದೆರಡು ನಕ್ಷತ್ರಗಳು ಇಣಿಕಿ ನೋಡುತ್ತಿದ್ದುವು. ಬಳಿಯ ಬೀದಿಯ ದೀಪ ಮಂಕಾಗಿ ಕಂಡಿತು. ಅಲ್ಲಿ ನಾವು ಐದು ಜನ. ಏನೋ ಆಗಬಾರದುದು ಆಗುವುದನ್ನು ನಿರೀಕ್ಷಿಸುತ್ತ ನಾನು ನಿಂತಿದ್ದೆ. ಯಾರ ಬಾಯಿಯಲ್ಲೂ ಮಾತಿಲ್ಲ. ಪೋಲೀಸರ ಮುಷ್ಟಿಯಲ್ಲಿ ಲಾಠಿ ಇನ್ನಷ್ಟು ಮತ್ತಷ್ಟು ಬಿಗಿಯಾಗುತ್ತಿತ್ತು. ಅಸಾಧ್ಯ ಕೋಪ ಅವರ ಕೆಂಗಣ್ಣಿನಲ್ಲಿ ಉರಿಯುತ್ತಿತ್ತು.

ಮೆಲ್ಲನೆ, ಬಹು ಮೆಲ್ಲನೆ ಆ ಹೆಂಗಸು ತನ್ನ ಮಗುವಿನೊಡನೆ ಹೆಜ್ಜೆಯಿಡುತ್ತಿದ್ದಳು. ನನ್ನ ಎದೆ ಡವಗುಟ್ಟುತ್ತಿತ್ತು. ಪೋಲೀಸರು ಕೂಡ ಉಸಿರನ್ನು ತಡೆದುಬಿಡುತ್ತಿದ್ದಂತೆ ನನಗೆ ತೋರಿತು. ಇಟಲಿಯ ಆ ಸೈನಿಕ ಮಾತ್ರ ನಿಶ್ಚಲನಾಗಿ ನಿಂತಿದ್ದ, ಕೋಡುಗಲ್ಲಿನಂತೆ. ಆತನ ಕಣ್ಣಿಗೆ ಮಾತ್ರ ಈಗ ಎಲ್ಲಿಂದಲೋ ಜೀವಕಳೆ ಬಂದಂತೆ ತೋರಿತು. ಅದು ಕೊಂಚ ತೇವವಾದಂತೆಯೂ ನನಗೆ ಕಂಡಿತು.

ಇಷ್ಟು ಹೊತ್ತಿಗೆ ಹೆಂಗಸು ತೀರ ಹತ್ತಿರ ಬಂದಿದ್ದಳು. ಸೈನಿಕನ ಮುಖವನ್ನೊಮ್ಮೆ ನೋಡಿ ಚಿಟ್ಟನೆ ಚೀರಿದಳು. ತಾಯಿ ಚೀರಿದ್ದನ್ನು ಕೇಳಿ ಮಗುವೂ ಚೀರಿಕೊಂಡಿತು. ನನ್ನ ಎದೆ ಕರಗಿತು. ಪೋಲೀಸರ ಮೇಲೂ ನನಗೆ ಕೋಪ ಬಂತು. ತಮ್ಮ ಅಧಿಕಾರ ತೋರಿಸುವುದಕ್ಕಾಗಿ ಅವರಿಗೆ ಈ ಆಟ ಏಕೆ? ಪಾಪದ ಹೆಂಗಸನ್ನು ಗೋಳು ಹುಯ್ದುಕೊಂಡು ಅವರು ತಮ್ಮ ಅಧಿಕಾರವನ್ನೂ ಆ ಇಟಲಿಯ ಸೈನಿಕನಲ್ಲಿ ತಮಗಿರುವ ಕೋಪವನ್ನೂ ತೋರಿಸದಿದ್ದರೆ ಯಾರಿಗೇನು ನಷ್ಟ? ಅವರ ಈ ಕ್ರೂರ ವಿಲಾಸವನ್ನು ವಿರೋಧಿಸಬೇಕೆಂದು ನಾನು ಬಾಯಿ ತೆರೆಯಬೇಕು —

ಅಷ್ಟರಲ್ಲೇ ಇಟಲಿಯ ಸೈನಿಕ ಬಾಯಿ ತೆರೆದ. ಆ ನರಕದ್ವಾರದಿಂದ ಏನು ಮಾತು ಬರುವುದೋ ಎಂದು ನಾನು ನಡುಗಿದೆ. ಪೋಲೀಸರ ಹಿಡಿತದಲ್ಲಿ ಜೋತಾಡುತ್ತಿದ್ದ ಲಾಠಿ ಈಗ ಸೆಟೆದು ನಿಂತಿತ್ತು. ಯಾವ ನಿಮಿಷಕ್ಕೆ ಬೇಕಾದರೂ ಅದು ಇಟಲಿಯ ಸೈನಿಕನ ತಲೆಯ ಮೇಲೆ ಬಂದಿಳಿಯಲು ಸಿದ್ಧವಾಗಿತ್ತು. 'ಮಗು ಕೊಡು' ಎಂದು ಹರಕುಮುರುಕು ಇಂಗ್ಲಿಷಿನಲ್ಲಿ ನುಡಿದು ಮಗುವಿನ ಕಡೆಗೆ ಆ ಪಿಶಾಚಿ ಕೈಚಾಚಿದ. ಪಾತಾಳದ ಆಳದಿಂದ ಮೇಲೆದ್ದು ಬಂದ ಗುಡುಗಿನ ನೆಳಲಿನಂತೆ ತೋರಿತು ಆತನ ಧ್ವನಿ. ಹೀಗೆ ಹೇಳುತ್ತಲೇ ಆ ಮಗುವನ್ನು ಬಾಚಿ ಎತ್ತಿಕೊಂಡೇಬಿಟ್ಟ. ಹೆಂಗಸು ಇನ್ನೊಮ್ಮೆ ಚೀರಿದಳು. 'ಅಯ್ಯೋ' ಎಂದು ಬಿಕ್ಕಿಬಿಕ್ಕಿ ಅಳತೊಡಗಿದಳು. "ಅಯ್ಯೋ, ಅಯ್ಯೋ, ನನ್ನ ಮುದ್ದುಮಗುವನ್ನು ಕೊಲ್ಲುತ್ತಾನಲ್ಲ ನೀಚ; ಬದುಕಿಸಿ ಸ್ವಾಮಿ; ನಿಮ್ಮ ದಮ್ಮಯ್ಯ, ನನ್ನ ಕಂದನನ್ನು ಕಾಪಾಡಿ!" ಎಂದು ಆಕೆ ನನ್ನ ಕಡೆ ಪೋಲೀಸರ ಕಡೆ ದೀನ ದೃಷ್ಟಿ ಬೀರಿ ಮೊರೆಯಿಟ್ಟಳು.

ಸೈನಿಕನ ಮುಖದಲ್ಲಿ ಅಪೂರ್ವ ಬದಲಾವಣೆ. ಎಲ್ಲಿಂದಲೋ ಯಾವ ಗುಪ್ತ ಕಾರಂಜಿಯಿಂದಲೋ ಜೀವರಸ ಪುಟಿದು ಅವನ ಕಲ್ಲಿನ ಮುಖ ಜೀವತಳೆದಂತಿತ್ತು. ಕಣ್ಣುಗಳಲ್ಲಿ ಕಂಬನಿ ಮಡುವುಗಟ್ಟಿದಂತಿತ್ತು. ನನಗೆ ಆಶ್ಚರ್ಯವಾಯಿತು. ಇದೆಂಥ ಆಟ; ಇದೇನು ತಮಾಷೆ; ಸೈನಿಕ ಅವಸರ ಅವಸರವಾಗಿ ತನ್ನ ಜೇಬುಗಳನ್ನೆಲ್ಲಾ ಹುಡುಕಿನೋಡಿದ. ಕೊನೆಗೆ ಯಾವುದೋ ಜೇಬಿನಲ್ಲಿ ಮೂರುನಾಲ್ಕು ಚಾಕಲೇಟುಗಳು ಸಿಕ್ಕಿದುವು. ಅವನ್ನು ಮಗುವಿಗೆ ಕೊಟ್ಟು ಮಗುವನ್ನು ಎದೆಗೆ ಅವಚಿಕೊಂಡ. ಕಣ್ಣಿನಿಂದ ನೀರು ಕೋಡಿ ಹರಿಯುತ್ತಿತ್ತು. ಸೈನಿಕ ಮುಖವೆತ್ತಿದ. "ಅಲ್ಲಿ ಇಟಲಿಯಲ್ಲಿ ಮನೆಯಲ್ಲಿ ಮಗು, ನನ್ನ ಮಗು, ಇಂಥದೇ ಎಂದು ಹರಕುಮುರುಕು ಇಂಗ್ಲಿಷ್ ಶಬ್ದಗಳು ಅವನ ಬಾಯಿಯಿಂದ ಹೊರಟವು. ಮುಂದೆ ಅವನ ಬಾಯಿಯಿಂದ ಮಾತು ಹೊರಡಲಿಲ್ಲ. ಅವನ ಕಂಠ ಗದ್ಗದವಾಗಿತ್ತು. 'ಗೊಳೋ' ಎಂದು ಅಳತೊಡಗಿದ ಆ ಸೈನಿಕ ಬಿಕ್ಕಿ ಬಿಕ್ಕಿ ಅತ್ತ.

ಪೋಲೀಸರ ಕೈಗಳಲ್ಲಿದ್ದ ಲಾಠಿಗಳು ಕೆಳಗಿಳಿದು ಜೋತಾಡುತ್ತಿದ್ದವು. ಅವರ ಕಣ್ಣುಗಳೂ ತೇವವಾಗಿದ್ದಂತೆ ತೋರಿತು. ನನ್ನ ಎದೆ ಕರಗಿ ಹೋಗಿತ್ತು, ಕಣ್ಣು ಮಸುಕಾಗಿತ್ತು. ಹೆಂಗಸು ಅವಕ್ಕಾಗಿ ಎವೆಯಿಕ್ಕದೆ ಆ ಸೈನಿಕನನ್ನೇ ನೋಡುತ್ತಾ ನಿಂತಿದ್ದಳು. ನಾವೆಲ್ಲ ದಿಗ್ಭ್ರಾಂತರಾಗಿದ್ದೆವು.

"ಅಯ್ಯೋ ಮನುಷ್ಯ ಮನುಷ್ಯನನ್ನು ಹೇಗೆ ತೂಕ ಮಾಡುತ್ತಾನೆ" ಎಂದು ಒಮ್ಮೆ ನಿಟ್ಟುಸಿರು ಬಿಟ್ಟು ನಾನು ಅಲ್ಲಿಂದ ಮುಂದಡಿಯಿಟ್ಟೆ.

# ಲೌಕಿಕ ರಾಜ್ಯದ ಆದರ್ಶ

ಬರೆದವರು:
'ಶ್ರೀರಂಗ' ಸಿದ

> ಭಾರತವು ಲೌಕಿಕ ಅಥವಾ ಧರ್ಮೇತರನಿಷ್ಠ ರಾಜ್ಯವೆಂದು ನಮ್ಮ ಘಟನೆಯ ಧ್ಯೇಯಾಧ್ಯಾಯ ಹೇಳುತ್ತದೆ. ಲೌಕಿಕ ರಾಜ್ಯವೆಂದರೇನು? ಅದು ಪಾಷಂಡತೆಯೆ? ಈ ಬಗೆಯ ರಾಜ್ಯಪದ್ಧತಿಯ ಐತಿಹಾಸಿಕ ಹಿನ್ನೆಲೆಯೇನು? ಲೌಕಿಕತ್ವವನ್ನು ನಾವು ಒತ್ತಿ ಸಾರುವುದರ ಔಚಿತ್ಯವೆಷ್ಟು? ಇದು ನಿಜವಾಗಿ ಆಚರಣೆಯಲ್ಲಿ ಸಫಲವಾಗಬೇಕಾದರೆ ನಾವೇನು ಮಾಡಬೇಕು? ಈ ಪ್ರಶ್ನೆಗಳನ್ನು ಶ್ರೀರಂಗರು ಚರ್ಚಿಸಿದ್ದಾರೆ.

ಸ್ವತಂತ್ರ ಹಿಂದುಸ್ತಾನ ಮತ್ತು ಸ್ವತಂತ್ರ ಪಾಕಿಸ್ತಾನ ಇವುಗಳ ರಾಜ್ಯಘಟನೆಗಳ ಪೀಠಿಕೆ (preamble)ಗಳನ್ನು ನೋಡಿದಲ್ಲಿ ಮೂಲದಲ್ಲಿಯೆ ಒಂದು ವ್ಯತ್ಯಾಸ ಒಡೆದು ಕಾಣುವುದು. ಸ್ವತಂತ್ರ ಹಿಂದುಸ್ತಾನದ ಅರಸೊತ್ತಿಗೆ (ರಾಜ್ಯಾಧಿಕಾರ = sovereignty) ಯು ಪ್ರಜೆಗಳಿಗೆ ಸೇರಿದೆ ಎಂಬ ಮಾತಿಗೆ ಪ್ರತಿಯಾಗಿ ಪಾಕಿಸ್ತಾನದ ರಾಜ್ಯಘಟನೆಯಲ್ಲಿ ಈ ಅರಸೊತ್ತಿಗೆಯು ಅಲ್ಲಾನಿಗೆ ಸೇರಿದ್ದು. ಅವನ ಕರುಣೆಯಿಂದ ಕ್ರಮೇಣ ಹಸ್ತಾಂತರವಾಗುತ್ತ ಪಾಕಿಸ್ತಾನದ ಪ್ರಜೆಗಳಿಗೆ ಸೇರಿದೆ. ಎರಡು ಘಟನೆಗಳಲ್ಲಿಯ ಈ ವಿಶೇಷದ ಮಹತ್ವವು ಪರಿಣಾಮದಲ್ಲಿ ಯಾವ ತರದ್ದಾಗಿದೆ ಎಂಬುದು ವಿಚಾರ ಮಾಡಿದಲ್ಲಿ ಸ್ಪಷ್ಟವಾಗುವುದು. ಕೇವಲ ಅವುಗಳಲ್ಲಿಯ ಶಬ್ದಗಳನ್ನು ನೋಡಿ ಹಿಂದುಸ್ತಾನವು ದೇವಲಂಡ ಇಲ್ಲವೆ ಧರ್ಮಲಂಡ ರಾಷ್ಟ್ರ, ಪಾಕಿಸ್ತಾನವು ಶ್ರದ್ಧಾವಂತ ರಾಷ್ಟ್ರ ಎಂದು ತಿಳಿದರೆ ತಪ್ಪಾಗುವುದು. ಇವೆರಡೂ ಘಟನೆಗಳು ಜಗತ್ತಿನ ಇತಿಹಾಸದಲ್ಲಿಯ ಎರಡು ಧೋರಣೆಗಳ ಪ್ರತೀಕಗಳಾಗಿವೆ. ಹಿಂದುಸ್ತಾನದಲ್ಲಿಯೆ ಅಲ್ಲ, ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಈ ಧೋರಣಗಳನ್ನು ಅವುಗಳ ಇತಿಹಾಸದಲ್ಲಿ ಕಾಣಬಹುದು. ಇವೆರಡು ಧೋರಣಗಳೆಂದರೆ ಮನುಷ್ಯನು ತನ್ನ ಸಮಾಜವನ್ನು ಕಟ್ಟಲು ಹಾಕಿಕೊಂಡ ಎರಡು ತತ್ವಗಳು. ಒಂದು ದೇವನ (ಇಲ್ಲವೆ ಧರ್ಮದ) ಅಧಿಕಾರದ ನೆರಳಿನಲ್ಲಿ ಸಮಾಜವನ್ನು ಕಟ್ಟುವುದು; ಇನ್ನೊಂದು, ಲೌಕಿಕ (ಇಲ್ಲವೆ ಧರ್ಮೇತರ) ಅಧಿಕಾರದ ತತ್ವದ ಮೇಲೆ ಸಮಾಜದ ಕಟ್ಟಡವನ್ನು ನಿಲ್ಲಿಸುವುದು. ಇವೆರಡೂ ಧೋರಣೆಗಳು ಯುರೋಪದ ರಾಷ್ಟ್ರಗಳ ಇತಿಹಾಸದಲ್ಲಿ ಕೆಲವು ಶತಮಾನಗಳ ವರೆಗೆ ಪರಸ್ಪರ ತಿಕ್ಕಾಟಕ್ಕೆ ಅವಕಾಶವನ್ನುಂಟುಮಾಡಿದ್ದರಿಂದ ಅಲ್ಲಿ ಅವುಗಳಿಗೆ ಪ್ರತ್ಯೇಕತೆ ಬಂದಿತು. ನಮ್ಮ ಇತಿಹಾಸದಲ್ಲಿ ಆ ತಿಕ್ಕಾಟವಿಲ್ಲದ್ದಕ್ಕೆ ಆ ಪ್ರತ್ಯೇಕತೆಯೂ ಇಲ್ಲದಾಗಿ ಇಂದು religious ಮತ್ತು secular ಎಂಬ ಕಲ್ಪನೆಗೆ ಪ್ರತಿಯಾಗಿ ನಮ್ಮಲ್ಲಿ ಸಮರ್ಪಕ ಶಬ್ದಗಳು ಕೂಡ ಇಲ್ಲ. ಧರ್ಮದ ತಳಹದಿಯ ಮೇಲೆ ನಿಂತುದಕ್ಕೆ religious—ಧರ್ಮನಿಷ್ಠ—ರಾಷ್ಟ್ರ ಎನ್ನಬಹುದು; ಅದಕ್ಕೆ ಇದಿರಾದ secular ರಾಷ್ಟ್ರಕ್ಕೆ ನಿಜವಾಗಿ ನಾವು ಧರ್ಮೇತರನಿಷ್ಠ ರಾಷ್ಟ್ರ ಎನ್ನಬೇಕು. (ಯಾವ ಕಾರಣಕ್ಕಾಗಿಯೊ ಏನೊ, ಸರಿಯಾದ ಅರ್ಥವನ್ನು ಕೊಡಲಾರದ ಧರ್ಮಾತೀತ ಎಂಬ ಶಬ್ದ ನಮ್ಮಲ್ಲಿ ಉಪಯೋಗಿಸಲ್ಪಡುತ್ತಿದೆ.)

ಇಂದು ನಮ್ಮ ರಾಷ್ಟ್ರವು ಧರ್ಮೇತರನಿಷ್ಠ (secular) ಎಂದು ಘೋಷಿಸಲ್ಪಟ್ಟಿದೆ. ನಮ್ಮಲ್ಲಿ ಧರ್ಮ ಮತ್ತು ಲೌಕಿಕಗಳ ತಿಕ್ಕಾಟವಿಲ್ಲದ್ದಕ್ಕೆ ಸಮರ್ಪಕ ಶಬ್ದವಿಲ್ಲ ಎಂದು ನಾನು ಮೇಲೆಯೆ ಹೇಳಿದ್ದೇನೆ. ನಮ್ಮ ಇತಿಹಾಸದಲ್ಲಿಯೆ ಇಂತಹ ತಿಕ್ಕಾಟವಿಲ್ಲದಾಗ ಇಂದು ನಾವು secular ಇಲ್ಲವೆ ಧರ್ಮೇತರನಿಷ್ಠ ರಾಷ್ಟ್ರ ಎಂದು ಸಾರಿಕೊಳ್ಳುವುದು ಅಗತ್ಯವಿದೆಯೆ? ಇದು ಮೊದಲ ಪ್ರಶ್ನೆ. ಏನೇ ಇರಲಿ, ರಾಷ್ಟ್ರದ ಆ ಸ್ವರೂಪ ಈಗ ಘೋಷಿಸಲ್ಪಟ್ಟಿದೆ. ಆ ಸಂಗತಿಯ ಮಹತ್ವವೇನು? ಇದು ಎರಡನೆಯ ಪ್ರಶ್ನೆ. ಇತಿಹಾಸ ಇಲ್ಲವೆ ಅನುಭವದ ಅಭಾವದಲ್ಲಿ ಇಂತಹ ಧೋರಣೆಯನ್ನು ಇಟ್ಟುಕೊಂಡಿದ್ದೇವೆ. ಆದುದರಿಂದ ಆ ಧೋರಣೆ ಆಚರಣೆಯಲ್ಲಿ ಯಶಸ್ವಿಯಾಗಬಹುದೆ? ಇದು ಮೂರನೆಯ ಪ್ರಶ್ನೆ. ಈ ಮೂರೂ ಪ್ರಶ್ನೆಗಳನ್ನು ಚರ್ಚಿಸಿ ಅವುಗಳಿಗೆ ನನಗೆ ತೋಚಿದ ಸಮರ್ಪಕ ಉತ್ತರಗಳನ್ನು ಒದಗಿಸುವುದು ಈ ಚಿಕ್ಕ ಲೇಖದ ಗುರಿಯಾಗಿದೆ.

**ಅರಸೊತ್ತಿಗೆಯ ಇತಿಹಾಸ**

ಮೇಲಿನ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದಕ್ಕೆ ಹಿನ್ನೆಲೆಯಾಗಿ ಅರಸೊತ್ತಿಗೆಯ ಇತಿಹಾಸವನ್ನು ಸ್ವಲ್ಪದರಲ್ಲಿ ನೋಡಬಹುದು. ಅರಸೊತ್ತಿಗೆ (sovereignty)ಯು ''ರಾಜ"ನೆಂಬ ವ್ಯಕ್ತಿಯಲ್ಲಿ ರೂಢವಾದುದನ್ನು ಎಂದಿನಿಂದಲೂ ನಾವು ನೋಡುತ್ತೇವೆ. ಇಷ್ಟೆ ಅಲ್ಲದೆ, ಅರಸುತನವು ಆನುವಂಶಿಕವಾಗಿ ನಡೆಯುತ್ತಿರುವುದೂ ನಮಗೆ ಸಹಜವಾದ ಅನುಭವವಾಗಿದೆ. ಆದರೆ ಮೊದಲಿನಿಂದಾಗಲಿ ಎಲ್ಲ ರಾಷ್ಟ್ರಗಳಗಲ್ಲಾಗಲಿ ಈ ಮಾದರಿಯ ಆನುವಂಶಿಕವಾಗಿ ವ್ಯಕ್ತಿನಿಷ್ಠವಾದ ಅರಸೊತ್ತಿಗೆಯೆ ಇದ್ದಿತೆಂದು ಮಾತ್ರ ತಿಳಿಯುವಂತಿಲ್ಲ. ಇಷ್ಟೇಕೆ? ನಮ್ಮ ದೇಶದಲ್ಲಿಯೆ ಬುದ್ಧನ ಕಾಲದಷ್ಟು ಪ್ರಾಚೀನದಲ್ಲಿ ಕೂಡ ಅನೇಕ "ಪ್ರಜಾಸತ್ತಾತ್ಮಕ" ಚಿಕ್ಕ ರಾಷ್ಟ್ರಗಳಿದ್ದವು. ಋಗ್ವೇದದಲ್ಲಿ ಅರಸನು (ವಿಶಾಂಪತಿಃ) ಜನರಿಂದ ಚುನಾಯಿಸಲ್ಪಡುತ್ತಿದ್ದನು. ಅರಸುತನವು ಅರಸನ ಮತ್ತು ಮಿಕ್ಕವರ ಪರಸ್ಪರ ಒಂದು ಒಪ್ಪಿಗೆಯ ಪತ್ರವಾಗಿತ್ತು. ಮಿಕ್ಕವರನ್ನು ಸಂರಕ್ಷಿಸುವುದು ಅರಸನ ಕೆಲಸ; ಆ ಸಂರಕ್ಷಣೆಗೆ ಪ್ರತಿಯಾಗಿ ಮಿಕ್ಕವರು ತಮ್ಮ ಗಳಿಕೆಯಲ್ಲಿ ಒಂದಂಶವನ್ನು (ಉದಾ: ೧/೬) ಅವನಿಗೆ ಕೊಡುತ್ತಿದ್ದರು. ಸಂರಕ್ಷಣೆಗೆ ಅಲಕ್ಷ್ಯ ಮಾಡಿದರೆ ಇಲ್ಲವೆ ಅಸಮರ್ಥನಾದರೆ ಅವನನ್ನು ತೆಗೆದೊಗೆದು ಮತ್ತೊಬ್ಬನನ್ನಾರಿಸಿಕೊಳ್ಳುತ್ತಿದ್ದರು. ಪ್ರಾಚೀನ ಕಾಲದಲ್ಲಿ ಈ ತರದ "ಏಕನಾಯಕ"ತತ್ವವು ಕ್ರಮೇಣ ಅರಸುತನದಲ್ಲಿ ಬೆಳೆದುದನ್ನು ಸರ್ವಸಾಮಾನ್ಯವಾಗಿ ಎಲ್ಲ ನಾಗರಕ ಸಮಾಜಗಳಲ್ಲೂ ಕಾಣಬಹುದು.

ಕಾಲ ಕಳೆದಂತೆ ಒಂದು ಪರಿಸ್ಥಿತಿ ಅನಿವಾರ್ಯವಾಯಿತು. ಹಿಂದಣ ಸಮಾಜಗಳಲ್ಲಿ ''ಪುರೋಹಿತ" (Priest, ಬ್ರಾಹ್ಮಣ) ನಿಗೆ ಪ್ರಾಶಸ್ತ್ಯವಿದ್ದಿತು. ಇದರ ಕಾರಣಗಳನ್ನು ವಿವೇಚಿಸುವದು ಇಲ್ಲಿ ಪ್ರಸ್ತುತವಲ್ಲವಾದ್ದರಿಂದ ಇಷ್ಟನ್ನೆ ಹೇಳುತ್ತೇನೆ. ಈ ''ಪುರೋಹಿತ"ನು ಪುರಾಣಸಮಾಜಗಳ ನಾಯಕನಾಗಿದ್ದನು. ಆದರೆ ಅರಸುತನ

ರೂಢವಾದಂದಿನಿಂದ ಈ ನಾಯಕತ್ವದ ಬಗ್ಗೆ ಒಂದು ತರದ ತಿಕ್ಕಾಟವೇ ಪ್ರಾರಂಭವಾಯಿತು. ಅರಸು ತಾನೂ "ದೇವಾಂಶ" ಎಂದು ಹೇಳಿಕೊಳ್ಳತೊಡಗಿದನಲ್ಲ? "ಪುರೋಹಿತ"ನೂ ದೇವಪುರುಷನೆ! ಹೀಗಾಗಿ ಅನಿವಾರ್ಯವಾದ ತಿಕ್ಕಾಟದ ಕೊನೆಗೆ ಅರಸನಿಗೆ "ಪುರೋಹಿತ"ನೆ ಮಂತ್ರಿಯಾಗಿರಬೇಕೆಂದು ಸಂಧಾನವಾದಂತಾಯಿತು. ನಮ್ಮ ದೇಶದ ಈ ತಿಕ್ಕಾಟದಲ್ಲಿ ಒಂದು ವೈಚಿತ್ರ್ಯವಿದೆ. ಅರಸು ತಾನು "ಲೌಕಿಕ"ದ ದೊರೆ ಎಂದು ಹೇಳಿಕೊಳ್ಳಲಿಲ್ಲ; ತಾನೂ ದೇವಾಂಶ ಎಂದುಕೊಂಡ. ಆದ್ದರಿಂದ ನಮ್ಮಲ್ಲಿ ಧರ್ಮ ಮತ್ತು ಲೌಕಿಕಗಳ ತಿಕ್ಕಾಟಕ್ಕೆ ಆಸ್ಪದವೇ ದೊರಕಲಿಲ್ಲ.

ನಮ್ಮದರ ವಿರುದ್ಧವಾದ ಅನುಭವವು ಮಧ್ಯಯುಗೀನ ಯುರೋಪದಲ್ಲಿ ತಲೆ ಎತ್ತಿತ್ತು. ಅಲ್ಲಿ ಅರಸೊತ್ತಿಗೆಗೆ ಒಂದೆಡೆ ಧರ್ಮದಿಂದ ಆಹ್ವಾನವಿದ್ದರೆ ಇನ್ನೊಂದೆಡೆ ಲೌಕಿಕದಲ್ಲಿ ಇನ್ನೊಂದು ಆಹ್ವಾನವಿದ್ದಿತು. ಇತಿಹಾಸವನ್ನು (ಬರ್ನಾರ್ಡ್‌ಶಾ ಇವರ ಸೇಂಟ ಜೋನ್ ಎಂಬ ನಾಟಕವನ್ನು ಕೂಡ) ಓದಿದವರು ಇದನ್ನು ತಿಳಿದುಕೊಳ್ಳಬಹುದು. ಧರ್ಮಗುರುವಾದ ಪೋಪನು ತನ್ನ ಸರ್ವಾಧಿಪತ್ಯವನ್ನು ಬಿಡಲೊಪ್ಪಲಿಲ್ಲ; ಇತ್ತ ಧನವಂತಿಕೆಯ ಚಿಕ್ಕಪುಟ್ಟ ಜಾಗಿರಿಯ ದೊರೆಗಳು (Lords) ಅರಸನ ಸರ್ವಾಧಿಪತ್ಯವನ್ನು ಒಪ್ಪುವಂತಿಲ್ಲ. ಈ ತಿಕ್ಕಾಟದಲ್ಲಿ ಅರಸರು ಜಾಣತನದಿಂದ ಧಾರ್ಮಿಕ ಮತ್ತು ಲೌಕಿಕ ಭೇದವನ್ನು ಕಲ್ಪಿಸಿ ಲೌಕಿಕದ ದೃಷ್ಟಿಯಿಂದ ಜಾಗಿರಿಯ ದೊರೆಗಳನ್ನು ಪೋಪನ ವಿರುದ್ಧ ತಮ್ಮೊಟ್ಟಿಗೆ ಒಲಿಸಿಕೊಂಡರು. ಕೊನೆಗೆ ಪ್ರಬಲರಾದ ಅರಸರು ಕೆಲವರು (ಉದಾ:— ಇಂಗ್ಲಂಡದ ೮ ನೆಯ ಹೆನ್ರಿ) ತಮ್ಮ ರಾಜ್ಯದಲ್ಲಿ ಧಾರ್ಮಿಕ ವಿಷಯದಲ್ಲೂ ತಾನೇ-ಅರಸನೆ- ಅಧಿಪತಿ ಎಂದು ಬಲಗೊಂಡರು.

ಯಾವ ರಾಜ್ಯದಲ್ಲಿ ಅರಸೊತ್ತಿಗೆಗೂ ಧಾರ್ಮಿಕ ಆಧಿಪತ್ಯಕ್ಕೂ ಸಂಬಂಧವಿರುವುದೊ ಅಲ್ಲಿ ಒಂದು ತೊಡರು ತಪ್ಪಲಿಲ್ಲ, ತಪ್ಪುವಂತಿಲ್ಲ. ನಮ್ಮ ಪ್ರಾಚೀನ ವ್ಯವಸ್ಥೆಯಲ್ಲಿ ರಾಜನು "ವರ್ಣಾಶ್ರಮ" ವ್ಯವಸ್ಥೆಯ ರಕ್ಷಕನಾಗಿದ್ದನು; ವರ್ಣಸಂಕರವಾಗದಂತೆ ನೋಡುವುದೂ ಅವನ ಹೊಣೆಯಾಗಿದ್ದಿತು. ಈ ಹೊಣೆಗಾಗಿ ರಾಜನಲ್ಲಿ ಒಂದು ದೃಷ್ಟಿ ವಿಶಾಲತೆ ಬೇಕಾಗುತ್ತಿತ್ತು. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರನ್ನು ನಿಷ್ಪಕ್ಷಪಾತದಿಂದ ನೋಡಿಕೊಳ್ಳುವ ಅರಸೊತ್ತಿಗೆಗೆ ಮುಂದೆ ಬ್ರಾಹ್ಮಣ (ವೈದಿಕ)-ಬೌದ್ಧ-ಜೈನ ಮೊದಲಾದವರನ್ನೂ ನಿಷ್ಪಕ್ಷಪಾತದಿಂದಲೆ ನೋಡುವುದು "ಧರ್ಮ" ಎನ್ನಿಸಿತು, ಸುಲಭ ಮತ್ತು ಸಹಜವೂ ಆಯಿತು. ಪ್ರಜೆಗಳ ಧರ್ಮವೆ ರಾಜಧರ್ಮವಾಯಿತಲ್ಲದೆ ರಾಜನಿಗೆ "ರಾಜ" ಎಂದೇ ವಿಶಿಷ್ಟ ಧರ್ಮವಿರುತ್ತಿರಲಿಲ್ಲ. ರಾಜ್ಯದಲ್ಲಿ ಭಿನ್ನ ಧರ್ಮಗಳನ್ನು ಪಾಲಿಸುವ ಪ್ರಜೆಗಳು ರಾಜನಿಗೆ ಸಹಜ ಎನ್ನಿಸಿದರೆ ಅಶೋಕ ಇಲ್ಲವೆ ಹರ್ಷನಂತಹ ಸಮ್ರಾಟರು ತಮ್ಮ ವೈಯಕ್ತಿಕ ಪಂಥವನ್ನು ಬದಲಾಯಿಸಿದ್ದೂ ಪ್ರಜೆಗಳಿಗೆ ಆಶ್ಚರ್ಯದವೆನ್ನಿಸಲಿಲ್ಲ. ಆದರೆ ಯುರೋಪದಲ್ಲಿ ಮಾತ್ರ ಬೇರೆ ತರದ ಬೆಳೆವಣಿಗೆಯನ್ನು ನಾವು ನೋಡುತ್ತೇವೆ.

### ಯುರೋಪಿನಲ್ಲಿ

ಯುರೋಪದ ರಾಷ್ಟ್ರಗಳ ಪರಿಸ್ಥಿತಿಯೆ ಆ ತರಹದ ಬೆಳವಣಿಗೆಗೆ ಕಾರಣ. ಧರ್ಮಗುರು ಮತ್ತು ದೇಶದ ದೊರೆ ಇವರಲ್ಲಿ ಘರ್ಷಣೆ ಹುಟ್ಟಿತೆಂದು ಮೇಲೆ ಹೇಳಿದೆಯಷ್ಟೇ? ಯುರೋಪದಲ್ಲಿ ಅನೇಕ ರಾಷ್ಟ್ರಗಳಿಗೆ ಧರ್ಮಗುರು ಪೋಪನೊಬ್ಬನೆ; ಆದರೆ ರಾಷ್ಟ್ರರಾಷ್ಟ್ರಕ್ಕೆ ಅರಸು ಮಾತ್ರ ಬೇರೆ. ಈ ಪರಿಸ್ಥಿತಿಯಲ್ಲಿ ರಾಜನು ತನ್ನ ಧಾರ್ಮಿಕ ಅಧಿಪತ್ಯವನ್ನು ಸಾರಿದನೆಂದರೆ ಪ್ರಜೆಗಳಿಗೆ ಅದೊಂದು ದೊಡ್ಡ ಸಮಸ್ಯೆಯಾಗುತ್ತಿತ್ತು. ರಾಜನ ಧಾರ್ಮಿಕ ಅಧಿಪತ್ಯವನ್ನು ಒಪ್ಪಿಕೊಳ್ಳಬೇಕೆ? ಇಲ್ಲವೆ ಪೋಪನ ಧಾರ್ಮಿಕ ಅಧಿಪತ್ಯವನ್ನು ಒಪ್ಪಿಕೊಳ್ಳಬೇಕೆ? ಒಂದನ್ನೊಪ್ಪಿದರೆ ಇನ್ನೊಂದರ ದ್ರೋಹಕ್ಕೆ ಎರವಾಗಬೇಕಾಗುತ್ತಿತ್ತು. ಅಂತಹ ಪರಿಸ್ಥಿತಿಯೂ ಉದ್ಭವಿಸಿತು. ಪೋಪನ ಆಧಿಪತ್ಯವನ್ನು ಒಪ್ಪಿಕೊಳ್ಳುವ ಇಂಗ್ಲಂಡದ ಕ್ಯಾಥಲಿಕ್ ಅನುಯಾಯಿಗಳಿಗೆ ರಾಜನಿಂದ ಹಿಂಸೆ ತಪ್ಪದಾಯಿತು. ಪೋಪನ ಅಧಿಪತ್ಯವನ್ನೊಪ್ಪುವ ಫ್ರಾನ್ಸದ ರಾಜನು ಪೋಪನಿಗೆ ಇದಿರಾಗಿ ನಿಂತ ಫ್ರೆಂಚ "ಪ್ರೊಟೆಸ್ಟಂಟ್" (ಹ್ಯೂಜೆನೊ)ರನ್ನು ಹಿಂಸಿಸಿದನು. ಹೀಗೆ ಎಲ್ಲೆಲ್ಲಿ ರಾಜನಿಗೆ ಧರ್ಮ, ಅರಸೊತ್ತಿಗೆಯ ಧರ್ಮ (State religion) ಪ್ರಸ್ಥಾಪಿತವಾಯಿತೊ ಅಲ್ಲಿ ಧಾರ್ಮಿಕ ಹಿಂಸೆ (persecution) ಅನಿವಾರ್ಯವಾಯಿತು.

### ಪ್ರಜಾಪ್ರಭುತ್ವ ಮತ್ತು ಧರ್ಮ

ಮೇಲಿನ ವಿವೇಚನೆಯಿಂದ ನನ್ನ ಮೊದಲ ಪ್ರಶ್ನೆಗೆ ಉತ್ತರವನ್ನು ಕೊಡಲು ಸುಲಭವಾಗುವುದು. ದೇಶದ ರಾಜಕೀಯ ಅಧಿಪತ್ಯಕ್ಕೆ, ಅರಸೊತ್ತಿಗೆಯ ಅಧಿಕಾರ (State) ಕ್ಕೆ ತನ್ನದೇ ಒಂದು ಧರ್ಮವಿದ್ದರೆ ಅದು ಅಧಿಕೃತ ಧರ್ಮವೆನ್ನಿಸುವುದು; ಆ ಧರ್ಮನಿಷ್ಠೆಯೂ ರಾಜ (ಇಲ್ಲವೆ ದೇಶ) ನಿಷ್ಠೆ ಎನ್ನಿಸಬಹುದು; ಅದನ್ನೊಪ್ಪದಿರುವುದು ದೇಶದ್ರೋಹವೆನ್ನಿಸಬಹುದು, ಕನಿಷ್ಠಪಕ್ಷಕ್ಕೆ ಅದನ್ನೆ ಒಪ್ಪಿಕೊಳ್ಳುವುದೊಂದು ಒತ್ತಾಯವಾಗುವುದು ನಾಗರಕನಿಗೆ. ಇಲ್ಲಿ ಯಾರಾದರೂ ಒಂದು ಪ್ರಶ್ನೆಯನ್ನು ಕೇಳಬಹುದು. ರಾಜನ ಮತ್ತು ಪ್ರಜೆಗಳ ಧರ್ಮ ಒಂದೇ ಆದಲ್ಲಿ ದೇಶಕ್ಕೆ ಹಿತವಲ್ಲವೆ? ನಿಸ್ಸಂದೇಹವಾಗಿ ಹಿತವಾಗುವುದು, ಒಂದೇ ಇದ್ದರೆ ಮಾತ್ರ. ಆದರೆ ಧರ್ಮವು ವಿಚಾರಮಾಡದವರಿಗೆ ಸಂಪ್ರದಾಯದ ವಿಷಯ; ವಿಚಾರವಂತರಿಗೆ ವೈಯಕ್ತಿಕ ವಿಷಯ. ಇದೇ ಮೊದಲ ತೊಂದರೆ. ಜೊತೆಗೆ ಮನುಷ್ಯ ಸ್ವಭಾವದ ಸೃಷ್ಟಿಸಹಜ ಭಿನ್ನತೆ. ಹೀಗಾಗಿ ಎಲ್ಲರ ಧರ್ಮ ಒಂದೇ ಇರುವುದು ಶಕ್ಯವೆ ಇಲ್ಲ. ರಾಜನಿಗೆ ಅಧಿಕಾರವಿದ್ದುದರಿಂದ ವಿರೋಧಿಗಳನ್ನು ಅವನು ಹಿಂಸಿಸಬಹುದು, ಹೆದರಿಸಬಹುದು. ಅಂತೂ ಧರ್ಮವನ್ನು ಅಧಿಕಾರದಿಂದ ನೆಲೆಗೊಳಿಸುವುದಾದರೆ ಅದು ವ್ಯಕ್ತಿಯ ವಿಚಾರಸ್ವಾತಂತ್ರ್ಯಕ್ಕೆ ಒಂದು ಗದೆಯಾಗಿದೆ. ಪ್ರಜಾಪ್ರಭುತ್ವದಲ್ಲಿ ವ್ಯಕ್ತಿಯ ವಿಚಾರಸ್ವಾತಂತ್ರ್ಯಕ್ಕೆ ಯಾವ ಆತಂಕವೂ ಇರಕೂಡದಲ್ಲವೆ? ಆದ್ದರಿಂದ ಪ್ರಜಾಪ್ರಭುತ್ವದಲ್ಲಿ ಅರಸೊತ್ತಿಗೆಯ ಅಧಿಕಾರಕ್ಕೆ ಧರ್ಮವೂ ಇರಕೂಡದು.

ಈಗ ಇನ್ನೂ ಒಂದು ಪ್ರಶ್ನೆ ಬರಬಹುದಾಗಿದೆ. ಭಾರತವು ಪ್ರಜಾಪ್ರಭುತ್ವದ ರಾಜ್ಯ, ನಾಗರಕನಿಗೆ ವಿಚಾರಸ್ವಾತಂತ್ರ್ಯವಿದೆ ಎಂದು ಘಟನೆಯ ಪೀಠಿಕಾಘೋಷಣೆ (Objective Resolution) ಯಲ್ಲಿ ಸ್ಪಷ್ಟವಾಗಿ ಹೇಳಿದೆಯಲ್ಲ? ಅಷ್ಟು ಹೇಳಿದ ಮೇಲೆ ಮತ್ತೆ ನಮ್ಮದು ಲೌಕಿಕ ಇಲ್ಲವೆ ಧರ್ಮೇತರನಿಷ್ಠ ರಾಜ್ಯ ಎಂದು ಹೇಳುವುದು ಪುನರುಕ್ತಿ ಇಲ್ಲವೆ ನಿರರ್ಥಕವಲ್ಲವೆ? ಈ ಮಾತು ನಿಜ. ಆದರೆ ಪುನರುಕ್ತಿಯಾದರು ಕೂಡ ಹೇಳಲೇಬೇಕಾದುದಕ್ಕೆ ಒಂದೆರಡು ವಿಶಿಷ್ಟ ಕಾರಣಗಳಿವೆ. ಆ ಕಾರಣಗಳನ್ನೊಪ್ಪಿ ಈ ಮಾತನ್ನು ಹೇಳಿ ನಮ್ಮ ಮುಂದಾಳುಗಳು ಮುತ್ಸದ್ದಿತನವನ್ನು ತೋರಿಸಿದ್ದಾರೆನ್ನಬಹುದು. ಮೊದಲ ಕಾರಣವೆಂದರೆ, ದೇಶದ ವಿಭಜನೆಯ ಪರಿಸ್ಥಿತಿ.

ನಾವು ಎಷ್ಟೇ ಪರಿಯಿಂದ ಯತ್ನಿಸಿದರೂ ದೇಶದ ವಿಚ್ಛೇದನೆ ಯಾಯಿತು. ಅದೂ ಧರ್ಮದ ಭೇದದ ಮೇಲೆ. ಪಾಕಿಸ್ತಾನವು ಇಸ್ಲಾಂ ಧರ್ಮದ ರಾಷ್ಟ್ರವಾಯಿತು. ಇನ್ನು ನಮ್ಮದೂ ಹಿಂದುಗಳ ರಾಷ್ಟ್ರವಾಯಿತೆನ್ನಬಹುದೆ? ಕಾಂಗ್ರೆಸದ ದೃಷ್ಟಿಯಿಂದ ಆ ಸಂಭವ ಶಕ್ಯವೆ ಇಲ್ಲ ಎನ್ನಬಹುದು. ಆದರೆ ಸ್ವತಂತ್ರ ಹಿಂದುಸ್ತಾನದಲ್ಲಿ ಇದು ವರೆಗಿನ ಕಾಂಗ್ರೆಸೇ ಶಾಶ್ವತವಾಗಿ ಮತ್ತು ಬಹುಮತದ ಪಕ್ಷವಾಗಿ ಉಳಿಯುವಂತಿಲ್ಲವಲ್ಲ? ಇದಲ್ಲದೆ, ಬಲವಾಗಿ ಸಂಘಟಿತವಾದ ಹಿಂದು ಮಹಾಸಭೆ ಮತ್ತು ರಾಷ್ಟ್ರೀಯ ಸ್ವಯಂಸೇವಕ ಸಂಘ ಎಂಬೆರಡು ಪಕ್ಷಗಳು ಹಿಂದುಗಳಿಗಾಗಿಯೆ ಹಿಂದುಸ್ತಾನ (ಎಂದರೆ ದೇಶಕ್ಕೆ, ಅರ ಸೊತ್ತಿಗೆಯ ಅಧಿಕಾರಕ್ಕೆ ಒಂದು ಧರ್ಮ (State religion) ಇದೆ ಎಂದಂತೆ) ಎಂದು ಸಾಧಿಸುತ್ತಲಿವೆ. ಈ ಕಾರಣಗಳಿಗಾಗಿ ನಮ್ಮ ದೇಶಕ್ಕೆ ಅಧಿಕೃತ ಧರ್ಮವಿಲ್ಲ, ನಮ್ಮ ದೇಶದ ರಾಜ್ಯಾಧಿಕಾರವು ಲೌಕಿಕನಿಷ್ಠ ಎಂದು ಹೇಳುವುದು ಅಗತ್ಯವಾಯಿತು.

### ಲೌಕಿಕತೆಯ ಸಾರ್ಥಕ್ಯ

ನಮ್ಮದು ಲೌಕಿಕನಿಷ್ಠ ರಾಜ್ಯ ಎಂದು ಹೇಳಿದ ಮಾತ್ರಕ್ಕೆ ಘಟನೆಯ ದೃಷ್ಟಿಯಿಂದಾಗಲಿ ಭವಿತವ್ಯದಲ್ಲಾಗಲಿ ಆ ಮಾತಿಗೆ ಮಹತ್ವವಿದೆಯೆ-ಎಂಬುದನ್ನೂ ನಾವು ನೋಡಲೇಬೇಕಾಗುವದು. ಹಾಗೆ ಮಹತ್ವವಿಲ್ಲದಿದ್ದಲ್ಲಿ ಆ ಮಾತನ್ನು ಹೇಳಿ, ಹೇಳಿದ್ದನ್ನು ನಂಬಿ ಉಪಯೋಗವೇನು? ಮೊದಲಾಗಿ, ನಮ್ಮದು. ಲೌಕಿಕನಿಷ್ಠ ರಾಷ್ಟ್ರ ಎಂದೊಡನೆ ಪ್ರತಿಯೊಬ್ಬ ನಾಗರಕನಿಗೆ ಧರ್ಮಸ್ವಾತಂತ್ರ್ಯವಿದೆ ಎಂದು ಒಪ್ಪಿದಂತಾಯಿತು, ಅವನ ವಿಚಾರಸ್ವಾತಂತ್ರ್ಯಕ್ಕೆ ಮನ್ನಣೆಯನ್ನು ಕೊಟ್ಟಂತಾಯಿತು. ಇದಲ್ಲದೆ ಧರ್ಮದ ತಳಹದಿಯ ಮೇಲೆ ಯಾವ ರಾಷ್ಟ್ರೀಯ ಸಂಘಟನೆಯನ್ನೂ ನಮ್ಮ ಸರಕಾರವಾಗಲಿ ನಮ್ಮ ಸಂಯುಕ್ತ ನ್ಯಾಯಸಭೆಯಾಗಲಿ ಒಪ್ಪುವಂತಿಲ್ಲ. ಇವೆರಡು ಕಾರಣಗಳಿಗಾಗಿ ಹಿಂದುಗಳಲ್ಲದವರು ಕೂಡ ನಿಶ್ಚಿಂತರಾಗಿ ನಮ್ಮ ದೇಶದ ನಾಗರಕರಾಗಿ ಉಳಿಯಬಹುದು. ಉದ್ಯೋಗ–ವ್ಯವಹಾರಗಳಲ್ಲಿ ಮುಂದಾದ ಪಾರ್ಸಿಗಳಿದ್ದಾರೆ; ಯುದ್ಧವೀರರಾದ ಶೀಖರಿದ್ದಾರೆ; ಬುದ್ಧಿಕುಶಲರಾದ ದೇಶೀಯ ಕ್ರಿಶ್ಚನ್‌ರಿದ್ದಾರೆ. ಈ ಸಂಪತ್ತನ್ನು ಭಾರತವು — ಲೌಕಿಕನಿಷ್ಠ ರಾಷ್ಟ್ರವಾದಲ್ಲಿ —ಉಳಿಸಿ ಬೆಳೆಯಿಸಿಕೊಳ್ಳಬಹುದು. ಸಾವಿರಾರು ಮುಸ್ಲಿಮರು ಇನ್ನೂ ಇಲ್ಲಿಯೇ ನೆಲೆಸಿದ್ದಾರೆ. ಅವರನ್ನು ಭಾರತಕ್ಕೆ ನಿಷ್ಠರಾಗುವಂತೆ ಒರೆಗೆ ಹಚ್ಚಿದಂತಾಗುವದು. ಇವೆಲ್ಲಕ್ಕೂ ಮಿಗಿಲಾಗಿ ಸಾಂಸ್ಕೃತಿಕ ದೃಷ್ಟಿಯಿಂದ ಭಾರತವು ಪ್ರಗತಿಪರ ರಾಷ್ಟ್ರವಾಗಿದೆ ಎಂದು ಜಗತ್ತಿಗೆ ಸಾರಿದಂತಾಗುವುದು. ಹೀಗೆ ಘಟನೆಯ ದೃಷ್ಟಿಯಿಂದ ನಾಗರಕರ ವಿಚಾರಸ್ವಾತಂತ್ರ್ಯಕ್ಕೆ, ಭವಿತವ್ಯದಲ್ಲಿ ದೇಶದ ಉತ್ಕರ್ಷಕ್ಕೆ ನಮ್ಮ ಲೌಕಿಕರಾಷ್ಟ್ರತೆಯು ಪೋಷಕವಾಗಿದೆ ಎಂದು ಅಭಿಮಾನದಿಂದ ಹೇಳಬಹುದು.

### ಮುಂದೇನು ?

ಕೊನೆಯದಾಗಿ, ಇಂದಿನ ಈ ನಮ್ಮ ಘೋಷಣೆಯು ಆಚರಣೆಯಲ್ಲಿ ಯಶಸ್ವಿಯಾಗಬಹುದೆ? ಈ ಪ್ರಶ್ನೆಗೆ ನಿಚ್ಚಳವಾದ ಉತ್ತರವನ್ನು ಕೊಡುವುದು ಜ್ಯೋತಿಷಿಗೆ ಇಲ್ಲವೆ ಮಾನಸಶಾಸ್ತ್ರತಜ್ಞನಿಗೆ ಶಕ್ಯವೇನೊ! ನನ್ನಂತಹನು ಹೇಳುವುದಾದರೆ, ಈ ಘೋಷಣೆ ಆಚರಣೆಯಲ್ಲಿ ಯಶಸ್ವಿಯಾಗಬೇಕು, ಆಗುವಂತೆ ವಿಚಾರವಂತರೆಲ್ಲರೂ ಯತ್ನಿಸಲೇಬೇಕು; ಯಾಕಂದರೆ, ಇದು ಯಶಸ್ವಿಯಾದಲ್ಲಿ ಸ್ವತಂತ್ರ ಭಾರತಕ್ಕೆ ಉತ್ಕರ್ಷವಿದೆ, ಇಲ್ಲದಲ್ಲಿ ಸ್ವಾತಂತ್ರ್ಯವು ಸುಟ್ಟು ಬೂದಿಯಾಗುವುದರಲ್ಲಿ ಸಂದೇಹವಿಲ್ಲ. ಇಂದು ನಮ್ಮ ದೇಶದಲ್ಲಿದ್ದ ಸಂಕುಚಿತ ಜಾತಿನಿಷ್ಠೆಯನ್ನು ನೆನೆದರೆ ಭವಿತವ್ಯಕ್ಕಾಗಿ ಮೈನಡುಗುವುದು; ಅದೇ ಕಾರಣಕ್ಕಾಗಿ ಇದನ್ನು ಯಶಸ್ವಿಯಾಗಿ ಮಾಡಲೇಬೇಕು ಎಂದು ಹುಮ್ಮಸವು ಏಳುವುದು. ಶಿಕ್ಷಣ, ವ್ಯವಹಾರ, ಪ್ರವಾಸ ಮುಂತಾದುವುಗಳ ಅಭಾವಕ್ಕಾಗಿ ಇಂತಹ ಸಂಕುಚಿತ ನಿಷ್ಠೆಗಳು ಇನ್ನೂ ನಮ್ಮಲ್ಲಿ ಉಳಿದಿವೆ ಎಂದಾಗ ಇವನ್ನು ಹೊಡೆದೋಡಿಸುವುದು ಸುಲಭ ಎನ್ನಿಸುವುದು; ಚುನಾವಣೆಗಳಲ್ಲೂ ಜಾತೀಯತೆ ಇದೆ ಎಂಬುದನ್ನು ಕಂಡಾಗ ಇದನ್ನು ಹೊಡೆದೋಡಿಸುವುದು ಕಷ್ಟ ಎನ್ನಿಸುವುದು. ಒಂದೇ ಒಂದು ಆಶಾಕಿರಣವಿದೆ. ಇಂದು ನಮ್ಮದು ಸ್ವತಂತ್ರ ರಾಷ್ಟ್ರ. ಈ ಮಾತಿಗಾಗಿ ಮತ್ತು ಇದರ ಪರಿಣಾಮವಾಗಿ ನಮ್ಮಲ್ಲಿ ದೇಶಾಭಿಮಾನ ಜಾಗೃತವಾದರೆ ಆಗ ಮಿಕ್ಕ ಸಂಕುಚಿತ ಅಭಿಮಾನಗಳು ಅಡಗಬಹುದು. ದೇಶಾಭಿಮಾನ ಜಾಗೃತವಾಗಿ ಬೆಳೆಯುವಂತೆ ದೇಶದ ಉತ್ಕರ್ಷವನ್ನು ನಮ್ಮ ಮುಂದಾಳುಗಳು ಸಾಧಿಸಬೇಕು. ಧರ್ಮದ ಅಭಿಮಾನವು ಅಂಧಾಭಿಮಾನವು; ಅದಕ್ಕೆ ಸಯುಕ್ತಿಕ ಕಾರಣಗಳಿಲ್ಲ. ದೇಶದ ಅಭಿಮಾನವು ಸಕಾರಣವಾಗುವಂತೆ ಯತ್ನಿಸಿದಲ್ಲಿ ಮಾತ್ರ ಭಾರತವು ಘೋಷಣೆಯಲ್ಲಿ ಹೇಳಿದಂತೆ ಆಚರಣೆಯಲ್ಲಿಯೂ ಲೌಕಿಕ ಇಲ್ಲವೆ ಧರ್ಮೇತರನಿಷ್ಠ ರಾಜ್ಯವಾಗಿ ಉಳಿಯುವದು.



# ಎಮ್ಮೆ ಮೀಸೆ ಮೇದದ್ದು!

ಲೇಖಕ: ಎಸ್. ಜಿ. ಬೈಲೂರ, ಗೋಕರ್ಣ

### ( ಅ )

**ಮೊಟ್ಟಮೊದಲಿನ ಅಗಸ್ಟ ೧೫!**

ಆ ದಿವಸದ ಒಂದು ಘಟನೆಯಿಂದ ಜಗತ್ತೇ ಬೆರಗುಗೊಂಡಿತಾದರೆ ಇನ್ನೊಂದರಿಂದ ಕರಿಕೊಪ್ಪವು ದಿಗ್ಭ್ರಾಂತವಾಯಿತು. ಮೊದಲೇ ನಿರೀಕ್ಷಿಸಿದಂತೆ ಬೆಳಿಗ್ಗೆ ೮ ಗಂಟೆಗೆ ಬಿಡ್ಜಿಬೈಲಿನಲ್ಲಿ ನಮ್ಮ ರಾಷ್ಟ್ರ ಧ್ವಜವು ಸಂಭ್ರಮದಿಂದ ಗಗನಕ್ಕೆ ಏರಿತು. ಅದೇ ಸಂಜೆ ೮ ಗಂಟೆಗೆ ಚಿನಿವಾರ ಪೇಟೆಯಲ್ಲಿಯ ಒಂದು ಮನೆಯಲ್ಲಿ ಅನಿರೀಕ್ಷಿತವಾಗಿ ಹರಿಯಪ್ಪನ ಹುರಿಮೀಸೆಯು ಸದ್ದಿಲ್ಲದೆ ಭೂಮಿಗೆ ಇಳಿಯಿತು! ಮೀಸೆ ಇಳಿಯುವದೇನು ಸಾಮಾನ್ಯ ವಿಷಯವೆ? . . - ಅದರಲ್ಲೂ ಹುರಿಮೀಸೆ? . . . ಅದೂ ಹರಿಯಪ್ಪನದು? ಆದರೂ ಹಾಗಾಗೇ ಬಿಟ್ಟಿತಲ್ಲ!

ಈ ದುರ್ಘಟನೆಗೆ ಕಾರಣವಾದರೂ ಏನಿರಬಹುದು? . . . ಅದನ್ನೇ ಹೇಳುತ್ತೇನೆ ಕೇಳಿ.

### ( ಆ )

ಹರಿಯಪ್ಪ ಆ ದಿವಸ ಒಳ್ಳೇ ಹಿಗ್ಗಿನಲ್ಲಿದ್ದುದು ಆಕಸ್ಮಿಕವಾಗಿ ನೋಡುವವರಿಗೂ ಕಣ್ಣಿನಾಟುವಂತಿತ್ತು.

ಹಿಗ್ಗದೆ ಏನು! ಕುಂದಾಪುರದಾಚೆಯ ಆ ಊರೆಲ್ಲಿ, ಹರಿಯಪ್ಪ ನಿರುವ ಕರಿಕೊಪ್ಪವೆಲ್ಲಿ! ಆದರೂ ಅಲ್ಲಿಯವರಾರೋ ಓರ್ವ ಸದ್ಗೃಹಸ್ಥರು ಬೈಲುಸೀಮೆಯ ಒಂದು ಝುಕಾಸ ಎಮ್ಮೆ ಖರೀದಿ ಮಾಡುವವರಿದ್ದು, ಆ ವಿಷಯದಲ್ಲಿ ಹರಿಯಪ್ಪನಿಗೆ ಅವನ ಸಹಾಯ ವನ್ನು ಕೋರುವ ಒಂದು ವಿನಂತಿಪತ್ರವನ್ನು ಅವರ ಪತಿಯಿಂದ ಇನ್ನೊಬ್ಬರು ಬರೆದಿದ್ದರು.

ಆಸಾಮಿಯಾದರೂ ಅಂಥ ಇಂಥಹದಲ್ಲ! ಅವರ ದೊಡ್ಡಸ್ತಿಕೆ ಯನ್ನು ಬರೇ ಆ ಪತ್ರದಿಂದಲೇ ಕಂಡುಹಿಡಿಯುವಂತಿತ್ತು.

ಒಂದು, ಆ ಪತ್ರದ ಮೊದಲನೇ ಪುಟದ ಶಿರೋಭಾಗದಲ್ಲಿ

"ಗ್ರಮ್ ೨೭೬೯೮] [ಫೋನ ೭೬೧೩
**ಕಲ್ಪನಾ ಟ್ರೇಡರ್ಸ ಎಂಡ್ ಡಿಸ್ಟ್ರಿಬ್ಯೂಟರ್ಸ**
"ಹೆಡ್ ಆಫೀಸ: x"

ಎಂತ ದೊಡ್ಡದೊಡ್ಡ ಅಕ್ಷರಗಳಲ್ಲಿ ಒಂದು ದೊಡ್ಡ ಕಂಪನಿಯ ಹೆಸರು ಛಾಪಿಸಿತ್ತು.

ಎರಡು, ಅದನ್ನು ಅವರು ತಮ್ಮ ಕೈಯಿಂದಲೇ ಬರೆಯದೆ ಇನ್ನೊಬ್ಬರಿಂದ ಬರೆಸಿಕೊಂಡಿದ್ದರು.

ಮೂರು, ಬರೆದವರು ಅವರನ್ನು ಹಲವಾರು ಸಲ "ನಮ್ಮ ರಾಯರು" ಅಂತ ಕರೆದಿದ್ದರು. ಅಂದ ಮೇಲೆ ಬರೆದವರು ಆ ಮಹಾರಥಿಗಳ ಕಾರಕೂನ ಇಲ್ಲವೆ ಖಾಸಗಿ ಕಾರ್ಯದರ್ಶಿ ಇರಲೇಬೇಕು.

ನಾಲ್ಕು "ನೀವು ಈ ಕಾರ್ಯಕೈಕೊಳ್ಳಲು ಒಪ್ಪಿಗೆಯಿತ್ತರೆ.... ನಿಮ್ಮಂಥ ಎಷ್ಟೋ ಮಂದಿಯ ಹತ್ತಿರ ಕೊಡಕೊಳ್ಳುವ ವ್ಯವಹಾರವುಳ್ಳ ನಮ್ಮ ರಾಯರು ಮೆಚ್ಚಿದರೆ ನಿಮಗೆ ನಿಮ್ಮ ಕಲ್ಪನೆಯ ಹೊರಗೆ ಪ್ರತಿ ಫಲವನ್ನು ಕೊಡದೆ ಇರರು," ಎಂತ ಅಭಿಪ್ರಾಯಪಟ್ಟಿದ್ದರು.

ಇವಷ್ಟರ ಮೇಲಿಂದಲೇ ಆ ರಾಯರ ವ್ಯವಹಾರದ ವ್ಯಾಪ್ತಿಹಾಗೂ ಪ್ರಾಪ್ತಿ ದೊಡ್ಡದಿರಬಹುದೆಂದು ಸಹಜವಾಗಿ ಊಹಿಸುವಂತಿತ್ತು. ಒಂದು ವೇಳೆ ಸಂಶಯ ತಾಳಿದ್ದೇ ಆದರೆ ಅದರ ನಿರಸನಮಾಡುವಂತಹ ಕೆಲವು ದೊಡ್ಡ ದೊಡ್ಡ ಅಂಕೆಸಂಖ್ಯೆಗಳು ಟಿಪ್ಪಣಿಗಳು ಪತ್ರದ ಕೊನೆಯ ಪುಟದ ಅಂಚಿನಲ್ಲಿ ಸ್ವಲ್ಪ ಅಳಿಸಿದಂತಾಗಿ ಮಸಮುಸಕಾಗಿ ಕಾಣಿಸುತ್ತಿದ್ದು, ಅವು ಕೆಳಗಿನಂತಿದ್ದುವು:—

| | | | |
|---|---|---|---|
| ರಾಯಚೂರ ಬ್ರ್ಯಾಂಚ್ | ರೂ. | | ೨೮೦೦೦—೬—೮ |
| ರಾಣೆಬೆನ್ನೂರ | ,, | ,, | ೧೯೭೩೫-೧೧—೪ |
| ತುಮಕೂರ | ,, | ,, | ೪೮೬೯--೭—೩ |
| ಉಡುಪಿ | ,, | ,, | ೩೩೭೧೬—೦—೬ |
| ಇತರ | ,, | ,, | ೧೭೨೯೦೮-೧೪—೦ |

ಕೆಲಸದ ಗಲಾಟೆಯಲ್ಲಿ ಕೈಗೆ ಸಿಕ್ಕಿದ್ದರ ಮೇಲೆ ಪತ್ರ ಬರೆದಿರ ಬೇಕೆಂಬುದು ಸುಸ್ಪಷ್ಟವಿತ್ತು.

ಐದು, "ನಮ್ಮ ರಾಯರ ಶರೀರಪ್ರಕೃತಿ ಸ್ವಲ್ಪ ನಾಜೂಕು ಇಂದಿಗೆ ಎಷ್ಟೋ ದಿನಗಳಿಂದ ಉಬ್ಬಸ-ವಾತ ವಿಕಾರದಿಂದ ನರಳು ತ್ತಿದ್ದ ಅವರಿಗೆ ಇತ್ತೀಚೆಗೆ ವಾಸಿಯಾದಂತಿದೆ. ಆದರೂ ಅವರಲ್ಲಿ ಮಧುಮೇಹದ ಮುಂಚಿನ ಲಕ್ಷಣಗಳು ಈಗೀಗ ಕಾಣಹತ್ತಿವೆಯೆಂತ ಅವರ ಮನೆತನದ ವೈದ್ಯರು ಅಭಿಪ್ರಾಯಪಡುತ್ತಾರೆ. ಕಾರಣ ಅವರ ಅಲ್ಲಿಯ ಒಂದೆರಡು ದಿನಸದ ಮುಕ್ಕಾಮಿನಲ್ಲಿ ಏನೂ ತೊಂದರೆಯಾಗ ದಂತೆ ನೋಡಿಕೊಳ್ಳುವಿರಾಗಿ ನಂಬಿದ್ದೇನೆ. ಖರ್ಚಿನ ಪ್ರಶ್ನೆಯೇ ಇಲ್ಲವೆಂಬುದನ್ನು ಬೇರೆ ಒತ್ತಿಹೇಳುವೆ. ..............."

ಭಲೇ, ಇದಕ್ಕೂ ಹೆಚ್ಚು ಇನ್ನೇನು ಬೇಕು! ಅವರು ಐಶ್ವರ್ಯ ವಂತರೆಂಬುದಕ್ಕೆ ಇನ್ನಾವ ಪ್ರಮಾಣ ಬೇಕಾಗಿದೆ! ಎಷ್ಟೋ ವರ್ಷ

ಗಳವರೆಗೆ ನಡೆದುಬಂದ ಆ ಉಬ್ಬಸವೇನು (ಹಾಗನ್ನುವಾಗ ಹರಿಯಪ್ಪನಿಗೆ ಹರ್ಷವಾಯುವಿನಿಂದ ಉಬ್ಬಸವಾದಂತಾದುದನ್ನು ಸಮೀಪದಲ್ಲಿದ್ದವರು ಕಣ್ಣಾರೆ ಕಾಣಬಹುದಾಗಿತ್ತು, ಕಿವಿಯಾರೆ ಕೇಳಬಹುದಾಗಿತ್ತು!), ಆ ಮಧುಮೇಹವು ತಲೆದೋರುವದೇನು, ಆ ಮನೆತನದ ವೈದ್ಯರಿದ್ದಾರೆಂದರೇನು! ಉಬ್ಬಸ ವಾತ ಒತ್ತಟ್ಟಿಗಿದ್ದ ಮೇಲೆ ಬೊಜ್ಜು ಬೆಳೆದಿರಬೇಕು. ಬೊಜ್ಜು ಬೆಳೆಯುವದು ಐಶ್ವರ್ಯವಂತಿಕೆಯ ಸಾಮಾನ್ಯ ಲಕ್ಷಣವಲ್ಲವೆ? ಅದೊಂದು ಗಜಯೋಗ; ಗಜಕೇಸರಿ ಯೋಗಕ್ಕೆ ಅಲ್ಲಿಂದ ಅಷ್ಟೇನೂ ದೂರ ಹೋಗಬೇಕಾಗಿಲ್ಲ! ಮೇಲೆ ಮಧುಮೇಹ! ಒಂದು ರೀತಿಯಲ್ಲಿ ವಿಪರೀತ ಮಧುಮೋಹದ ಪ್ರತಾಪವಿರಬಹುದೆ? ಇಷ್ಟಂತೂ ಖಂಡಿತ; ತುಪ್ಪ-ಸಕ್ಕರೆ ಮಿತಿಮೀರಿ ತಿನ್ನುವವರು— ಅದೂ ಇಂದಿನ ತುಟ್ಟಿಯ ಕಾಲದಲ್ಲಿ!-- ಮೈಮುರಿದು ದುಡಿಯದೇ ಇದ್ದವರು! ಛೆ, ಛೆ, ಸಂದೇಹಕ್ಕೆ ಇಂಬೇ ಇಲ್ಲ! ಅವರು ಶ್ರೀಮಂತರಷ್ಟೇ ಅಲ್ಲ, ಗರ್ಭಶ್ರೀಮಂತರಿರಲೇ ಬೇಕು!

"ಧನ್ಯ, ಹರಿಯಪ್ಪಾ, ಧನ್ಯ! ಕೊನೆಗೆ ಇಷ್ಟು ದೂರದ ಇಂತಹ ಗರ್ಭಶ್ರೀಮಂತರ ವರೆಗೂ ಹೋಯಿತಲ್ಲಾ ನಿನ್ನ ವ್ಯವಹಾರ ಚಾತುರ್ಯದ ಕೀರ್ತಿ! ಅಂದ ಮೇಲೆ ನೀನೇನು ಸಾಮಾನ್ಯನೆ?" ಎಂದು ತನ್ನಷ್ಟಕ್ಕೇ ಅಂದುಕೊಳ್ಳುತ್ತಾ ಒಳ್ಳೇ ಹುರುಪುಗೊಂಡ ಅಭಿಮಾನದಿಂದ ತನ್ನ ಬೆನ್ನು ತಾನೇ ಚಪ್ಪರಿಸಿ, ಹುರಿಮೀಸೆಯನ್ನು ಹರಿಯಪ್ಪ ಚನ್ನಾಗಿ ತೀಡಿಕೊಂಡನು.

ಆದರೆ ಮರುಕ್ಷಣದಲ್ಲಿ, "ಎಮ್ಮೆಯೊಂದು ಹುಡುಕಬೇಕಾಯಿತಲ್ಲಾ; ಅದಕ್ಕೇನು ಮಾಡಬೇಕಾಯಿತು? ರಾಯರು ಇಲ್ಲಿಗೆ ಬರುವದು ಎಂದೋ ಏನೋ; ಫಕ್ತ ಸಕಾಲದಲ್ಲಿ ತಿಳಿಸಲಾಗುವದಂತೆ!" ಅಂತ ಯೋಚನೆಗೆ ಬಿದ್ದ.

ಕಾರಣ ಇಷ್ಟೆ: ಆಗ ಎಲ್ಲೆಲ್ಲಿಯೂ ಹಾಲಿನ ತೀವ್ರ ಕೊರತೆ ಹಾಗೂ ತುಟಾಗ್ರತೆಯಿದ್ದಿತು. ತುಟ್ಟಿಯಂತೂ ಕೇಳಬೇಡಿ! ಮಾತ್ರ ತುಟ್ಟಿ ಗಿರಾಕಿಗಳಿಗೆ; ಲಾಭ ಮಾರಾಟಗಾರರಿಗೆ! ಲಾಭವಂತೂ ಮೂರು ಬಗೆಯಿಂದ. ಹೇಗೆಂಬುದನ್ನು ನೀವೇ ನೋಡಿ: ತುಟ್ಟಿಯೆಂದು ಹಾಲಿನ ಪ್ರಮಾಣದಲ್ಲಿ ಕಡಿತ ಬೇರೆ; ಲಾಭವೆಂದು ಹಾಲಿನಲ್ಲಿಯ ನೀರಿನ ಪ್ರಮಾಣದಲ್ಲಿ, ಅಳತೆಯ ಅಳವಿನ ಕಡಿತದಲ್ಲಿ ಹೆಚ್ಚಳ ಬೇರೆ! ಅವರು ಕೊಟ್ಟಿದ್ದೇ ಹಾಲು, ಹೇಳಿದ್ದೇ ದರ! ಗಿರಾಕಿಗಳು ಮಾತ್ರ ಪಿಟ್ಟೆನ್ನುವಂತಿಲ್ಲ; ಮಾತಾಡಿದ್ದೇ ಆದರೆ "ಬೇಕಾರೆ ತಕ್ಕೊಳ್ಳಿ ಇಲ್ದಿದ್ರೆ ಬಿಡಿ!" ಅಂತ ಎಸೆದರೆಂದೇ ತಿಳಿಯಬೇಕು ಬಿಂಕದ ಬಿರುನುಡಿ. ಹೀಗಾಗಿ ಎಮ್ಮೆ ಕೊಂಡುಕೊಳ್ಳುವವರಿಗೆ ಮಿತಿಯಿಲ್ಲ, ಮಾರುವವರಿಗೆ ಗತಿಯಿಲ್ಲ ಅನ್ನುವ ಹಾಗೆ ಆಗಿದ್ದಿತು. ಇನ್ನು ವ್ಯವಹಾರಚತುರ ಎನಿಸಿಕೊಂಡಿದ್ದರೂ ಎಮ್ಮೆ ವ್ಯಾಪಾರದಲ್ಲಿ ಕೈಹಾಕುವ ಪ್ರಸಂಗ ಹರಿಯಪ್ಪನಿಗೆ ಬಂದದ್ದು ಇದೇ ಮೊದಲು.

ಅಷ್ಟರಲ್ಲಿ ಮೂರುಮನೆ ಸುಬ್ಬಮ್ಮನ ಎಮ್ಮೆ ಮಾರುವದಿದೆ ಎಂತ ಯಾರಿಂದಲೋ ವರದಿ ಬಂತು. ಚೌಕಸಿ ಮಾಡಲಾಗಿ ಆ ಎಮ್ಮೆ ಒಳ್ಳೇ ಹಿಂಡುವಂತಹದಿದ್ದು, ಸರತಿಗೆ ಏನಿಲ್ಲೆಂದರೂ ೨೩ ಪಕ್ಕಾಸೇರು ಹಾಲು ಕೊಡುತ್ತದೆಂದು ಗೊತ್ತಾಯಿತು.

( ೩ )

ಆದರೆ ಸುಬ್ಬಮ್ಮನ ಹತ್ತಿರ ವ್ಯವಹಾರ! ದಕ್ಷತೆಯಿದ್ದಷ್ಟು ಸಾಲದು. ಆ ಬೆಂಕಿಯ ಕೂಡ ಆಟವಾಡಿ ಕೈಸುಟ್ಟುಕೊಂಡವರಲ್ಲಿ ವ್ಯವಹಾರಚತುರ ಎಂದೆನಿಸಿಕೊಂಡವರೇನು ಕಡಿಮೆ ಇದ್ದಿಲ್ಲ! ಅಂಥ ಅಸಾಧ್ಯ ವ್ಯಕ್ತಿ, ಅದ್ಭುತ ಶಕ್ತಿ—ಸುಬ್ಬಮ್ಮ!

ಅವಳ ಪೂರ್ವಚರಿತ್ರೆಯನ್ನು ಬಲ್ಲವರಲ್ಲೊಬ್ಬರು ಹೇಳಿದ ಸಂಗತಿಯೊಂದು ಆತನಿಗೆ ಇನ್ನೂ ನೆನಪಿತ್ತು.

ಅವಳ ಗಂಡನನ್ನೊಳಗೊಂಡು ಒಟ್ಟು ಮೂರು ಮಂದಿ ಅಣ್ಣತಮ್ಮಂದಿರಿದ್ದು, ಅವರೆಲ್ಲರೂ ಒತ್ತಟ್ಟಿಗಿದ್ದರಂತೆ. ಸುಬ್ಬಮ್ಮನು ಮನೆಯಲ್ಲಿ ಕಾಲಿಟ್ಟಿದ್ದೇ ಅವರಲ್ಲಿ ಒಡಕು ಹುಟ್ಟಿ ಅಂತಃಕಲಹಕ್ಕೆ ಆರಂಭವಾಯಿತು. ದೊಡ್ಡ ದಿವಾಣೀ ಮೊಕದ್ದಮೆಯಾಗಿ ವರ್ಷಗಟ್ಟಲೆ ನಡೆಯಿತು. ನೀರಿನಂತೆ ರೊಕ್ಕ ಸುರುವಬೇಕಾಯಿತು. ಕೊನೆಗೆ ಆಗುವದೆಲ್ಲ ಆಯಿತು: ಸಾಲವಾಯಿತು; ಪಾಲಾಯಿತು; ಅಣ್ಣತಮ್ಮಂದಿರು ಪರಸ್ಪರರ ಕೈಬಿಟ್ಟರು; ಮನೆಯ ಕಬ್ಜೆ ಅವರೆಲ್ಲರ ಕೈಬಿಟ್ಟಿತು. ಅಂತೂ ಇಂತೂ ಮನೆ ಹಾಗೂ ಮನೆಯವರ ಸೊಕ್ಕು ಮುರಿದಂತಾಯಿತು; ಒಂದು ಮನೆ ಮೂರು ಮನೆಗಳಾದವು; ಮತ್ತು ಇವಷ್ಟಕ್ಕೂ ಮೂಲಕಾರಣಳಾದ ಸುಬ್ಬಮ್ಮ ಮೂರುಮನೆ ಸುಬ್ಬಮ್ಮ ಆದಳು!

ಪ್ರಕರಣ ಮಾತ್ರ ಅಲ್ಲಿಗೇ ಮುಗಿಯಲಿಲ್ಲ. ಸುಬ್ಬಮ್ಮನ ಸೊಕ್ಕು ಇನ್ನೂ ಅಡಗಿರಲಿಲ್ಲ, ಅಡಗುವದರಲ್ಲಿಯೂ ಇರಲಿಲ್ಲ. ಹಾಗಾದದ್ದೇ ಆದರೆ ಸುಬ್ಬಮ್ಮ ಅದೆಷ್ಟರವಳು!

ಅವಿಭಕ್ತ ಕುಟುಂಬವಿರುವ ವರೆಗೆ ನೆಗಣ್ಣಿಯರ ಮೇಲೆ ಒಂದೇ ಸವನೆ ಮಸೆದು ಹರಿತಾದ ತನ್ನ ನಾಲಗೆಯ ಮೊನೆಯನ್ನು ಆ ತಾಟಕಿಯು ಇನ್ನು ಮುಂದೆ ತನ್ನ ಶುಂಭ ಗಂಡನ ಮೇಲೆ ಹೊರಳಿಸಿ ಹಗಲೂ ರಾತ್ರಿ ಅವನನ್ನು ತಿವಿಯಹತ್ತಿದಳು, ಪೀಡಿಸಹತ್ತಿದಳು. ಆ ಬಡಪ್ರಾಣಿಗೆ ಹೊರಗೆ ಸಾಲ ಕೊಟ್ಟವರ ಕಾಟ, ಒಳಗೆ ಮಡದಿಯ ಕಾಟ, ಒಳಗೂ ಹೊರಗೂ ಅಸಹ್ಯ ಮಾನಸಿಕ ಯಾತನೆ; ಸಾಲದುದಕ್ಕೆ ನಿದ್ದೆಗೂ ಸೊನ್ನೆಯಾಗುವಂತೆ ಸೊಳ್ಳೆ-ತಗಣೆಗಳ ತೀವ್ರ ಕಾಟ ಆಗಹತ್ತಿತು. ಕೊನೆಯ ಉಪಾಯವೊಂದೇ ಉಳಿಯಿತು-ಆತ್ಮನಾಶ! ಅದನ್ನೇ ಆಶ್ರಯಿಸಬೇಕಾಯಿತು ಆ ಹತಭಾಗ್ಯ!

ಇನ್ನು ಸುಬ್ಬಮ್ಮನಿಗೆ ವಿಶೇಷ ದುಃಖವಾದಂತೇನೂ ಅನಿಸಲಿಲ್ಲ. ಮೋರೆಯು ಕೊಂಚ ಬಾಡಿದ ಹಾಗೆ ಭಾಸವಾಗುವಂತಿತ್ತು, ಅಷ್ಟೆ. ಅದೂ ಗಂಡ ಸತ್ತ ಬಗ್ಗೆ ಇರದೆ, ಅದರಿಂದಾಗಿ ತಾನೊಬ್ಬ ತಕ್ಕಮಟ್ಟಿಗೆ ದುಡಿಮೆಯುಳ್ಳ ಒಳ್ಳೇ ನಂಬಿಗಸ್ತ ಹಾಗೂ ವಿಧೇಯ ಆಳನ್ನು ಕಳಕೊಂಡೆನಲ್ಲಾಂತ!

ಮೊದಲಿನಿಂದಲೂ ನಡೆದುಬಂದ ಅವರ ಉದರನಿರ್ವಾಹದ ವ್ಯವಸಾಯವಾದ ಅನ್ನ-ಹಾಲಿನ ವಿಕ್ರಯವನ್ನೇ ಆವಳು ಮುಂದಾದರೂ ಅವಲಂಬಿಸಿದಳು. ಸಂಪಾದನೆಯಾದರೂ ಏನು ಕಡಿಮೆಯಿದ್ದಿಲ್ಲ. ಅದು ಇನ್ನಷ್ಟೋ ಹೆಚ್ಚಾಗಬಹುದಾಗಿತ್ತು, ಅಷ್ಟು ಸೊಗಸು, ರುಚಿ, ಅವಳ ಕೈಯ ಅಡಿಗೆ! ಆದರೆ ಅದೆಯಲ್ಲ ಅವಳ ಆ ಕೆಟ್ಟ ಸ್ವಭಾವ, ಸುಟ್ಟ ನಾಲಗೆ! ತನ್ನ ಗಿರಾಕಿಗಳ ಹತ್ತಿರ ಏನು ಅವಳ ಕಟ್ಟಳೆ, ಏನು ಅವಳ ಕಲ್ಲೆದೆ, ಏನು ಸುಳ್ಳತನ ಮತ್ತು ಅದನ್ನು ದಕ್ಕಿಸಿಕೊಳ್ಳಲಿಕ್ಕೆ ಮೇಲೆ ದೊಡ್ಡ ಬಾಯಿ! ಆ ಬಾಯಿಗೆ ಅಂಜದವರು ಅವಳ ಈವರೆಗಿನ ಅನುಭವದಲ್ಲಿ ಒಬ್ಬರೂ ಸಿಕ್ಕಿರಲಿಲ್ಲ.

ಕೈಯಲ್ಲಿ ಸಾಕಷ್ಟು ರೊಕ್ಕವಾಗಿದ್ದುದರಿಂದಲೂ ಗಂಡ ಸತ್ತ ಮೇಲೆ ತನ್ನವರಾರೂ ಅಲ್ಲಿ ಇರಲಿಲ್ಲವಾದುದರಿಂದಲೂ ಅಲ್ಲಿಯ



ಧಾರವಾಡದ ಸುಗ್ಗೀ ಕೆರೆಯಲ್ಲಿ ಮೇಘಪ್ರತಿಬಿಂಬ

ತನ್ನ ವ್ಯವಸಾಯವನ್ನು ಬಿಟ್ಟುಕೊಟ್ಟು ತವರೂರಾದ ತಾಳೀಕೋಟೆಗೆ ಹೋಗಿ ಅಣ್ಣನಲ್ಲಿ ನಿಶ್ಚಿಂತಳಾಗಿ ಉಳಿದ ಆಯುಷ್ಯವನ್ನು ಕಳೆಯುವ ವಿಚಾರದಲ್ಲಿ ಇದ್ದಳು. ಅಂತೆಯೇ ಅವಳು ತನ್ನ ಎಮ್ಮೆಯನ್ನು ಮಾರಹೊರಟಿದ್ದಳು.

( ಈ )

ಅದೇನೇ ಇದ್ದರೂ ಎಮ್ಮೆ ಮಾರುವದಂತೂ ಖಂಡಿತ. ಪ್ರಯತ್ನ ಮಾಡಿ ನೋಡೇಬಿಡುವಾಂತ ನಿಶ್ಚೈಯಿಸಿ, ಹರಿಯಪ್ಪ ನೆಟ್ಟಗೆ ಹೋದ ಸುಬ್ಬವ್ವನಲ್ಲಿಗೆ.

ಆಗ ಸಾಯಂಕಾಲ. ಸುಮಾರು ೬ ಗಂಟೆಯಾಗಿರಬಹುದು.

* * * *

ಸುಬ್ಬಮ್ಮ ತನ್ನ ಕೊಟ್ಟಿಗೆ ಬಾಗಿಲಲ್ಲಿ ಯಾರೋ ಒಬ್ಬ ಸಭ್ಯ ಗೃಹಸ್ಥರಿಗೆ ಹಾಲು ಅಳೆದು ಕಾಣಿಸುತ್ತಿದ್ದಳು.

ಕೊನೆಯ ಬಾರಿ ಅರ್ಧಸೇರಿನ ತಟ್ಟೆಯಲ್ಲಿ ಹಾಲು ಸುರುವಿ, "ಇಗೋ ನೋಡಿ, ೨॥ ಸೇರಿನ ಮೇಲೆ ಇಷ್ಟು ಹೆಚ್ಚೇ! ಈಗಾದರೂ ಪೂರ್ಣ ಖಾತ್ರಿ ಆಯಿತಲ್ಲವೇ?" ಎಂತ ಜಯಶಾಲಿಯ ಕಳೆಯೇರಿದ ಮೋರೆಯನ್ನೆತ್ತಿ ಕೇಳಿದಳು.

"ಹೌದವ್ವ, ಒಪ್ಪಿದೆ. ಇನ್ನೇನು ನಿಮ್ಮ ರೊಕ್ಕ ನೀವು ತಕ್ಕೊಳ್ಳಿ, ಪಾವತಿಚೀಟಿಯೊಂದು ಬರೆದು ಕೊಡಿ."

"ಹೊಹೊಽ, ಅದಕ್ಕೇನು!" ಅನ್ನುತ್ತ ಅವಳು ಅಲ್ಲಿಂದ ಎದ್ದು ಬಲಗಡೆ ಮನೆಯತ್ತ ಹೊರಳಿದಾಕ್ಷಣ, ಇಷ್ಟೆಲ್ಲ ಮಾತು ಕೇಳುತ್ತ ನಿಂತಿದ್ದ ಹರಿಯಪ್ಪ ಎದುರಾಗಿ ದೃಷ್ಟಿಗೆ ಬಿದ್ದ.

"ಏನು, ಹರಿಯಪ್ನೋರೆ?" ಎಂತ ವಿಚಾರಿಸಿದಳು.

"ಒಂದು ಚೂರು ಮಾತಾಡೋದಿದೆ, ಇತ್ತ ಬನ್ನಿ" ಅಂದ ಹರಿಯಪ್ಪ.

"ಹ್ನ, ಮನೆಹಿಂಬದಿ ಹೋಗೋಣ, ನಡೀರಿ" ಇಷ್ಟು ಹೇಳಿ, ಆ ಸಭ್ಯಗೃಹಸ್ಥರಿಗೆ ಅಲ್ಲೇ ಸ್ವಲ್ಪ ನಿಲ್ಲಹಚ್ಚಿ, ಹರಿಯಪ್ಪನೊಂದಿಗೆ ಗೊತ್ತುಮಾಡಿದ ಸ್ಥಳಕ್ಕೆ ತೆರಳಿದಳು.

† † † † †

"ನೋಡಿ, ಬಂದದ್ದು ನಿಮ್ಮ ಎಮ್ಮೆಗಾಗಿ." ಮೆಲ್ಲಗೆ ಹೇಳಿದ ಹರಿಯಪ್ಪ.

"ಇನ್ನೆಲ್ಲಿಯ ಎಮ್ಮೆ; ಇದೀಗ ಕೊಟ್ಟಾಯ್ತು!" ಅಂತ ಬಂತು ಸುಬ್ಬಮ್ಮನಿಂದ.

"ಅದು ಹ್ಯಾಗೆ? ಈಗ ಮಾತ್ರ ನಿಮ್ಮ ಆ ಇನ್ನೊಬ್ರು ಅಂದ್ರಲ್ಲಾ ರೊಕ್ಕ ಇಸಕೊಂಡು ಪಾವತಿ ಕೊಡೋದುಂಟೊಂತ!"

ಅಲ್ಲಿಂದ ಮುಂದೆ ಸುಬ್ಬಮ್ಮ—ಹರಿಯಪ್ಪರಲ್ಲಿ ಒಂದಿಷ್ಟು ಎಳೆದಾಟವಾಗಿ, ಕೊನೆಗೆ ಇಬ್ಬರೂ ಗೆದ್ದರು! "ಆ ಇನ್ನೊಬ್ಬರು" ಕೊಡಬೇಕಾದ್ದು ರೂ. ೫೦೦; ಆದರೆ, ಹರಿಯಪ್ಪ ಒಪ್ಪಿದ್ದು ರೂ. ೬೦೦ಕ್ಕೆ; ಮಾತ್ರ ರೂ. ೮೦೦ಕ್ಕೆ ಪಾವತಿ ಬರಕೊಡುವದು ಸುಬ್ಬಮ್ಮನ ಪಾಲಿಗೆ ಬಿತ್ತು!

"ಆದರೆ ನೀವು ಕೊಡೋದನ್ನೆಲ್ಲ ಇಂದೇ ಕೊಟ್ಟು ಎಮ್ಮೆ ಒಯ್ಯಬೇಕು" ಎಂತ ನಿಶ್ಚಯದಿಂದ ಅಂದಳು.

ಅದಕ್ಕೂ ಎಳ್ಳಷ್ಟೂ ಎದುರಾಡದೆ 'ಹ್ನ' ಅಂದ ಹರಿಯಪ್ಪ.

( ಉ )

"ಗಾತ್ರದಲ್ಲಿ ದೊಡ್ಡದು. ಹೊಟ್ಟೆ ಮಾತ್ರ ಹೇಳತೀರದು; ಕಂಡಕಂಡಲ್ಲೆಲ್ಲ ಹೊಟ್ಟೆಯೇ ಹೊಟ್ಟೆ! ಅದಕ್ಕೂ ಒಂದು ಕಾರಣ. ನೈಯಿಂದ ಸ್ವಲ್ಪ ಬಡವಾಗಿದ್ದುದು. ಬರೀ ಹುಲ್ಲು ಅಕ್ಕಚ್ಚಿನ ಮೇಲೆ ಇಟ್ಟಿರಬೇಕು ಆ ಹೆಂಗ್ಸು. ಆದರೂ ೨॥ ಪಕ್ಕಾಸೇರು ಹಾಲು! ಚನ್ನಾಗಿ ವಾಗಾತಿ ಮಾಡಿದರೆ, ಇನ್ನೂ ಹೆಚ್ಚಾಗಬಹುದು. ಒಟ್ಟಿನ ಮೇಲೆ ಜಾತಿ ಚಲೋದು; ಅದೇ ಮುಖ್ಯ."—ಇಷ್ಟೆಲ್ಲ ವಿಚಾರಗಳು ಮೊದಲು ಎಮ್ಮೆ ನೋಡಿದಂದಿನಿಂದ ಅದನ್ನು, ದಾಬ ಹಿಡಿದ ಲಿಂಗನೊಡನೆ, ದಾರಿಯುದ್ದ ಹಿಂಬಾಲಿಸಿ ಮನೆಮುಟ್ಟುವವರೆಗೂ ಪದೇಪದೇ ಹರಿಯಪ್ಪನ ತಲೆಯೊಳಗಿಂದ ಹಾದುವು.

* * * *

ಮಾರನೇ ಬೆಳಿಗ್ಗೆ ಸುಮಾರು ೮ ಗಂಟೆಯಾಗಿರಬಹುದು.

ಉತ್ತಮವಾದ ಒಂದು ಎಮ್ಮೆ ಬರೀ ಎಂಟು ನೂರು ರೂಪಾಯಿಗೆ ಸಿಕ್ಕಿದ ಸುದ್ದಿ ರಾಯರಿಗೆ ಕಳಿಸಲಿಕ್ಕೆಂದು ಅಂಚೆಕಟ್ಟೆಗೆ ಹೋಗಿ ಮರಳಿದ ಹರಿಯಪ್ಪ ಮನೆಯೊಳಗೆ ಕಾಲು ಇಡಇಡುತ್ತ ಒಳ್ಳೇ ಉತ್ಸುಕತೆಯಿಂದ ಕೇಳಿದ ಮೊದಲನೇ ಪ್ರಶ್ನೆಯೆಂದರೆ,

"ಎಮ್ಮೆ ಹಾಲು ಎಷ್ಟು ಕೊಡ್ತು?"

"ಹಾಲು ಕರೆಯಲಿಕ್ಕೆ ಹೋದ ಲಿಂಗ ಇನ್ನೂ ಬರಲಿಲ್ಲ!" ಅಂತ ಹೆಂಡತಿ ಹೇಳಿದಳು.

"ಏನಂತಿಽ, ಹೋಗಿ ಎರಡ್ತಾಸಾಯ್ತು!" ಅಂದವನೇ ಕೊಟ್ಟಿಗೆಗೆ ನಡೆದ.

* * * *

ಲಿಂಗ ತನ್ನ ಎಡಗೈಯಿಂದ ಎಮ್ಮೆ ಬಾಲ ಎತ್ತಿ ಜಗ್ಗಿ ಹಿಡಿದಿದ್ದು, ಬಲಗೈ ಮುಷ್ಟಿಯಿಂದ ಧಪಾ-ಧಪಾ ಒಂದೇ ಸವನೆ ಎಲುಬೆಲ್ಲ ನುಗ್ಗಾಗುವಂತೆ ಅದನ್ನು ಗುದ್ದುತ್ತಿದ್ದ. ಹತ್ತಿರವೇ ಮೂಲೆಯಲ್ಲಿ ಒಂದು ದೊಡ್ಡ ತಪ್ಪೇಲಿ ಇದ್ದು, ಅದರಲ್ಲಿ ಅರ್ಧ ಸೇರೂ ಆಗದಷ್ಟು ಹಾಲಿತ್ತು.

"ಯಾಕೋಽ ಲಿಂಗಾ, ಇದೇನ ನಡ್ಸಿದ್ದೀನು?" ಅಂತ ಗಾಬರಿಯಾಗಿ ಕೂಗಿದ ಹರಿಯಪ್ಪ.

"ಯೆಲಾ-ಯೆಲಾ-ಯೆಲಾ, ಇದ್ಯಾವ ನಮೂನೆ ಯೆಮ್ಮಿರಿಽ!" ಅಂತ ಚೀರಿ, ಕೊನೆಯ ಗುದ್ದೊಂದು ಎಮ್ಮೆಗೆ ಮುಟ್ಟಿಸಿ, ಲಿಂಗ ತನ್ನ ಧನಿಯರಿಗೆ ಎದುರಾದ. ಮತ್ತು "ನಿಮ್ಮ ೨॥ ಪಕ್ಕಾಸೇರೆಲ್ಲಿ, ಮತ್ತಽಽ (ನಡುವೇ ನಿಂತು ಆ ಹಾಲಿನ ಪಾತ್ರೆ ತಂದು ತೋರಿಸಿ) ಇದೆಲ್ಲಿ!" ಅನ್ನುತ್ತ ಆ ಎಮ್ಮೆಯ ಬಗ್ಗೆ ತನ್ನಲ್ಲಾದ ತಿರಸ್ಕಾರವನ್ನೆಲ್ಲ ತನ್ನ ದೃಷ್ಟಿಯಲ್ಲಿ ಶೇಖರಿಸಿ, ಅದರ ಕಡೆಗೆ ಕಣ್ಣುಣ್ಣು ಬಿಟ್ಟ.

ತುಸು ಯೋಚನೆ ಮಾಡಿ, ಏನೋ ಹೊಳೆದವನಾಗಿ, ಹರಿಯಪ್ಪ ಅಂದ.

"ಅದ್ಹಾಗಲ್ಲೋಽ, ಜಾಗಾ ತಪ್ಸಿ ತಂದದ್ದು, ಅದ್ಕಽ ಹೀಗ್ಯಾತ್ರಿರ್ಬೇಕು!"

"ಅದ್ರ ಹಾಲ್ಕವಿಮ್ಮ ಅಷ್ಟೇ ಅಲ್ರಿಽಪ್ಪಾ! ಏನ್ ಅದ್ರ ಒದೆತ, ಏನ್ ನೈಮುರಿತ, ಏನ್ ಕುಣಿದಾಟ, ಏನ್ ಖೋಡಿ, ಏನ್ ತನಾ!.... ನೋಡ್ರಿಲ್ಲಿಽ!" ಅಂತ ಹೇಳಿ, ತನ್ನ ಜಜ್ಜಿದಂತಾಗಿ ಬಾತುಹೋದ

ಕಾಲನ್ನೆತ್ತಿ ಬೆಟ್ಟು ಮಾಡಿ ತೋರಿಸಿದ, ಲಿಂಗ. ಮತ್ತು ಮುಂದರಿದು, " ನಂದೊಂದು ಮಾತ್ಕೇಳ್ರಿ, ಯಜಮಾನ್ರs. ( ಗೋಣು ಅಲ್ಲಾಡಿಸಿ ) ಇದ್ರ ಲಕ್ಷಣ ಚೆನ್ನಾಗಿಲ್ಲ. ನಾ ಹಾಲಿಳ್ಸಾಕಂತ ಗುದ್ದತೇನಿs, ಅದಿನ್ನೆರ್ಡ್ ಕಡಿಯಿಂದ ಸೋರ್ತತಿ! ನನ್ಗಂತೂ ನಿಮ್ಮ ಆ ಲೆಕ್ಕ ಲ್ಲೆಲ್ಲೋ ತೃಪ್ತಂತ ಕಾಣ್ತತಿ; ಅವನ್ನಟ್ಟೊ ಲೆಕ್ಕಕ್ಕೆ ಹಿಡ್ದ್ ತಿ|| ಪಕ್ಕಾ ಸೇರಂತ ಹೇಳಿರ್ಬೇಕ್ ಆ ಹೆಣ್ಮಗ್ಳು! ಛೆ-ಛೆs, ತಿರ್ಗಿ ನಿವಾಳ್ಸಿ ಬಿಡ್ರಿs, ಹೋಗ್ಲಿ!" ಎಂತ ಒತ್ತಿ ಹೇಳಿದ.

ಅದಕ್ಕೆ ಹರಿಯಪ್ಪ, "ಅಧ್ಯಾಗಾದೀತೊs! ಇನ್ನೇನಾದ್ರೂ ಉಪಾಯ ಮಾಡೋ ಹಾಗಿದ್ರ ಸುಬ್ಬಮ್ಮನಲ್ಲಿಗೇ ಹೋಗಿ ಕೇಳಿ ನೋಡ್ತೀನಿ. ನಾ ತಿರ್ಗಿ ಬರೋದ್ರೊಳಗs ಅದ್ಕ ಮೀಸಹಾಕ್ಬಿಡು, ತಿಳಿತೊs, ಇಲ್ಲೋs!" ಎಂತ ಅಂದವನೇ ಸುಬ್ಬಮ್ಮನಲ್ಲಿಗೆ ನಡೆದ.

ಅಲ್ಲಿ ಹೋಗಿ ನೋಡಿದರೇನು—ಮನೆಗೆ ಕೀಲಿ!

ಚೌಕಸಿ ಮಾಡಲಾಗಿ, ನೆರೆಮನೆಯ ಸಂಕ್ರಮ್ಮನಿಂದ ನಿಜಸಂಗತಿ ಗೊತ್ತಾಯಿತು. ಅದೇನಂದರೆ, ತಾಳೀಕೋಟೆಯಿಂದ ಬಂದ ಸುಬ್ಬ-ಮ್ಮನ ಅಣ್ಣ ಅವಳನ್ನು ಅದೇ ದಿನ ನಸುಕು ಹರಿಯುವದರೊಳಗಾಗಿ ಇದ್ದುಬಿದ್ದುದನ್ನೆಲ್ಲಾ ಕಟ್ಟಿಕೊಂಡು ಕರೆದೊಯ್ದ!

" ಏನ್ಹೇಳ್ತಿಯವ್ವಾ, ಅಣ್ಣ ಬಂದದ್ದಾದ್ರೂ ಎಂದು ?"

" ಹೀಗ್ಯಾಕಂತೀರಿs! ನಿನ್ನೆ ಸಾಯಂಕಾಲ ಎಮ್ಮಿ ಒಯ್ಯಾಕ ಬಂದೋರು ನೀವೇ ಅಲ್ಲೇನುs ?"

" ಆಗೆಲ್ಲೂ ಕಾಣ್ಲಿಲ್ಲವ್ರು !"

" ಅದ್ಹ್ಯಾಂಗs? ಅಲ್ಲೇ ಇದ್ರಲ್ಲಾ, ನಿಮ್ಮೆದುರ್ಗೇ ! "

" ಎದುರ್ಗಿದ್ದೋರಂದ್ರ ಆ ಎಮ್ಮಿ ಕೊಳ್ಳಾಕ್ಬಂದೋರೊಬ್ರೆ ! "

" ಅವ್ರೇ ಅಂತೀನಿ! ಯೆಲ್ಲಿ ಎಮ್ಮಿs, ಯೆಲ್ಲಿ ಗಿಮ್ಮಿs! ಅದೆಲ್ಲ ನಿಮ್ನ ಫಸಾಯ್ಸಲಿಕ್ಕೆ ಹೂಡಿದ ಆಟ. ಅವ್ರೇ ಅಣ್ಣ, ಅಲ್ಲೆಲ್ಯೋ ಒಂದು ಛಾಪಖಾನ್ಯಾಗ ನೋಕರಿ ಮಾಡ್ತಾರಂತ. ನನ್ಗ ಮೊದ್ಲೇ ಗೊತ್ತು, ಆದರ ಆ ಹಾದರಗಿತ್ತಿs ಬಾಯಾಗ ಯಾರ್ಬೀಳ್ಬೇಕ್ರಿs, ನಮ್ಮಪ್ಪsss!"

ಹರಿಯಪ್ಪನಿಗೆ ಸಿಡಿಲು ಬಡಿದಂತಾಯಿತು. ಅಲ್ಲೇ ಕುಸಿದು ಬೀಳುತ್ತಿದ್ದನೋ ಏನೋ! ಆದರೆ ತನ್ನೆದುರಿಗೆ ಒಬ್ಬ ಹೆಂಗಸಿದ್ದುದು, ತಾನು ಆತನಕ ವ್ಯವಹಾರ ಚತುರ (!) ಎನಿಸಿಕೊಂಡದ್ದು, ಇವೆರಡೂ ಒತ್ತಟ್ಟಿಗೆ ಸೇರಿ ಅವನನ್ನು ಎತ್ತಿಹಿಡಿದವು.

ಒಂದು ಕ್ಷಣ ಭ್ರಮಿಷ್ಠನಾದಂತೆ ಆದವ, ಕಷ್ಟದಿಂದ ಚೇತರಿಸಿಕೊಂಡು ಆದ ನಷ್ಟವನ್ನು ಹೇಗೆ ತುಂಬಿಕೊಳ್ಳುವದೂಂತ ವಿಚಾರ ಮಾಡುತ್ತ ಮನೆಯ ಹಾದಿ ಹಿಡಿದ.

( ಊ )

ಹರಿಯಪ್ಪನಿಗೆ ಹಂಚಿಕೆಗಳಿಗೇನು ಕೊರತೆ!

ತನಗಾದ ಮೋಸಕ್ಕೆ ಪ್ರತಿಮೋಸ ಮಾಡುವದು ಒಂದಾಯಿತು. ಆದರೆ ಮಾಡುವದು ಯಾರಿಗೆ? ಸುಬ್ಬಮ್ಮನಿಗಂತೂ ಶಕ್ಯವಿಲ್ಲ. ಇನ್ನುಳಿದವರೆಂದರೆ ರಾಯರು. ಆದರೆ ತಾನೊಬ್ಬ ಬೆಪ್ಪತಕ್ಕಡಿಯಾಗಿ ಮೋಸಹೋದೆನೆಂದು ಅವರೂ ಅಷ್ಟು ಸಹಜವಾಗಿ ಮೋಸ ಹೋಗಬಹುದೆ? ಛೆ! ಅದೇನೂ ಲೆಕ್ಕಕ್ಕೆ ಹಿಡಿಯುವಂತಹದಲ್ಲ.

ಈ ರೀತಿ ಯೋಚಿಸುತ್ತ ಯೋಚಿಸುತ್ತ ಕೊನೆಗೆ ಎಮ್ಮೆ ಇದ್ದಲ್ಲೇ ಇರಲಿ; ವಾಗಾತಿಯಿಂದ ಸುಧಾರಿಸಬಹುದು; ಈದ ಮೇಲೆ ಹಾಲೂ ಹೆಚ್ಚಾಗಬಹುದು ಅಂತ ನಿರ್ಧಾರ ಮಾಡಿ ಇದ್ದ ಅಲ್ಪದಿಂದಲೇ ಸಂತೋಷಪಡುವಷ್ಟರಲ್ಲಿ ತನ್ನ ಮನೆಯನ್ನು ತಲ್ಪಿದ.

ದುರ್ದೈವವು ಮಾತ್ರ ಅವನ ಬೆನ್ನು ಬಿಡಲಿಲ್ಲ!

ಮರಳಿ ಬಂದ ತನ್ನ ಯಜಮಾನರನ್ನು ಕಂಡು, ಇನ್ನೂ ಎಮ್ಮೆಯ ಮೈ ತೊಳೆಯುತ್ತಲೇ ಇದ್ದ ಲಿಂಗ,

" ರಾಯ್ರ! " ಅಂತ ಕೂಗಿದ.

ಆ ಕೂಗಿನಲ್ಲಿ ವಿಸ್ಮಯ ಸಂತಾಪಗಳ ಸುಳಿವಿತ್ತು.

ಗಾಬರಿಯಾಗಿ ಹರಿಯಪ್ಪ ನೇರವಾಗಿ ಅತ್ತ ಉದ್ದುದ್ದ ಹೆಜ್ಜೆ ಹಾಕುತ್ತ ಮುಟ್ಟುತ್ತಲೇ,

" ಏನ್ರಾಯ್ರ, ಇನ್ನು ಈ ಎಮ್ಮಿ ಹೊಲೇರಿಗೆ ಕೊಟ್ಕ್ಯಾಸ ಒಂದಟು ಪುಣ್ಯಾ ಕಟ್ಕೊಳ್ಳೋದೆ! ಅವ್ರಾದ್ರೂ ನಾಕ್ದಿನ್ ಜಗ್ಗಿ ಹೊಡೀಲಿ, " ಎಂತ ಲಿಂಗನು ಖಡಾಖಡಿ ತೀರ್ಮಾನಿಸಿಬಿಟ್ಟ!

" ಏನೊ ನಿನ್ ತಲಿ ನೆಟ್ಟಗೈತ್ಯೋs ಇಲ್ಲೋs! ಹೀಗ್ಯಾಕಂತೀದಿ?"

" ಯಾಕಂತೀದಿs!— ಇನ್ನೀ ಮುದಿಗೊಡ್ಡು ಕಟ್ಕೊಂಡ್ ಮಾಡೋದೇನ್ ?"

" ಮುದಿಗೊಡ್ಡು!— ಯಾತರ ಮೇಲಿಂದ್ ಅಂತೀದೀ ? "

ಲಿಂಗ ತಡೆಯಲಾರದೆ ಒಮ್ಮೆ ಖೊಳ್ಳನೆ ನಕ್ಕ ಮತ್ತು ಎಮ್ಮೆಯ ಗೋಣು ಹಿಡಿದು, ಬಲಾತ್ಕಾರದಿಂದ ಅದರ ಬಾಯಿ ಕಿಸಿದ ಮತ್ತು,

" ಇಕಾ ! " ಅಂದ.

ಸೂಚಿಸಿದತ್ತ ನೋಡಿ ಹರಿಯಪ್ಪ 'ಆ್ಞ' ಅಂತ ಬಾಯಿಬಿಟ್ಟವನೇ ನಿಂತಲ್ಲೇ ಮುದಡಿಹೋದ! ಕಾರಣ, ಏನು ಹೇಳಲಿ! ಆ ಕ್ಯಾಕ್ಕುಡಿಯಂತೆ ಆಕಳಿಸಿದ ಬಾಯಲ್ಲಿ ಒಂದು ಹಲ್ಲೂ ಇರಲಿಲ್ಲ!!

ಮರುದಿನ ಸಾಯಂಕಾಲ ೮ ಗಂಟೆಗೆ, ಹರಿಯಪ್ಪ ತಾನು ಮೀಸೆ ಹೊತ್ತ ಗಂಡಸಾಗಿದ್ದು ಒಬ್ಬ ಹೆಂಗಳೆಯಿಂದ ವಂಚಿತನಾದ ಬಗ್ಗೆ ಉದ್ವೇಗಗೊಂಡು, ಗಂಡಸುತನವನ್ನು ಮೆರೆಯಿಸುವ ತನ್ನ ಆ ಪತಾಕೆಯನ್ನೇ ಇಳಿಸಿಬಿಟ್ಟ!

* * * *

ಕೆಲವು ದಿನಗಳು ಉರುಳಿದ ಮೇಲೆ, 'ಕಲ್ಪನಾ' ಕಂಪನಿಯು ರಾಯರಿಗೆ ಬರೆದ ಪತ್ರವು ಬಂದದಾರಿಗೆ ಸುಂಕವಿಲ್ಲಾಂತ,ಕಲಕತ್ತೆಯ ಡೆಡ್‌ಲೆಟರ ಆಫೀಸಿನಿಂದ, ಅರ್ಧ ಹಿಂದುಸ್ಥಾನವನ್ನೇ ಸುತ್ತಾಡಿ, ಮರಳಿ ಬಂತು!

—

## ನೆತ್ತರಿನ ಬುಗ್ಗೆ !

ದಕ್ಷಿಣ ಅಮೇರಿಕದ ಹತ್ತಿರವಿರುವ ಒಂದು ದ್ವೀಪದ ಹಳ್ಳಿಯ ನಡುವೆ ಒಂದು ಬುಗ್ಗೆಯಿದೆ. ಅದರ ಹೆಸರು "ವೈನಾ ಡಿ ಸಾಂಗ್ರೆ" ಅದರಿಂದ ನೆತ್ತರಿನಂತಹ ದ್ರವವು ಚುಳ್ಳನೆ ಸದಾ ಮೇಲಕ್ಕೆ ಚಿಮ್ಮುತ್ತಿರುತ್ತದೆ. ರಕ್ತದಂತೆಯೇ ಅದು ಹೆಪ್ಪುಗಟ್ಟುತ್ತದಂತೆ!

# ಪಾಶ್ಚಾತ್ಯ-ಪೌರಸ್ತ್ಯ ರಾಜಕೀಯ ತತ್ತ್ವಗಳು

[ ಡಾ. ಎಸ್. ಶ್ರೀಕಂಠಶಾಸ್ತ್ರಿ, ಎಂ. ಎ., ಡಿ. ಲಿಟ್. ]

ಅಹಂ ರಾಷ್ಟ್ರೀ ಸಂಗಮನೀವ ಸೂನಾಂ ।
ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ ।
ತಾಂ ಮಾ ದೇವಾ ವ್ಯದಧುಃ ಪುರುತ್ರಾ ।
ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ॥
(ಋಗ್ವೇದ x ೧೨೫-೩)

ಮಾನವರೆಲ್ಲರೂ ಇಷ್ಟಪ್ರಾಪ್ತಿ ಅನಿಷ್ಟನಿವಾರಣೆಗಳನ್ನಪೇಕ್ಷಿಸುವದು ನೈಸರ್ಗಿಕವಾದುದು. ಆದರೆ ಸಮಾಜ ಬೆಳೆದಂತೆ ಪ್ರತಿ ವ್ಯಕ್ತಿಯ ಇಷ್ಟಾನಿಷ್ಟಗಳನ್ನು ಇತರ ವ್ಯಕ್ತಿಯ ದೃಷ್ಟಿಯಿಂದ ಮಾರ್ಪಡಿಸಬೇಕಾಗುವದು ಅನಿವಾರ್ಯವಾಗುವದು. ಹೀಗೆ ವ್ಯಕ್ತಿ ಮತ್ತು ಸಮಾಜಕ್ಕೆ ಇರಬಹುದಾದ ಸಂಬಂಧಗಳಲ್ಲಿ ರಾಜಕೀಯ ಸಂಬಂಧವು ಮುಖ್ಯವಾದುದು. ಆರ್ಥಿಕ, ನೈತಿಕ ಮತ್ತು ಮತ ಸಂಬಂಧಗಳೂ ಅನೇಕ ವೇಳೆ ರಾಜಕೀಯ ವ್ಯವಸ್ಥೆಯನ್ನನುಸರಿಸುವವೆಂಬುದಕ್ಕೆ ಪ್ರಪಂಚದ ಚರಿತ್ರೆಯಿಂದ ಅನೇಕ ಉದಾಹರಣೆಗಳನ್ನು ಕೊಡಬಹುದು. "ಮಾನವರು ಒಳ್ಳೆಯದನ್ನೇ ಕೋರುವದರಿಂದ, ರಾಷ್ಟ್ರವು ಸಮಾಜದ ಅತ್ಯುತ್ಕೃಷ್ಟ ರೂಪವಾದುದರಿಂದ ಅತ್ಯುಚ್ಚತರವಾದ ಧ್ಯೇಯವನ್ನು ಸಾಧಿಸಬೇಕು" ಎಂದು ಅರಿಸ್ಟೋಟಲ್ ರಾಜಶಾಸ್ತ್ರದ ಮೂಲ ತತ್ತ್ವವನ್ನು ಪ್ರತಿಪಾದಿಸಿರುವನು. ಸಮಾಜವು ಕುಟುಂಬಗಳ ಮೇಲೂ ಕುಟುಂಬಗಳು ವ್ಯಕ್ತಿಗಳ ಮೇಲೂ ಅಸ್ತಿಭಾರ ಹೊಂದಿರುವದರಿಂದ ವ್ಯಕ್ತಿಸ್ವಾತಂತ್ರ್ಯ ಸುಖಗಳೇ ಪರಮ ಧ್ಯೇಯ. ಆದರೂ ವಿರಾಗಿಗಳು ವಿನಾ ಸಾಮಾನ್ಯ ಜನರು ಸಮಾಜದಲ್ಲಿ ಜೀವನವನ್ನು ಮಾಡಬೇಕಾದುದರಿಂದ ಸಮಾಜದ ಭದ್ರತೆ ಅವಶ್ಯಕ. ಭದ್ರತೆ ಮಾತ್ರವಲ್ಲದೆ ಸಮಾಜದಲ್ಲಿ ಬೆಳವಣಿಗೆಗೆ ಅವಕಾಶವಿರಬೇಕು. ಮಾನವನ ಪುರಾತನ ಚರಿತ್ರೆಯಲ್ಲಿ ಆಹಾರ, ಜನಬಾಹುಳ್ಯ ಮತ್ತು ಪ್ರಕೃತಿಯನ್ನು ತಮ್ಮ ಹತೋಟಿಗೆ ತರಲು ಮಂತ್ರ-ತಂತ್ರ-ಮಾಟ, ಹೀಗೆ ಜನಾಂಗಗಳ ವಿಸ್ತರಣೆಗೂ ರಾಜ್ಯಸ್ಥಾಪನೆಗೂ ಕಾರಣಗಳಾದುವೆಂಬುದು ವಿದಿತವಾಗಿದೆ. ಅಲ್ಲದೆ ಮತ್ಸ್ಯನ್ಯಾಯ ಪ್ರಬಲವಾದಂತೆ ದಂಡನೀತಿ, ಕಾನೂನುಗಳ ಅವಶ್ಯಕತೆ ಕಂಡುಬರುವದು. ಪೌರಸ್ತ್ಯ-ಪಾಶ್ಚಾತ್ಯ ಮಾನವರೆಲ್ಲರಿಗೂ ಈ ಮೂಲ ತತ್ತ್ವಗಳು ಅನ್ವಯಿಸುವವು. ಆದರೂ ಈ ಜನಾಂಗಗಳ ಬೆಳವಣಿಗೆಗಳಲ್ಲಿ ಅನೇಕ ಸಂಘಟನೆಗಳು ಒದಗಿದಂತೆ ರಾಜಕೀಯ ದೃಷ್ಟಿಯಲ್ಲೂ ಬದಲಾವಣೆಗಳಾಗಿರುವವು.

### ಕ್ರಿಸ್ತಪೂರ್ವ ಪಾಶ್ಚಾತ್ಯ ಸಂಸ್ಕೃತಿ

ಪಾಶ್ಚಾತ್ಯ ಸಂಸ್ಕೃತಿಯು ಮೂಲತಃ ಮೆಸೊಪೊಟೇಮಿಯ ಮತ್ತು ಈಜಿಪ್ಟ್-ಕ್ರೀಟ್ ಸಂಸ್ಕೃತಿಗಳಿಂದ ಹುಟ್ಟಿರುವದೆಂಬುದು ಈಚಿನ ಶೋಧನೆಗಳಿಂದ ಸ್ಪಷ್ಟವಾಗಿದೆ. ಆದುದರಿಂದ ಪಾಶ್ಚಾತ್ಯ ರಾಜನೀತಿಯ ತತ್ವಗಳ ಹಿನ್ನೆಲೆಯನ್ನು ತಿಳಿಯಬೇಕೆಂದರೆ ಸುಮೇರಿಯನ್, ಬ್ಯಾಬಿಲೋನಿಯನ್, ಅಸ್ಸಿರಿಯನ್, ಕ್ರೀಟನ್, ಗ್ರೀಕ್ ಮತ್ತು ರೋಮನ್ ಚಕ್ರಾಧಿಪತ್ಯಗಳ ಗುಣಾವಗುಣಗಳನ್ನು ತಿಳಿಯಬೇಕು. ಸುಮೇರಿಯನ್ನರ ಪಟ್ಟಣಗಳೆಲ್ಲ ದೇವಾಲಯ, ರಾಜಾಲಯಗಳನ್ನವಲಂಬಿಸಿದ್ದವು. ನಗರದ ದೇವತೆ, ಅದರ ಪೂಜಾರಿಗಳು ಜನಜೀವನವನ್ನೆಲ್ಲ ಆಕ್ರಮಿಸಿಕೊಂಡಿದ್ದರು. ಹೀಗೆ ದೇವಾಲಯ ರಾಷ್ಟ್ರ (Temple-State) ಆರಂಭವಾಯಿತು. ರಾಜ, ಅಧಿಕಾರಿಗಳು ಮತ್ತು ಪುರೋಹಿತವರ್ಗದವರಿಗಲ್ಲದೆ ಮಿಕ್ಕವರಿಗೆ ಮೂಲ ಹಕ್ಕುಗಳು ಕೂಡ ಇರಲಿಲ್ಲವೆಂದು ಹೇಳಬಹುದು. ವ್ಯಾಪಾರ, ಕೈಗಾರಿಕೆ, ವಿದೇಶ ಸಂಬಂಧಗಳು ಹೆಚ್ಚಿದರೂ ರಾಜಕೀಯ ಸ್ಥಿತಿಯಲ್ಲಿ ಏನೂ ವಿಶೇಷ ಮಾರ್ಪಾಟುಗಳಾಗಲಿಲ್ಲ. ದಂಡನೀತಿ ಮತ್ತು ನ್ಯಾಯಶಾಸ್ತ್ರವು ಹೆಚ್ಚಾಗಿ ಮತಸಂಬಂಧವಾಗಿಯೇ ಇದ್ದಿತು. ಹಮ್ಮುರಬಿಯು ನ್ಯಾಯಶಾಸ್ತ್ರದಲ್ಲಿ "ಅನ್ಯಾಯವನ್ನು ಅಣಗಿಸಿ ಅಧಿಕಾರಿಗಳ ಹಿಂಸೆಯನ್ನು ತಪ್ಪಿಸಿ ಒಡವರನ್ನು ಧನಿಕರು ಸುಲಿಯದಂತೆ ಮಾಡುವದೇ ನನ್ನ ಉದ್ದೇಶ"ವೆಂದು ಹೇಳಿಕೊಂಡಿರುವನು. ಆದರೂ ಸಮಾಜವು ಗುಲಾಮತನದ ಆಧಾರದ ಮೇಲೆ ನಿಂತಿದ್ದಿತು ಸಮಾಜದ ವರ್ಗಗಳ ಭೇದಗಳು ಶಾಶ್ವತವೆಂದು ನಂಬಲಾಗಿತ್ತು ಸಮಾಜದ ಮತ್ತು ಸಂಸ್ಥಾನದ ಭದ್ರತೆ ಕಾಪಾಡಿಕೊಂಡು ಬರುವದರಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಸ್ಥಾನವಿರಲಿಲ್ಲ.

ಈಜಿಪ್ಟಿನಲ್ಲಿ ಕೂಡ ಈ ದೇವಾಲಯ-ರಾಷ್ಟ್ರ, ದೇವಸಮನಾದ ರಾಜ, ಪುರೋಹಿತ ವರ್ಗಗಳೇ ಕಂಡುಬರುವವು. ಈಜಿಪ್ಟ ಸಂಸ್ಕೃತಿಯು ಎಷ್ಟು ಅದ್ಭುತವಾಗಿ ಬೆಳೆದರೂ ಪೂರ್ವಾಚಾರ ಪರಾಯಣತೆಯೂ ಪ್ರಗತಿದ್ವೇಷವೂ ಕಂಡುಬರುವವು. ತಮ್ಮ ಮೂರು ಸಾವಿರ ವರ್ಷದ ಚರಿತ್ರೆಯಲ್ಲಿ ಮಾರ್ಪಾಟುಗಳೇನೂ ಹೆಚ್ಚಾಗಿ ಕಂಡುಬರುವದಿಲ್ಲ. ಲಿಪಿಯನ್ನು ಕೂಡ ಮಾರ್ಪಡಿಸಲಿಲ್ಲ. ನ್ಯಾಯವೆಂದರೆ ಹಿಂದಣ ಸಂಪ್ರದಾಯವನ್ನನುಸರಿಸುವದು. ಸಾಮಾನ್ಯ ಜನರಿಗೂ ಸ್ತ್ರೀಯರಿಗೂ ಸ್ವಾತಂತ್ರ್ಯವಿರಲಿಲ್ಲ.

ಅಸ್ಸೀರಿಯದಲ್ಲೂ ಮೊದಲು ಮತಪ್ರಾಬಲ್ಯವು ಹೆಚ್ಚಾಗಿದ್ದು ರಾಜನ ನಿರಂಕುಶಾಧಿಕಾರ ಬೆಳೆಯುತ್ತ ಬಂದು ಅತ್ಯಂತ ಕ್ರೂರ ಶಾಸನಗಳಿಂದ ಸಾಮ್ರಾಜ್ಯದಲ್ಲೆಲ್ಲ ಶಿಸ್ತನ್ನು ಏರ್ಪಡಿಸಿದ್ದಿತು. ಯುದ್ಧಕಲೆಯು ವಿಪರೀತವಾಗಿ ಬೆಳೆದು ನೆರೆಹೊರೆಯ ರಾಜ್ಯಗಳನ್ನು ಗೆಲ್ಲು

ಡಾ. ಶಾಸ್ತ್ರಿಗಳು ಪಾಶ್ಚಾತ್ಯ ದೇಶಗಳಲ್ಲೂ ಪ್ರಸಿದ್ಧಿ ಹೊಂದಿದ ಕೆಲವೇ ಜನ ಕನ್ನಡಿಗ ವಿದ್ವಾಂಸರಲ್ಲೊಬ್ಬರು. ಪ್ರಸ್ತುತ ಲೇಖದಲ್ಲಿ ಅವರು ಪಾಶ್ಚಾತ್ಯ ಮತ್ತು ಪೌರಸ್ತ್ಯ ರಾಜ್ಯಶಾಸ್ತ್ರಗಳ ಮೂಲ ತತ್ತ್ವಗಳಲ್ಲಿ ಇರುವ ಅಂತರವನ್ನು ತೋರಿಸಿಕೊಟ್ಟು, ಮಾನವನ ಉನ್ನತಿಗೆ ಅಗತ್ಯವಾದ ಆಧ್ಯಾತ್ಮಿಕ ತತ್ತ್ವಗಳನ್ನಾಧರಿಸಿದ ಭಾರತೀಯ ಪದ್ಧತಿಯೇ ಹೆಚ್ಚು ಶ್ರೇಯಸ್ಕರವೆಂದು ಪ್ರತಿಪಾದಿಸಿದ್ದಾರೆ.

ವನದಲ್ಲೇ ಪರ್ಯವಸಾನವಾಯಿತೇ ಹೊರತು ಮತ್ತಾವ ವಿಧದಲ್ಲೂ ಸಂಸ್ಕೃತಿಯ ಪ್ರಗತಿ ಉಂಟಾಗಲಿಲ್ಲ.

ಹೀಗೆ ನಾಗರಿಕತೆ ಮೆಸೊಪೊಟೇಮಿಯ ಮತ್ತು ಈಜಿಪ್ಟ ದೇಶಗಳಲ್ಲಿ ದೇವಾಲಯ-ರಾಷ್ಟ್ರರೂಪವಾಗಿ ಆರಂಭವಾಯಿತು. ಆದರೆ ಈ ನಾಗರಿಕತೆ ಕೇವಲ ಪ್ರಾಪಂಚಿಕ ವ್ಯವಹಾರದಲ್ಲೇ ಕೊನೆಗೊಂಡಿತು. ಲಿಪಿ, ಗಣನೆ, ಜ್ಯೋತಿಷ ಮುಂತಾದ ಶಾಸ್ತ್ರಗಳೆಲ್ಲ ಕೇವಲ ಸ್ಥಾಯಿ ಸಂಸ್ಕೃತಿಗೆ ಉಪಷ್ಟಂಭಕವಾಗಿ ದೇವಾಲಯ ಮತ್ತು ರಾಜಾಲಯಗಳ ಉಪಯೋಗಕ್ಕೆ ಪರಿಣಮಿಸಿದವೇ ವಿನಾ ಭರತಖಂಡದಂತೆ ವ್ಯಕ್ತಿಸ್ವಾತಂತ್ರ್ಯ ಆಧ್ಯಾತ್ಮಿಕ ವಿವೇಚನೆಯ ಕಡೆಗೆ ತಿರುಗಲಿಲ್ಲ. ಇದರಿಂದ ಸಾಮ್ರಾಜ್ಯ ತತ್ತ್ವ ಮತ್ತು ಯುದ್ಧಗಳೇ ಫಲಿಸಿ ಕೊನೆಗೆ ವಿನಾಶವಾಯಿತು. ನ್ಯಾಯಧರ್ಮಗಳು ಸರ್ವಹಿತಕ್ಕಲ್ಲದೆ ಕೇವಲ ಉತ್ತಮ ವರ್ಗದವರಿಗಾಗಿಯೇ ಸ್ಥಾಪಿತವಾಗಿದ್ದವು.

ಆಧುನಿಕ ಪಾಶ್ಚಾತ್ಯ ಸಂಸ್ಕೃತಿಗೆ ಗ್ರೀಕ್-ರೋಮನ್ನರ ಸಂಸ್ಕೃತಿ ಮತ್ತು ಕ್ರೈಸ್ತ ಮತವೇ ಕಾರಣಗಳೆಂದು ಹೇಳಲಾಗಿದೆ. ಗ್ರೀಕರ ಸಂಸ್ಕೃತಿ ಕೂಡ ಕ್ರೀಟನ್-ಮೈಕೆನಿಯನ್ ಪ್ರಭಾವದಿಂದ ಬೆಳೆಯಿತೆಂದು ಇತ್ತೀಚಿನ ಶೋಧನೆಗಳಿಂದ ಕಂಡುಬಂದಿದೆ. ಕ್ರೀಟನ್ ಸಂಸ್ಕೃತಿಯಾದರೂ ಮೆಸೊಪೊಟೇಮಿಯ ಮತ್ತು ಈಜಿಪ್ಟ ತತ್ತ್ವಗಳನ್ನೇ ಅನುಸರಿಸಿದ್ದಿತು. ಅಲ್ಲಿಯೂ ನಿರಂಕುಶಾಧಿಕಾರ, ಮತಪ್ರಾಬಲ್ಯ, ಆಧ್ಯಾತ್ಮ ವಿಚಾರಗಳ ಅಭಾವ ಕಂಡುಬರುವದು. ಗ್ರೀಕರು ಮೊದಲು ಪ್ರವೇಶಿಸಿದಾಗ ಆರ್ಯಜನಾಂಗಕ್ಕೆ ಸಹಜವಾದ ವ್ಯಕ್ತಿಸ್ವಾತಂತ್ರ್ಯ, ಆಧ್ಯಾತ್ಮ ವಿಚಾರ, ವಿವೇಚನೆ ಮತ್ತು ಕೌತೂಹಲ ಹೊಂದಿದ್ದರೆಂದು ಹೋಮರನ ಗ್ರಂಥಗಳಿಂದ ಕಂಡುಬರುವದು. ಆದರೆ ಸ್ವಲ್ಪ ಕಾಲದಲ್ಲೇ ಈ ಪ್ರಗತಿಮಾರ್ಗವನ್ನು ಬಿಟ್ಟು "ಪಾಲಿಸ್" ಎಂಬ "ದೇವಾಲಯರಾಷ್ಟ್ರ", ಗುಲಾಮತನ, ಸಾಮ್ರಾಜ್ಯಾಕಾಂಕ್ಷೆಗಳನ್ನು ಹಿಂದಿನ ಸಂಸ್ಕೃತಿಗಳಿಂದ ಕಲಿತು ಅದೇ ದಾರಿ ಹಿಡಿಯಲು ಆರಂಭಿಸಿ ಕೊನೆಗೆ ನಾಶವಾದರು. ಆದರೂ ಸಾಕ್ರೆಟೀಸ್, ಪ್ಲೇಟೋ ಅರಿಸ್ಟೋಟಲನಂತಹವರು ಇದನ್ನು ಪ್ರತಿಭಟಿಸಿ, ಆಧ್ಯಾತ್ಮ ವಿವೇಚನೆ, ವ್ಯಕ್ತಿ ಮತ್ತು ಸಮಾಜದ ಸ್ವಾತಂತ್ರ್ಯ, ತರ್ಕಶಾಸ್ತ್ರದ ಅವಶ್ಯಕತೆಯನ್ನು ಪ್ರತಿಪಾದಿಸಿ ಅದಕ್ಕಾಗಿ ತಮ್ಮ ಪ್ರಾಣಗಳನ್ನು ತ್ಯಜಿಸಲು ಸಿದ್ಧರಾದರು. ವ್ಯಕ್ತಿತ್ವವನ್ನು ಕಾಪಾಡಿಕೊಳ್ಳುವದು, ಬೆಳೆಸುವದು, ಆತ್ಮಸಂಯಮನ, ನಿರ್ಭಯವಾಗಿ ತರ್ಕಿಸುವದು ಪ್ರತಿಯೊಬ್ಬನ ಮೂಲಭೂತ ಹಕ್ಕು. ಇದನ್ನು ಕಾಪಾಡುವದಕ್ಕಾಗಿ ಸರಕಾರವು. ಆದ್ದರಿಂದ ನಗರರಾಷ್ಟ್ರ (City-State), ದೇವಾಲಯ ರಾಷ್ಟ್ರ (Temple-State) ದಿಂದ ಮುಂದುವರೆಯಿತು. ಪ್ಲೇಟೊ ಮತ್ತು ಅರಿಸ್ಟೋಟಲ್ ಇಬ್ಬರೂ ವ್ಯಕ್ತಿಯ ಸಂಪೂರ್ಣವಿಕಾಸಕ್ಕೆ ರಾಜನೀತಿ ಅವಶ್ಯಕವೆಂದೂ ಆದರೆ ಆ ರಾಜನೀತಿಯನ್ನು ಜಾರಿಗೆ ತರುವವ ಆತ್ಮತತ್ತ್ವ ಶಿಕ್ಷಣ ಪಡೆದ, ಇಂದ್ರಿಯನಿಗ್ರಹ ಮಾಡಿದ, ಯಾವ ಆಸ್ತಿಪಾಸ್ತಿ ಹೊಂದದ, ಕೆಲವರಿಗೆ ಮಾತ್ರ ಸಾಧ್ಯವಾದುದರಿಂದ ಸಾಮಾನ್ಯ ರೀತಿಯ ಪ್ರಜಾಪ್ರಭುತ್ವವನ್ನು ಖಂಡಿಸಿರುವರು. ಅಂತಹ ಅಧಿಕಾರಿಗಳನ್ನು ತಯಾರಿಸಲು ಉಚಿತವಾದ ವಿದ್ಯಾಭ್ಯಾಸ ಅವಶ್ಯಕ. ರಾಜನೀತಿಯು ಧರ್ಮಶಾಸ್ತ್ರಕ್ಕೆ ಅಧೀನವಾಗಿರಬೇಕು. ಆದರೆ ಈ ರಾಜಕೀಯ ತತ್ತ್ವಗಳೆಲ್ಲ ಅರಣ್ಯರೋದನದಂತೆ ನಿಷ್ಫಲವಾಗಿ ಅಲೆಗ್ಝಾಂಡರನ ಸಾಮ್ರಾಜ್ಯಾಭಿಲಾಷೆಯಲ್ಲಿ ಅದೃಶ್ಯವಾದವು. ಗ್ರೀಕ ಸಂಸ್ಕೃತಿಯು ಅಲೆಗ್ಝಾಂಡರನ ಏಕಾಧಿಪತ್ಯ ತತ್ತ್ವದಲ್ಲೂ ಅನಂತರ ರೋಮನ್ನರ ಸಾಮ್ರಾಜ್ಯ ತತ್ವದಲ್ಲೂ ಮುಳುಗಿಹೋಗಿ ಯುರೋಪಿನ "ಅಂಧಕಾರ ಯುಗ" ದಲ್ಲಿ ಸುಷುಪ್ತಾವಸ್ಥೆಯನ್ನು ಅನುಭವಿಸಬೇಕಾಯಿತು. ರೋಮನ್ನರು ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿ ಪಾಶ್ಚಾತ್ಯರಿಗೆ ಆಡಳಿತ ಮತ್ತು ಸೈನಿಕ ವ್ಯವಸ್ಥೆಗಳ ಪರಿಚಯವನ್ನು ಮಾಡಿಕೊಟ್ಟರು. ಆದರೂ ಸಾಮಾನ್ಯ ಜನರ ವ್ಯಕ್ತಿಸ್ವಾತಂತ್ರ್ಯವೆಂಬುದು ಅಪರೂಪ.

### ಕ್ರಿಸ್ತೋತ್ತರ ಯುಗದಲ್ಲಿ

ಕ್ರೈಸ್ತ ಮತವು ಅತ್ಯಂತ ಪೂರ್ವಾಚಾರ ಪರಾಯಣರಾದ 'ದೈವಾಧಿಕಾರ' (Theocracy) ತತ್ತ್ವವನ್ನನುಸರಿಸುತ್ತಿದ್ದ ಯಹೂದ್ಯರಿಗೂ ಕೇವಲ ಭೌತಿಕ ವಿಚಾರಮಗ್ನರಾದ ರೋಮನ್ನರ ಸಾಮ್ರಾಜ್ಯಕ್ಕೂ ಪ್ರತಿಭಟನೆಯಾಗಿ ಹುಟ್ಟಿತು. ಮೊದಮೊದಲು ಹೀನಜಾತಿಯವರಲ್ಲಿ ಪ್ರಚಾರ ಹೊಂದಿದುದರಿಂದ ಕ್ರಾಂತಿಕಾರಕವಾಗಿದ್ದಿತು. ಕೇವಲ ಭಾವನಾಪೂರ್ಣವಾಗಿದ್ದುದರಿಂದ ಎಲ್ಲ ಕಲೆಗಳನ್ನೂ ತರ್ಕಶಾಸ್ತ್ರವನ್ನೂ ಅಲ್ಲಗಳೆದು ಪಾಮರರ ಮತ್ತು ಗುಲಾಮರ ಮತವೆಂಬ ಹೆಮ್ಮೆಯಿಂದಲೂ ಏಸೂ ಕ್ರಿಸ್ತನನ್ನಂಗೀಕರಿಸದವರು ತಮ್ಮ ಶತ್ರುಗಳೆಂಬ ಭಾವನೆಯಿಂದಲೂ ಬೆಳೆಯುತ್ತ ಬಂದಿತು. ಪ್ರತಿಯೊಬ್ಬನೂ ಸ್ವಂತ ವಿವೇಚನೆ ಮಾಡದೆ ಮತಕ್ಕೆ ಅಧೀನನಾಗಿ ತಾನು ಹುಟ್ಟಿದ ಅಂತಸ್ತಿನಲ್ಲಿಯೇ ಇದ್ದು ಕರ್ತವ್ಯವನ್ನು ಮಾಡುತ್ತಿದ್ದರೆ ದೇವರ ರಾಜ್ಯ (Civitas Dei) ಸ್ಥಾಪಿಸಬಹುದೆಂದು ಯುರೋಪಿನ "ಅಂಧಕಾರ ಯುಗ"ದ ನಂಬಿಕೆ. ಆ ಕಾಲದ "ಕ್ರಿಶ್ಚಿಯನ್" ರಾಷ್ಟ್ರಗಳು ಈ ನೀತಿಯನ್ನನುಸರಿಸಿ "ಇನ್‌ಕ್ವಿಸಿಷನ್" ಮುಂತಾದ ಹಿಂಸೆಗಳಿಂದ ವ್ಯಕ್ತಿಸ್ವಾತಂತ್ರ್ಯವನ್ನು ಅಣಗಿಸುತ್ತಿದ್ದವು. ಆದರೆ ಪುನಃ ಗ್ರೀಕ್ ಗ್ರಂಥಗಳ ಪ್ರಚಾರದಿಂದ ಹೊಸ ಬೆಳಕು ಬಂದು ಕ್ರೈಸ್ತ ಮತದಲ್ಲಿ ಕ್ರಾಂತಿ ಎದ್ದಿತು. ಪ್ರಾಟೆಸ್ಟೆಂಟರು ತಮ್ಮ ಸ್ವಾತಂತ್ರ್ಯಕ್ಕಾಗಿ ಕ್ಯಾಥೊಲಿಕ್ಕರ ಮೇಲೆ ಯುದ್ಧ ಮಾಡಿದರೂ ಸ್ವಲ್ಪ ಕಾಲದಲ್ಲಿ ತಾವು ಕೂಡ ಅದೇ ಬಲೆಗೆ ಬಿದ್ದರು. ಇದರ ಪರಿಣಾಮ ಆಲಿವರ್ ಕ್ರಾಮ್ವೆಲ್ಲನ ಮತ್ತು ಟ್ಯೂಡರ್, ಸ್ಟೂಯರ್ಟ ರಾಜರ ನಿರಂಕುಶಾಧಿಕಾರ. ಗ್ರೀಕರ ವಿಶಾಲ ಮನೋಭಾವನೆಗಳು ಅದೃಶ್ಯವಾಗಿ ಯುರೋಪಿನಲ್ಲೆಲ್ಲ ರಾಜರೇ ಸರ್ವಾಧಿಕಾರಿಗಳಾಗಿ ಸಾಮ್ರಾಜ್ಯಾಭಿಲಾಷೆಯಿಂದ ಯುದ್ಧಗಳನ್ನು ನಡೆಸುತ್ತ ಜನರನ್ನು ಅಧೋಗತಿಗೆ ಎಳೆದು "ನಾನೇ ರಾಷ್ಟ್ರ" (I am the State) ಎನ್ನಲು ಆರಂಭಿಸಿದರು.

ಹದಿನೆಂಟನೆಯ ಶತಮಾನದ ಅಂತ್ಯಭಾಗದಲ್ಲಿ ಅಮೇರಿಕ ಮತ್ತು ಫ್ರಾನ್ಸ ದೇಶಗಳ ಕ್ರಾಂತಿಗೆ ಜೀವ-ಕಾರುಣ್ಯ (Humanitarianism) ಮತ್ತು ತರ್ಕಬುದ್ಧಿ ಕಾರಣಗಳಾದವು. ಸ್ವಾತಂತ್ರ್ಯ, ಸಮತೆ, ಸೌಭ್ರಾತೃತ್ವಗಳೆಂಬ ಮೂರು ಅಂಶಗಳು ನಿರಂಕುಶಾಧಿಕಾರ ತತ್ವವನ್ನು ಪ್ರತಿಭಟಿಸಲು ಪ್ರತಿಪಾದಿತವಾದವು. ರೂಸೋ, ಮಾಂಟೆಸ್ಕ್ಯು, ಬರ್ಕ ಮುಂತಾದವರು ಭಾವನಾಪ್ರಧಾನವಾದಗಳನ್ನು ಚಾರಿತ್ರಿಕ ದೃಷ್ಟಾಂತಗಳಿಂದ ಸಮರ್ಥಿಸಲು ಯತ್ನಿಸಿದರು. ಮನುಷ್ಯನು ರಾಜಕೀಯ ಪಶು. ಆದುದರಿಂದ ಪ್ರತಿ ರಾಜಕೀಯ ವ್ಯವಸ್ಥೆಯೂ ಸರ್ವಸಮ್ಮತಿ (General Will)ಯ ಆಧಾರದ ಮೇಲೆ ನಿಲ್ಲಬೇಕು. ರೂಸೋ ಪ್ರಜಾಪ್ರಭುತ್ವ ತತ್ತ್ವವನ್ನೂ ಕ್ರಾಂತಿಯನ್ನೂ ಉಪದೇಶಿಸಿದನು. ಆದರೆ ಬರ್ಕ ಹಿಂದಿನ ಬೆಳವಣಿಗೆಗೆ ವಿರುದ್ಧವಿಲ್ಲದಂತೆ ಪ್ರಗತಿಯಾಗಬೇಕೆಂದು ವಾದ ಮಾಡಿದನು. ವಿಶ್ವವ್ಯವಸ್ಥೆ ವಿಜ್ಞಾನದ ಆಧಾರದ ಮೇಲೆ ನಿಂತಿರಬೇಕು. ವಿಜ್ಞಾನ

ಪರಿಶೋಧನೆಗಳಿಂದ ಹತ್ತೊಂಬತ್ತನೆಯ ಶತಮಾನದಲ್ಲಿ ಕಾರ್ಮಿಕ ಕ್ರಾಂತಿಯಾಯಿತು. ಇದರ ಪರಿಣಾಮವಾಗಿ ಸಮಾಜದಲ್ಲಿಯೂ ಆರ್ಥಿಕ ವ್ಯವಸ್ಥೆಯಲ್ಲೂ ಅತ್ಯಂತ ಬದಲಾವಣೆಗಳಾದವು. ಯುರೋಪಿನ ಜನಾಂಗಗಳ ಕೈಗಾರಿಕೆ ವ್ಯಾಪಾರಗಳು ವಿಶ್ವವ್ಯಾಪ್ತಿ ಹೊಂದುತ್ತಿರಲು ಅದಕ್ಕೆ ಉಪಷ್ಟಂಭಕವಾಗಿ ವಲಸೆಗಳು, ಸಾಮ್ರಾಜ್ಯಗಳು ಬೆಳೆದವು. ಈ ಸಾಮ್ರಾಜ್ಯಗಳಿಗೆ ಆರ್ಥಿಕ ಕಾರಣಗಳಿಂದ ಘರ್ಷಣೆಗಳುಂಟಾಗಿ ಪ್ರಪಂಚಯುದ್ಧಗಳಾರಂಭವಾದವು. ಬಂಡವಾಳಶಾಹಿಯೇ ಇದಕ್ಕೆ ಮೂಲಕಾರಣವೆಂದು ಕಾರ್ಲ ಮಾರ್ಕ್ಸ್ ಕಾರ್ಮಿಕರ ಪಕ್ಷವನ್ನು ವಹಿಸಿ ತನ್ನ ಸಮತಾವಾದವನ್ನು ಪ್ರತಿಪಾದಿಸಿದನು. ರಷ್ಯದಲ್ಲಿ ಲೆನಿನ್, ಟ್ರಾಟ್ಸ್ಕಿ, ಸ್ಟಾಲಿನ ಮುಂತಾದವರು ಕಾರ್ಲ ಮಾರ್ಕ್ಸ್‌ನ ಶುದ್ಧ ಸಮತಾವಾದವನ್ನು ಬಿಟ್ಟು ರಷ್ಯ ದೇಶದಲ್ಲೆಲ್ಲ ರಾಷ್ಟ್ರ-ಬಂಡವಾಳತನ ಮತ್ತು ರಾಷ್ಟ್ರ-ಭಾವನೆ (Nationalism) ಆಧಾರದ ಮೇಲೆ ವ್ಯವಸ್ಥೆ ಮಾಡಿದರು. ಸಂಪೂರ್ಣ ವಿಶ್ವಸಮತೆಯು ಸದ್ಯದ ಪರಿಸ್ಥಿತಿಯಲ್ಲಿ ಸಾಧ್ಯವಲ್ಲವೆಂದು, ಒಂದು ದೇಶದಲ್ಲಿ ಸಮತಾವಾದವು ವಿಜಯ ಹೊಂದಿದರೆ ಬಂಡವಾಳಶಾಹಿ ಮತ್ತು ಸಾಮ್ರಾಜ್ಯ ತತ್ವಗಳು ಅವಷ್ಟಕ್ಕವೇ ನಾಶವಾಗುವವೆಂದು, ವಿಶ್ವಯುದ್ಧಗಳು ಜನಾಂಗಗಳಲ್ಲಿರುವ ಪ್ರತ್ಯೇಕ ಮನೋಭಾವಗಳನ್ನು ಹೋಗಲಾಡಿಸಿ ಬಂಡವಾಳಶಾಹಿಯ ಕಟ್ಟನ್ನು ಸಡಲಿಸಿದ ಮೇಲೆ ಉಚಿತ ಕಾಲವನ್ನರಿತ ಕೆಲವರು ಹಿಂಸೆ, ಬಲಾತ್ಕಾರದಿಂದ ಸಮತಾಸಮಾಜವನ್ನು ಸ್ಥಾಪಿಸಬಹುದೆಂದು ಸಮತಾವಾದಿಗಳ ನಂಬಿಕೆ. ಕಾರ್ಮಿಕರ ರಾಷ್ಟ್ರದಲ್ಲಿ ಪ್ರತಿಯೊಬ್ಬನಿಗೂ ಉದ್ಯೋಗ, ಆಹಾರ ಒದಗಿಸುವದೇ ಧ್ಯೇಯವಾದರೂ ವ್ಯಕ್ತಿಸ್ವಾತಂತ್ರ್ಯವಿಲ್ಲ. ಇದೇ ತತ್ವವನ್ನು ಜರ್ಮನಿ, ಇಟಲಿಯಲ್ಲಿ ರಾಷ್ಟ್ರೀಯತೆಯ ಆಧಾರದ ಮೇಲೆ ಸ್ಥಾಪಿಸಿದ ಫಲವಾಗಿ ಯುರೋಪಿನಲ್ಲಿ ಆರಂಭವಾದ ಯುದ್ಧವು ವಿಶ್ವವ್ಯಾಪ್ತಿ ಹೊಂದಿತು. ಅದರ ಪರಿಣಾಮವನ್ನು ಪ್ರಪಂಚದವರೆಲ್ಲರೂ ಅನುಭವಿಸಬೇಕಾಗಿದೆ. ವಿಶ್ವಶಾಂತಿ, ವಿಶ್ವ ರಾಜಕೀಯ ವ್ಯವಸ್ಥೆಗಳನ್ನು ಮಾಡಲು "ಲೀಗ್ ಆಫ್ ನೇಷನ್ಸ್" ಮತ್ತು "ಯುನಾಯಿಟೆಡ್ ನೇಷನ್ಸ್ ಆರ್ಗನಿಸೇಷನ್" ಸ್ಥಾಪಿತವಾದರೂ ಇವುಗಳು ಕೂಡ ಕೆಲವು ಪ್ರಬಲ ರಾಷ್ಟ್ರಗಳ ಕೈವಾಡದಲ್ಲಿ ಸಿಕ್ಕಿಕೊಂಡಿರುವದರಿಂದ ವಿಶ್ವವ್ಯವಸ್ಥೆಯು ಇದುವರೆಗೂ ಯಶಸ್ವಿಯಾಗಿಲ್ಲ.

ಪಾಶ್ಚಾತ್ಯ ರಾಜಕೀಯ ಬೆಳವಣಿಗೆಯ ಸಿಂಹಾವಲೋಕನದಿಂದ ನಾಲ್ಕು ಮುಖ್ಯಾಂಶಗಳು ಕಂಡುಬರುವವು. ದೇವಾಲಯ ರಾಜ್ಯಪದ್ಧತಿಯಿಂದ ಆರಂಭವಾದ ನಿರಂಕುಶ ಪ್ರಭುತ್ವವನ್ನು ಪ್ರತಿಭಟಿಸಿ ಮುಖ್ಯವಾಗಿ ಗ್ರೀಸ್ ದೇಶದಲ್ಲಿ ಹುಟ್ಟಿದ ತಾರ್ಕಿಕ ದೃಷ್ಟಿ; ವಿಶ್ವಧರ್ಮದ ಮೇಲುಗಾರಿಕೆ; ಸಹನೆ; ಜೀವಕಾರುಣ್ಯ ಮತ್ತು ವ್ಯಕ್ತಿಸ್ವಾತಂತ್ರ್ಯ. ಹತ್ತೊಂಬತ್ತನೆಯ ಶತಮಾನದಲ್ಲಿ ಕಾರ್ಮಿಕ ಕ್ರಾಂತಿಯ ಫಲವಾಗಿ ಮಧ್ಯವರ್ಗದವರ ಪ್ರಾಬಲ್ಯ ಹೆಚ್ಚಿತು. ವಿದ್ಯಾಭ್ಯಾಸ, ವಾಹನಸೌಕರ್ಯ, ವಿಜ್ಞಾನದ ಬೆಳವಣಿಗೆಯಿಂದ ಪ್ರಪಂಚವೆಲ್ಲವೂ ಒಂದಾದರೂ ಬಂಡವಾಳಶಾಹಿ, ರಾಷ್ಟ್ರೀಯಮನೋಭಾವ ಮತ್ತು ಶ್ವೇತ ಜಾತಿಗಳ ಸಾಮ್ರಾಜ್ಯತತ್ವಗಳಿಂದ ಪ್ರಗತಿಯು ಸಂಕುಚಿತವಾಯಿತು. ಧಾರ್ಮಿಕ ದೃಷ್ಟಿಯಿಲ್ಲದೆ ಕೇವಲ ಸ್ವಾರ್ಥತೆಯೇ ಬೆಳೆಯುತ್ತ ಬಂದು ಪಾಶ್ಚಾತ್ಯ ಮಾನವನು ವಿಜ್ಞಾನದ ಫಲವನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲು ಶಕ್ತನಾಗದೆ ಯಂತ್ರಯುಗಕ್ಕೆ ಬಲಿಯಾಗುತ್ತಿರುವನು. ಸೆಮಿಟಿಕ್ ಮನೋವೃತ್ತಿಯಿಂದ ಉದ್ಭವಿಸಿದ ಯಹೂದ್ಯ, ಕ್ರೈಸ್ತ ಮತ್ತು ಇಸ್ಲಾಂ ಮತಗಳು ವಿಜ್ಞಾನವನ್ನೆದುರಿಸಲಾರದೆ ಕ್ಷೀಣಿಸುತ್ತಿರುವವು. ಪಾಶ್ಚಾತ್ಯರು ಕೇವಲ ಭೌತಿಕ ದೃಷ್ಟಿಯಿಂದ ಒಂದು ವಿಧವಾದ ಸಮತಾವಾದದ ವ್ಯಾಮೋಹಕ್ಕೆ ಸಿಕ್ಕಿರುವರು. ಇದರಿಂದ ನೈಸರ್ಗಿಕ ಜೀವನವೇ ಅದೃಶ್ಯವಾಗುತ್ತಿರುವದು.

### ಚೀನ-ಭಾರತಗಳಲ್ಲಿ

ಇನ್ನು ಪೌರಸ್ತ್ಯ ದೇಶಗಳಾದ ಭಾರತ ಮತ್ತು ಚೀನ ದೇಶಗಳ ಚರಿತ್ರೆಯನ್ನವಲೋಕಿಸಿದರೆ ಮುಖ್ಯವಾಗಿ ಕಂಡುಬರುವದು ಧಾರ್ಮಿಕ ದೃಷ್ಟಿ. ಚೀನ ದೇಶದಲ್ಲಿ ಕ್ರಿಸ್ತಪೂರ್ವ ೨೦೦೦ ದಲ್ಲೇ ಸಾಮ್ರಾಜ್ಯಗಳುಂಟಾದವು. ಅಲ್ಲಿನ ಕಂಫ್ಯೂಷಿಯನ್ ಮತ್ತು ತಾಯೋ ಮತಗಳು ಕೇವಲ ನೀತಿಪ್ರತಿಪಾದಕವಾಗಿದ್ದು ಆಧ್ಯಾತ್ಮದ ಕಡೆಗೆ ತಿರುಗಲಿಲ್ಲ. ಜೀವನದಲ್ಲಿ ನೀತಿವರ್ತನೆ ಅವಶ್ಯಕವಾದರೂ ಅದಕ್ಕೆ ಹಿನ್ನೆಲೆಯಾಗಿ ಅಧ್ಯಾತ್ಮಿಕ ತಳಹದಿ ಇಲ್ಲದಿದ್ದರೆ ಜೀವನ ಸೌಖ್ಯವಿರುವದಿಲ್ಲವೆಂಬುದು ನಿರ್ವಿವಾದ. ಬೌದ್ಧ ಮತವು ಭರತಖಂಡದಲ್ಲಿ ಹುಟ್ಟಿ ಚೀನ ದೇಶದಲ್ಲಿ ವ್ಯಾಪಿಸಿ ಜೀವಕಾರುಣ್ಯವನ್ನು ಉಪದೇಶ ಮಾಡಿತು. ಆದರೆ ಇದು ಕೇವಲ ವ್ಯಕ್ತಿಗಳಿಗೆ ಮಾತ್ರವಾದುದರಿಂದ ಸರಕಾರಪದ್ಧತಿಯಲ್ಲಿ ಯಾವ ವ್ಯತ್ಯಾಸವನ್ನೂ ಮಾಡಲಿಲ್ಲ. ಪಾಶ್ಚಾತ್ಯ ಸಂಪರ್ಕದಿಂದ ಪ್ರಾಚೀನ ಸಾಮಾಜಿಕ, ರಾಜಕೀಯ ವ್ಯವಸ್ಥೆಯು ಕಳಚಿಹೋಗಿ ಈಗ ಸಮತಾವಾದವೇ ಪ್ರಬಲವಾಗುತ್ತಿದೆ. ಜಪಾನಿನಲ್ಲಿ ಯುದ್ಧಪಕ್ಷದವರ ಕೈಗೆ ರಾಜಕೀಯವು ಸಿಕ್ಕಿ ವಿನಾಶವನ್ನುಂಟುಮಾಡಿತು. ದೂರ ಪ್ರಾಚ್ಯ ದೇಶಗಳಲ್ಲಿಯೂ ಸಮತಾವಾದವು ಬೆಳೆಯುತ್ತಿದೆ. ಹೀಗೆ ಪ್ರಪಂಚದ ರಾಷ್ಟ್ರಗಳೆಲ್ಲ

ಸ್ಥೂಲವಾಗಿ ಎರಡು ಪಕ್ಷಗಳನ್ನು ಹಿಡಿದು ಮತ್ತೊಂದು ಮಹಾ ಯುದ್ಧಕ್ಕೆ ಪೀಠಿಕೆ ಹಾಕುತ್ತಿವೆ. ವಿಶ್ವಶಾಂತಿ, ಧರ್ಮದ ಅಧಿಕಾರ, ಅಂತರರಾಷ್ಟ್ರೀಯ ಸೌಹಾರ್ದ, ವ್ಯಕ್ತಿ-ಸ್ವಾತಂತ್ರ್ಯಗಳೆಂಬ ಧ್ಯೇಯ ಗಳೆಲ್ಲವೂ ಬಾಯಿ ಮಾತಿನಲ್ಲೇ ಉಳಿದು ಕಾರ್ಯರೂಪಕ್ಕೆ ತರಲು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾಗುತ್ತಿವೆ. ವ್ಯಕ್ತಿ ಮತ್ತು ಸಮಾಜ ಗಳಿಗೆ ಯಾವ ವಿಧವಾದ ಆರ್ಥಿಕ, ಸಾಮಾಜಿಕ, ಆಧ್ಯಾತ್ಮಿಕ ಮತ್ತು ರಾಜಕೀಯ ಸಂಬಂಧವಿರಬೇಕೆಂಬ ಮೂಲತತ್ವಗಳನ್ನು ನಿಶ್ಚಯಿಸದೆ ಇರುವದೇ ಆಧುನಿಕ ಪ್ರಪಂಚದ ಅಧೋಗತಿಗೆ ಕಾರಣ.

ಭರತಖಂಡದಲ್ಲಿ ಅತ್ಯಂತ ಪ್ರಾಚೀನ ಕಾಲದಲ್ಲಿಯೇ ವ್ಯಕ್ತಿ-ಸಮಾಜ ಸಮಸ್ಯೆಯನ್ನು ಬಗೆಹರಿಸಲಾಯಿತು. ಧರ್ಮವೆಂಬ ಶಾಶ್ವತಾಧಾರದ ಮೇಲೆ ವರ್ಣಾಶ್ರಮಗಳು, ಅವುಗಳನ್ನನುಸರಿಸಿ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಗಳು ನಿರ್ಮಿತವಾದವು. ವ್ಯಕ್ತಿ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಸಮಾಜದಲ್ಲಿ ಭಾಗವಹಿಸುವ ಅನುಕೂಲವು ಕಲ್ಪಿತವಾಯಿತು. ಗುಣಕರ್ಮವಿಭಾಗವನ್ನನುಸರಿಸಿ ಸಮಾಜದಲ್ಲಿ ವರ್ಗಗಳು ಹುಟ್ಟುವದು ನೈಸರ್ಗಿಕವಾದುದು. ಆದರೆ ಸಮಾಜವು ಕಾಲಕ್ಕೆ ತಕ್ಕಂತೆ ಬದಲಾವಣೆಯಾಗುವದೆಂಬ ತತ್ತ್ವವನ್ನು ನಮ್ಮ ಧರ್ಮಶಾಸ್ತ್ರಕಾರರು ತಿಳಿದಿದ್ದರು. ಧರ್ಮಶಾಸ್ತ್ರಗಳ ಚರಿತ್ರೆಯನ್ನು ನೋಡಿದರೆ ಹೇಗೆ ಮನು, ಪರಾಶರ, ದೇವಲ, ಯಾಜ್ಞವಲ್ಕ ಮುಂತಾದವರ ಗ್ರಂಥಗಳು ಸ್ತ್ರೀಸ್ವಾತಂತ್ರ್ಯ, ಆಸ್ತಿ ವಿಭಾಗ ಇತ್ಯಾದಿ ವಿಷಯಗಳಲ್ಲಿ ಬದಲಾವಣೆ ಮಾಡಿರುವವೆಂಬುದು ವಿದಿತವಾಗುವದು. ವರ್ಣಗಳು ವೈಷಮ್ಯ ಹುಟ್ಟಿಸದೆ ಸರ್ವಜನಸುಖಕ್ಕಾಗಿ ಹೇಗೆ ಸಹಕರಿಸಬಹುದೆಂದು ತಿಳಿಸುತ್ತವೆ. ವರ್ಣವು ಸಮಾಜ ದೃಷ್ಟಿಯಿಂದ, ಆಶ್ರಮಗಳು ವ್ಯಕ್ತಿದೃಷ್ಟಿಯಿಂದ ಕರ್ತವ್ಯಗಳನ್ನು ನಿರ್ಧರಿಸಿರುವವು. ಪ್ಲೇಟೊ ಕೂಡ ಈ ವಿಧವಾದ ವ್ಯವಸ್ಥೆಯೇ ಉತ್ತಮವೆಂದು ಒಪ್ಪಿಕೊಂಡು ಶುದ್ಧ ಸಮತಾವಾದವು ರಕ್ಷಕ (Gaurdians, ಸಂನ್ಯಾಸಿಗಳು)ರಿಗೆ ಮಾತ್ರ, ಅನ್ವಯಿಸುವದೆಂದು ಇತರರಿಗೆ ಕುಟುಂಬದ ಆಧಾರದ ಮೇಲೆ ಸಮತಾವಾದವು ಉಚಿತವೆಂದು ನಿರ್ಧರಿಸಿದ್ದನು. ಬುದ್ಧನು ಕೂಡ ವರ್ಣಾಶ್ರಮಗಳನ್ನು ಖಂಡಿಸಲಿಲ್ಲ. ಮೂಲ ತತ್ತ್ವವನ್ನೊಪ್ಪಿಕೊಂಡು ತಾನೇ ನಿಜವಾದ ಬ್ರಾಹ್ಮಣ, ಸಂನ್ಯಾಸಿಯೆಂದು ಹೇಳಿಕೊಂಡಿರುವನು.

ಭರತಖಂಡದ ರಾಜಕೀಯ ಪದ್ಧತಿಗಳಲ್ಲಿ ಸಾಮ್ರಾಜ್ಯ, ಭೌಜ್ಯ, ಸ್ವಾರಾಜ್ಯ, ವೈರಾಜ್ಯ, ರಾಜ್ಯ, ಮಹಾರಾಜ್ಯ, ಏಕರಾಜ್ಯ, ಗಣರಾಜ್ಯ ಇತ್ಯಾದಿಗಳೆಲ್ಲವೂ ಕಂಡುಬರುವವು. ಪ್ರಜಾಪ್ರಭುತ್ವ ತತ್ತ್ವವು ವೇದ ಯುಗದಿಂದ ಅನೂಚಾನವಾಗಿ ಬಂದಿರುವದು. ಸಮಾಜದಲ್ಲಿ ಸೌಹಾರ್ದ, ಮಧುರಬಾಂಧವ್ಯ, ಒಗ್ಗಟ್ಟು, ಐಕಮತ್ಯ ಬೇಕೆಂಬುದೇ ಋಗ್ವೇದ ಅಂತ್ಯಸೂಕ್ತದ ಪ್ರಾರ್ಥನೆ.

ಸಂಗಚ್ಛಧ್ವಂ ಸಂವದಧ್ವಂ ಸಂ ವೋ ಮನಾಂಸಿ ಜಾನತಾಮ್ ।
ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ ॥
ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ।
ಸಹಚಿತ್ತಮೇಷಾಮ್ ।
ಸಮಾನಂ ಮಂತ್ರಮಭಿಮಂತ್ರಯೇ ವಃ ಸಮಾನೇ ನವೋ
ಹವಿಷಾ ಜುಹೋಮಿ ॥
ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ ।
ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ ॥

ವರ್ಣಾಶ್ರಮಗಳ ಮೂಲ ತತ್ತ್ವವನ್ನು ತಿಳಿದರೆ ಸಮಾನ ಭಾವವೇ ಉಂಟಾಗುವದೆಂದು ಶ್ರೀಕೃಷ್ಣನು ಬೋಧಿಸಿರುವನು.

ಬ್ರಾಹ್ಮಣೇ ಪುಲ್ಕಸೇ ಸ್ತೇನೇ ಬ್ರಹ್ಮಣ್ಯೇರ್ಕೇ ಸ್ಫುಲಿಂಗಕೇ ।
ಅಕ್ರೂರೇ ಕ್ರೂರಕೇ ಚೈವ ಸಮದೃಕ್ಪಂಡಿತೋ ಮತಃ ॥
ನರೇಷ್ವಭೀಕ್ಷ್ಣಂ ಮದ್ಭಾವಂ ಪುಂಸೋ ಭಾವಯತೋಽಚಿರಾತ್
ಸ್ಪರ್ಧಾಸೂಯಾ ತಿರಸ್ಕಾರಃ ಸಾಹಂಕಾರಾ ವಿಯಂತಿ ಹಿ ॥
ಜ್ಞಾನೇ ಕರ್ಮಣಿ ಯೋಗೇ ಚ ವಾರ್ತಾಯಾಂ ದಂಡಧಾರಣೇ ।
ಯಾವಾನರ್ಥೋ ನೃಣಾಂ ತಾತ ತಾವಾಂಸ್ತೇಽಹಂ ಚತುರ್ವಿಧಃ ॥

( ಶ್ರೀ ಭಾಗವತ ಸ್ಕಂಧ ೧೧ ಅ ೨೯ )

ಭಾರತೀಯರ ಚರಿತ್ರೆಯಲ್ಲಿ ಸತ್ಯ, ಅಹಿಂಸೆ, ಧರ್ಮಗಳಿಗೆ ವ್ಯತಿರಿಕ್ತವಾಗಿ ವರ್ತಿಸಿದ ವೇನನಂತಹ ರಾಜರನ್ನು ಪದಚ್ಯುತರನ್ನಾಗಿ ಮಾಡಿದ ದೃಷ್ಟಾಂತಗಳನೇಕವಿವೆ. ಸ್ವಪ್ರತಿಷ್ಠೆಗಾಗಿ ಯುದ್ಧಗಳನ್ನು ಮಾಡಿ ಭೂಮಿಯನ್ನೆಲ್ಲ ಗೆದ್ದು ತಮ್ಮ ಸಾಮ್ರಾಜ್ಯ ಸ್ಥಾಪಿಸಬೇಕೆಂದು ಯತ್ನಿಸಿದ ರಾಜರನ್ನು ಕಂಡು ಭೂದೇವಿಯು ಪರಿಹಾಸ ಮಾಡುವಳಂತೆ.

ದೃಷ್ಟ್ವಾತ್ಮನಿ ಜಯೇ ವ್ಯಗ್ರಾನ್ ನೃಪಾನ್ ಹಸತಿ ಭೂರಿಯಂ ।
ಅಹೋ! ಮಾಂ ವಿಜಿಗೀಷಂತಿ ಮೃತ್ಯೋಃ ಕ್ರೀಡನಕಾ ನೃಪಾಃ ॥
ಕಾಮ ಏಷ ನರೇಂದ್ರಾಣಾಂ ಮೋಘಃ ಸ್ಯಾದ್ವಿದುಷಾಮಪಿ ।
ಯೇನ ಫೇನೋಪಮೇ ಪಿಂಡೇ ಯೇಽತಿ ವಿಸ್ರಂಭಿತಾ ನೃಪಾಃ ॥
ಏವಂ ಕ್ರಮೇಣ ಜೇಷ್ಯಾಮಃ ಪೃಥ್ವೀಂ ಸಾಗರಮೇಖಲಾಂ ।
ಇತ್ಯಾಶಾಬದ್ಧಹೃದಯಾ ನ ಪಶ್ಯಂತ್ಯಂತಿಕೇಽಂತಕಂ ॥
ಸಮುದ್ರಾವರಣಾಂ ಜಿತ್ವಾ ಮಾಂ ವಿಶಂತ್ಯಬ್ಧಿಯೋಜಸಾ ।
ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಂ ॥

(ಶ್ರೀಭಾಗವತ ಸ್ಕಂಧ ೧೨, ಅ. ೩)

"ದುರಾಶೆಯಿಂದ ಧನಾರ್ಜನೆಗಾಗಿ ಸಮುದ್ರಗಳನ್ನು ದಾಟಿ ದ್ವೀಪಾಂತರಗಳನ್ನು ಗೆಲ್ಲಲುಯತ್ನಿಸುವರು. ಇಂದ್ರಿಯಗಳನ್ನು ಜಯಿಸಿದವರಿಗೆ ಮುಕ್ತಿಯೇ ಆತ್ಮಜಯದ ಫಲವು." ಇಂದ್ರಿಯ ಸಂಯಮನಕ್ಕೆ ಸತ್ಯ, ಅಹಿಂಸೆ, ಬ್ರಹ್ಮಚರ್ಯಗಳೇ ತಳಹದಿ. ಅಶೋಕನು ಒಂದು ಯುದ್ಧದಿಂದಲೇ ವೈರಾಗ್ಯ ಹೊಂದಿ ಇಜಿಪ್ತ, ಗ್ರೀಸ್, ಮ್ಯಾಸಿಡೋನಿಯ, ಕಾರಿಂತ್, ಸಿರಿಯ ಮುಂತಾದ ಪಾಶ್ಚಾತ್ಯ ದೇಶಗಳಲ್ಲಿಯೂ ಪ್ರಚಾರ ಮಾಡಿದುದು ಈ "ಪೋರಾಣ ಪಕತಿ" (ಪುರಾಣ-ಪ್ರಕೃತಿ ಅಥವಾ ಸನಾತನ ಧರ್ಮ) ಯೇ ಹೊರತು ಬೌದ್ಧಮತದ ತತ್ವಗಳನ್ನಲ್ಲ. ಇದಕ್ಕೆ ಅದ್ವೈತ ಭಾವವು ಅವಶ್ಯಕ. ಪರಸ್ಪರ ಭೇದಗಳನ್ನೇ ಬೋಧಿಸುವ ಮತಗಳಿಂದಲೂ ರಾಜಕೀಯ, ಸಾಮಾಜಿಕ ಮತ್ತು

ಆರ್ಥಿಕ ಸಿದ್ಧಾಂತಗಳಿಂದಲೂ ವೈಷಮ್ಯಗಳೂ ಯುದ್ಧಗಳೂ ಹೆಚ್ಚುವವೇ ವಿನಾ ರಾಷ್ಟ್ರದಲ್ಲಿಯಾಗಲಿ, ವಿಶ್ವಪ್ರಪಂಚದಲ್ಲಿಯೇ ಆಗಲಿ ಶಾಂತಿ-ಸುಖಗಳುಂಟಾಗುವದಿಲ್ಲ. ಮಾನವ ಜನಾಂಗಕ್ಕೆ ಒಂದು ಶಾಶ್ವತ ಧ್ಯೇಯ, ನಂಬಿಕೆ ಇಲ್ಲದಿದ್ದರೆ ವಿನಾಶವು ಖಂಡಿತ. ಶಿಸ್ತು ಸ್ವಾತಂತ್ರ್ಯ, ಭದ್ರತೆ-ಪ್ರಗತಿ, ವ್ಯಕ್ತಿವಿಕಾಸ-ಸಮಾಜದ ಬೆಳವಣಿಗೆ ಇತ್ಯಾದಿ ವಿರುದ್ಧಾಂಶಗಳನ್ನೆಲ್ಲ ಸಮನ್ವಯ ಮಾಡಲು ಆಧುನಿಕ ಪ್ರಪಂಚದಲ್ಲಿ ನಿರ್ಭಯ ಅವಶ್ಯಕ. ರಾಜಕೀಯ ಭಯ, ಆಹಾರಾಭಾವದ ಭಯ, ಅಭಿಪ್ರಾಯಪ್ರತಿಪಾದನೆಗೆ ಅಡಚಣೆಗಳ ಭಯ ಮುಂತಾದ ಭಯಗಳನ್ನು ನಿರ್ಮೂಲ ಮಾಡಲು ಸತ್ಯ ಮತ್ತು ಅಹಿಂಸಾಧರ್ಮಗಳ ಮೇಲೆ ನಿಂತ ಅದ್ವೈತದೃಷ್ಟಿಯೇ ಪರಮೌಷಧ. ಈ ಸನಾತನ ಧರ್ಮರಕ್ಷಣೆಗಾಗಿಯೇ ಮಹಾತ್ಮಾ ಗಾಂಧೀಜಿ ಆತ್ಮಯಜ್ಞ ಮಾಡಿದರು. ಇದೇ ಭಾರತೀಯ ಸಂಸ್ಕೃತಿಯ ಮತ್ತು ರಾಜಕೀಯ ನೀತಿಯ ಮೂಲತತ್ವವಾಗಿದೆ. "ಸತ್ಯಮೇವ ಜಯತೇ„ (ನಾನೃತಂ) ಎಂಬ ಭಾರತದ ಆದರ್ಶ ವಾಕ್ಯವೂ ಧರ್ಮಚಕ್ರ ಚಿಹ್ನೆಯೂ ಆಧುನಿಕ ಪಾಶ್ಚಾತ್ಯ-ಪೌರಸ್ತ್ಯ ರಾಷ್ಟ್ರಗಳಲ್ಲಿ ಮನಃಪರ್ಯಯವನ್ನುಂಟುಮಾಡಿ, ಅದ್ವೈತ ತತ್ವದಿಂದ ಭಯವನ್ನು ಹೋಗಲಾಡಿಸಿ ಪ್ರಪಂಚದಲ್ಲಿನ ಪ್ರತಿ ಮಾನವನ ಜೀವನವನ್ನು "ಶಾಂತಂ ಶಿವಂ ಸುಂದರಂ" ಮಾಡುವದೆಂಬ ಭರವಸೆ ಇದೆ.

---

# ನನ್ನ ಅವತಾರ

೧

ರಾಮನ ಬಳಿ ಇದ್ದೆ ನಾನು; ಕಂಡೆ ಕೋದಂಡ ದೋರ್ದಂಡ ಬಲ
ನನ್ನ ಕಣ್ಣ ಮುಂದೆಯೇ ಮೊಳೆತು ಬೆಳೆದ ರೀತಿಯ.
ನನ್ನ ಹಾಗೆ ಅವನು ಕೂಡ ಉಣ್ಣುತಿದ್ದ, ತಿನ್ನುತಿದ್ದ,
ಚಂದ್ರನನ್ನು ತಾಽ ಎಂದು ತಾರುಮಾರು ತೊದಲುತಿದ್ದ,
ಹೀಗೆ ಇರಲು ದೇವತ್ವದ ತರಿಸಲೀಟಿ ತುದಿಯನೇರಿ ಅವನ ಮನ
ಮುಗಿಲ ಚುಚ್ಚಿ ಮುಂದುವರಿದ ಆ ಮಹಾ ಪ್ರತೀತಿಯ
ಕಣ್ಣಾರೆ ಕಂಡೆನಯ್ಯ; ಹೊಗಳಲೆನಲು ಆಡಲಿಲ್ಲ ಏಕೊ ನನ್ನ ನಾಲಗೆ;
ಉಳಿದೆ ನಾನು ಆಗಲೂ ಈಗ ಇಲ್ಲಿ ಕೊಳೆವೊಲು.

೨

ಕೃಷ್ಣನೊಡನೆ ಗೋಕುಲದಲಿ ನಾನು ಕೂಡ ಬೆಣ್ಣೆ ಕದ್ದು
ಗೋಪಿಕೆಯರ ಸೆರಗು ಹಿಡಿದು ಕಾಡುತಿದ್ದೆ ನಿತ್ಯವೂ.
ಅದರೊಳೇನೊ ನಾನೆ ಅವನಿಗಿಂತ ಮೇಲು, ಸತ್ಯವು!
ಅವನೊ ಯೋಗರಾಜನಾದ, ದೊಂಬ ಸುರಿದ ನೀರಿನಿಂದ
ಮಾವಿನೋಟೆ ಚಿಗಿಯುವಂತೆ ಚಿಗಿತ,
ಅಬ್ಬ, ಏನಚ್ಚರಿ! ಮುಗಿಲಿಗೊಂದೆ ನೆಗೆತ!
ಎಂದು ಮನವು ತುಯ್ಯುತಿರೆ, ಇಲ್ಲಿ ಕಾಲು ಅಲ್ಲಿ ತಲೆ
ಅದಕೂ ಆಚೆ ನೋಟ;
ಅಹಾ, ಅದೆಂಥ ಆಟ!
ನಾನೊ? ಸಣ್ಣ ಕಲ್ಲಿನಂತೆ ಕೆಸರ ನಡುವೆ ಉಸಿರು ಕಟ್ಟಿ
ಪಾಚಿಕಟ್ಟಿ ಕಾಯುತಿದ್ದೆ, ರೋಗರಾಜ, ಭೋಗರಾಜ!
ಈಗಿನಂತೆ ಆಗಲೂ!

೩

ಬುದ್ಧನ ಖಾಸಾ ಶಿಷ್ಯ ಯಾರೆಂಬಿರಿ? ನಾನೆ, ನಾನು!
'ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ'
ಎಂದು ಒರಲಿ ನಡೆದರಲ್ಲ ಅವರ ಮುಂದಾಳೆ, ನಾನು;
ಹುಟ್ಟಿಗಿಂತ ಮುನ್ನವೇ ರಾಜತ್ವವ ಬಿಟ್ಟವನು,
ಬೋಧಿವೃಕ್ಷದಡಿಯೆ ಒಮ್ಮೆ ಮೂಗು ಮುಚ್ಚಿ ನೆಟ್ಟವನು,
ನಾನು ಕೂಡ ಹೆಂಡತಿ ಮಕ್ಕಳನು ಬಿಟ್ಟುಕೊಟ್ಟವನು,
ಅವನ ಹಾಗೆ!
ಅವನು ಬುದ್ಧ ಸಿದ್ಧ ಜಗತ್ಪ್ರಸಿದ್ಧನಾಗಿ ಎದ್ದಿದ್ದ!
ಅವನ ಮುಖದ ಕಾಂತಿಯೇನು? ಉಗುವ ಆ ಪ್ರಶಾಂತಿಯೇನು!
ಕೆಂಡದ ಬಳಿ ಇದ್ದು ಕೂಡ ಈ ಇದ್ದಲು ಇತ್ತು ಹಾಗೆ—
ಆಗ ಈಗಿನಂತೆಯೇ ಹೊತ್ತದೇ ಉರಿಯದೆ.

೪

ಗಾಂಧಿ ಬಂದ, ಅವನ ಹಿಂದೆ ಮೊದಲು ಬಂದ ಭೂಪನು
ನಾನೆ! ಅವನ ಕೊರಳಿಗೇರಿದಂಥ ಮೊದಲ ಹಾರವು
ನನ್ನದೇ. ಖಾದಿಯುಡಿರಿ ಎಂದನೋ ಇಲ್ಲವೋ
ಖಾದಿ ತೊಟ್ಟ ಧೀರ ನಾನು! ರಾಟೆ ಹಿಡಿದು ನೂತೆನಯ್ಯ
ಅದರೊಳಿಲ್ಲ ಸಂಶಯ. ಹಾಗೂ ಹೀಗೂ ಜೈಲಿಗೂ
ನುಸುಳಿ ಹೋದೆ ನಿಶ್ಚಯ! 'ಗಾಂಧಿಗೆ ಜೈ, ಗಾಂಧಿಗೆ ಜೈ!'
ಕೊರಲು ಹರಿವ ತನಕವೂ ಕಿರಲುತಿದ್ದೆ ಇಷ್ಟು ದಿನ!
ಈಗ ಹೋದನವನು; ನಾನು ಮಾಡಲೇನು? ತಿಳಿಯದು!
ಅವನು ಒಂದು ಸಲವೊ ಏನೊ ಮಾಂಸ ತಿಂದು ಅತ್ತನು,
ದಿನದಿನವೂ ಅದನೆ ತಿಂದು ಅನುಗಾಲವು ಅಳುವೆ ನಾನು!
ಒಂದು ಸಲವೊ ಏನೊ ಅವನು ಸುಳ್ಳು ಹೇಳಿ ಅಳಲಿದ;
ನನಗೊ ದಿನಾ ಅದೇ ಕೆಲಸ, ಅದೇ ಅಳಲು ಪ್ರತಿದಿನ.
ಅವನೋ ಮಹಾತ್ಮನಾದ; ಅರಳಲಿಲ್ಲ ನನ್ನ ಮನ!

ನಾನು ಅವನು ಒಂದೆ ಲೋಹ
ಕಬ್ಬಿಣ—ಕರಿ—ಕಬ್ಬಿಣ.

ಯಾವ ರಸವು ಸೋಂಕಿತವನ?
ಯಾವ ಬೆಂಕಿ ತಾಕಿತವನ?
ಸಾಯುವಾಗ ಎಂಥ ಗಟ್ಟಿ ಚಿನ್ನವಾಗಿ ಸಾಗಿದ!
ನಾನು ಮಾತ್ರ ಆಗ ಹೇಗೊ ಹಾಗೆಯೇ ಈಗಲೂ.
ಆರೆಂದರೆ ಹಿಗ್ಗಲಿಲ್ಲ, ಮೂರೆಂದರೆ ಕುಗ್ಗಲಿಲ್ಲ;
ನಾನಚ್ಯುತ, ನಾ ನಿರ್ಜರ, ನಾನೇ ಅದ್ವಿತೀಯ!
ಒಂದೆ ರೀತಿ, ಒಂದೆ ನೀತಿ, ಒಂದೆ ಸಮ ನೆಲಮುಟ್ಟ—
ತಿಳಿದಿರೇನು ನೀವು ನನ್ನ ಹೆಬ್ಬಾಳಿನ ಗುಟ್ಟು!

—ಎಂ. ಗೋಪಾಲಕೃಷ್ಣ ಅಡಿಗ

ಭಾರತದ

# ಪ್ರಾಚೀನ ಇತಿಹಾಸದ ಮೇಲೆ ಹೊಸ ಬೆಳಕು

( ಡಾ. ಕೆ. ಕೃಷ್ಣಮೂರ್ತಿ, ಎಂ. ಎ., ಪಿ.ಎಚ್. ಡಿ. )

೧

ವಿಷಯದ ವ್ಯಾಪ್ತಿಯು ಅಮಿತವಾದುದು. ಸಾವಿರಾರು ಪುಟಗಳ ಎಷ್ಟೋ ಪುಸ್ತಕಗಳನ್ನು ಈ ವಿಷಯದ ಮೇಲೆ ಬರೆಯಬೇಕಾದ ಕಾಲವು ಈಗಾಗಲೇ ಒದಗಿಬಂದಿದೆ. ಭಾರತೀಯ ಇತಿಹಾಸ ಪರಿಷತ್ತೇ ಮೊದಲಾದ ವಿದ್ವನ್ಮಂಡಲಿಗಳು ಈ ಕಾರ್ಯವನ್ನಾಗಲೇ ಕೈಗೊಂಡಿವೆ- ಪರಿಮಿತವಾದ ಈ ಲೇಖನದಲ್ಲಿ ವಿಷಯದ ಮಹತ್ವವನ್ನು ಕುರಿತು ಒಂದೆರಡು ಅಂಶಗಳ ಪ್ರಸ್ತಾವ ಮಾಡುವುದಷ್ಟೇ ಲೇಖನದ ಉದ್ದೇಶ.

**ಭಾರತದಲ್ಲಿ ಇತಿಹಾಸದೃಷ್ಟಿ ಗೌಣವಾಗಿದ್ದುದರಿಂದ ಈ ದೇಶದ ಪ್ರಾಚೀನೇತಿಹಾಸ ಈಚೆಗಿನ ವರೆಗೆ ಅಜ್ಞಾತವಾಗಿಯೆ ಇತ್ತು. ಆದರೆ ಈಗೀಗ ದೊರೆತ ಅವಶೇಷಗಳಿಂದ ದಕ್ಷಿಣ ಭಾರತದ ಸಂಸ್ಕೃತಿಯ ಪ್ರಾಚೀನತೆಗೆ ಹೊಸ ಪ್ರಮಾಣಗಳು ದೊರೆತಿವೆ.**

ಭಾರತೀಯರಿಗೆ ಐತಿಹಾಸಿಕ ಮನೋಭಾವವೇ ಇಲ್ಲವೆಂಬುದು ಪಾಶ್ಚಾತ್ಯ ವಿದ್ವಾಂಸರ ಏಕಾಭಿಪ್ರಾಯ. ಅದೃಶ್ಯವಾದ ಲೋಕಾಂತರ ಸುಖಗಳಲ್ಲಿ ಹಂಬಲವೂ ಜನ್ಮಾಂತರಗಳಲ್ಲಿ ನಂಬಿಕೆಯೂ ಕರ್ಮದ ಅನಿವಾರ್ಯ ಫಲಾಫಲಗಳಲ್ಲಿ ಪೌರುಷ ಪ್ರತಿಬಂಧಕವಾದ ಅಂಥ ಶ್ರದ್ಧೆಯೂ ಲೌಕಿಕ ಸುಖವು ಅಸಾರ, ಕ್ಷಣಿಕ, ಮಿಥ್ಯಾ, ಮೊದಲಾದ ಭಾವನೆಗಳಿಂದ ರೂಢಮೂಲವಾದ ವೈರಾಗ್ಯಪ್ರವೃತ್ತಿಯೂ ಭಾರತೀಯರ ಜೀವನದಲ್ಲಿ ಅಚ್ಚಳಿಯದ ಮುದ್ರೆಯನ್ನೊತ್ತಿದುದರ ಪರಿಣಾಮವಾಗಿ ಅವರಿಗೆ ತಮ್ಮ ದೇಶದ ಇತಿಹಾಸದ ಮೇಲೆ ಎಂದೂ ಅಭಿಮಾನ ಪ್ರೀತ್ಯುತ್ಸಾಹಗಳು ಬರಲಿಲ್ಲವೆಂದು ಪಾಶ್ಚಾತ್ಯ ಲೇಖಕರು ಎತ್ತಿ ಒರೆಯುವುದು ಸಂಪ್ರದಾಯವಾಗಿ ಹೋಗಿದೆ. ಆದರೆ ಇದು ಸರ್ವಾಂಶಗಳಲ್ಲಿಯೂ ಭಾರತೀಯರ ಮನೋಭಾವದ ಯಥಾರ್ಥ ವರ್ಣನೆಯಲ್ಲ. ರಾಜರ ವಂಶಾವಳಿಗಳು ಪ್ರಾಯಿಕವಾಗಿ ಎಲ್ಲ ಪುರಾಣಗಳಲ್ಲಿ ಬರುವಂತೆಯೇ, ವಿಶಿಷ್ಟ ರಾಜರ ಚರಿತ್ರೆಗಳೂ ಸ್ವತಂತ್ರ ರಚನೆಗಳಲ್ಲಿ ಅಡಕವಾಗಿವೆ. "ನಾವಿಷ್ಣುಃ ಪೃಥಿವೀಪತಿಃ" "ರಾಜಾ ಕಾಲಸ್ಯ ಕಾರಣಂ" ಮೊದಲಾದ ಉದಾತ್ತ ಭಾವನೆಗಳಿಂದ ಪ್ರೇರಿತರಾದ ಭಾರತೀಯರು ವ್ಯಕ್ತಿಗಳಿಗೆ, ಕೊಟ್ಟಷ್ಟು ಮಹತ್ವವನ್ನು ಕಾಲಕ್ಕೆ ಕೊಡಲಿಲ್ಲವೆನ್ನುವುದು ನಿಜ. ಆದುದರಿಂದಲೇ ಅವರು ಮಹಾರಾಜರ ಮಹಾಕಾರ್ಯಗಳನ್ನು ಉಲ್ಲೇಖಿಸುವಾಗ ದೇವತ್ವವನ್ನಾರೋಪಿಸಿ, ಅಲೌಕಿಕ ಘಟನಾವಳಿಗಳನ್ನೂ ಸೇರಿಸಿಕೊಂಡು ಬರೆದುದು. ಒಂದು ದೃಷ್ಟಿಯಿಂದ ಈ ನಿರೂಪಣಕ್ರಮವು ಉತ್ತಮವೇ ಆದರೂ ಆಧುನಿಕ ಇತಿಹಾಸಾಭ್ಯಾಸಿಗಳಿಗೆ ಇದರಿಂದ ಹೆಚ್ಚು ಉಪಯೋಗವಾಗುವುದಿಲ್ಲ. ನಮ್ಮ ಪ್ರಾಚೀನ ಪುರಾಣಗಳೂ 'ಇತಿಹಾಸ'ಗಳೂ ನೀತಿಬೋಧಕ ಕಾವ್ಯಗಳು. ಶುಷ್ಕವಾದ ಕಾಲನಿರ್ಣಾಯಕ ಕೋಷ್ಟಕಗಳಲ್ಲ. ನಮ್ಮ ಸಾಹಿತ್ಯದ ಇಲ್ಲವೆ ಕಲೆಗಳ ಇಲ್ಲವೆ ದರ್ಶನಶಾಸ್ತ್ರಗಳ ಇತಿಹಾಸವನ್ನು ಕಾಲಮಾನದಿಂದ ನಿರ್ಧರಿಸಲು ನಮ್ಮವರು ಯಾವ ಪ್ರಯತ್ನವನ್ನೂ ಪಟ್ಟಿರಲಿಲ್ಲ. ತತ್ವಪರಿಚಯವೇ ಅವರಿಗೆ ಸಾಕಾಗಿತ್ತು. ಇದರಿಂದ ಅವರಿಗೆ ತಮ್ಮ ಕಾರ್ಯಗಳಲ್ಲಿ ಅಭಿಮಾನವಿರಲಿಲ್ಲವೆಂದು ಹೊರಪಡುವುದಿಲ್ಲ. ಪ್ರತ್ಯುತ, ಅವರಿಗೆ ಕೃತಿಗಳ ವಿಷಯದಲ್ಲಿದ್ದ ಅಭಿಮಾನಾತಿಶಯವೇ ಕಾಲದ ವಿಷಯದಲ್ಲಿ ಅವರ ಅಲಕ್ಷ್ಯಕ್ಕೆ ಕಾರಣವೆನ್ನಬಾರದೇಕೆ?

ಇದು ಹೇಗಾದರೂ ಇರಲಿ. ಭಾರತದ ರಾಜಕೀಯ, ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ, ಹಾಗು ದಾರ್ಶನಿಕ ಇತಿಹಾಸವನ್ನು ನಿರ್ಧರಿಸಿ ಆಧುನಿಕ ಮಾರ್ಗದಲ್ಲಿ ಬರೆಯಲು ಪ್ರಯತ್ನಪಟ್ಟವರಲ್ಲಿ ಪಾಶ್ಚಾತ್ಯರೇ ಅಗ್ರಗಾಮಿಗಳೆಂಬುದನ್ನು ಎಲ್ಲರೂ ಒಪ್ಪಲೇಬೇಕು. ಹೀಗೆ ಇದಂಪ್ರಥಮವಾದ ಇವರ ಇತಿಹಾಸಲೇಖನಪ್ರಯತ್ನದ ಕಾಲಕ್ಕೆ ಇವರಿಗಿದ್ದ ಸಾಧನಸಾಮಗ್ರಿಯೂ ಅಲ್ಪ; ಆ ಸಾಮಗ್ರಿಯನ್ನು ಯಾವ ದುರಾಗ್ರಹಗಳೂ ಇಲ್ಲದೆ ನಿಷ್ಪಕ್ಷಪಾತವಾಗಿ ಮಥಿಸಿ ನಿರ್ಗಳಿತಾರ್ಥವನ್ನು ಕೊಡಬೇಕೆಂಬ ಮನೋವೈಶಾಲ್ಯವೂ ಅಧಿಕವಾಗಿರಲಿಲ್ಲ; ಈ ಕಾರಣಗಳಿಂದ ಅವರು ಗ್ರಂಥಗಳನ್ನು ರಚಿಸಿ ಯಶೋಭಾಜನರಾದರೂ ಆ ಗ್ರಂಥಗಳಲ್ಲಿ ಕೆಲವೊಂದು ನ್ಯೂನತೆಗಳು ಸ್ವಾಭಾವಿಕವಾಗಿಯೇ ಸೇರಿಕೊಂಡವು. ಭಾರತೀಯರಿಗೆ ನಿಜವಾಗಿಯೂ ಸುಖಶಾಂತಿಗಳನ್ನು ಅವಿಚ್ಛಿನ್ನವಾಗಿ ದಯಪಾಲಿಸಿದವರು ಇಂಗ್ಲೀಷರ ಹೊರತು ಮತ್ತಾರೂ ಅಲ್ಲವೆಂಬ ಅಭಿಪ್ರಾಯವೇ ಆ ಪ್ರಥಮ ಪುಸ್ತಕಗಳಲ್ಲಿ ಸುಸ್ಪಷ್ಟವಾಗಿ ಒಡೆದು ಕಾಣುತ್ತದೆ. ಮತೀಯತೆಯ ವೈಷಮ್ಯಗಳಿಗೂ ರಾಜರ ನಿಶ್ಶಂಕ ಹಾಗು ನಿರಂಕುಶ ಪ್ರವೃತ್ತಿಗಳಿಗೂ ಪ್ರಜೆಗಳ ರಾಜಕೀಯ ಅಜ್ಞಾನಕ್ಕೂ ವಿಶೇಷ ಪ್ರಾಮುಖ್ಯ ಸಿಕ್ಕುತ್ತದೆ. ಆದರೆ ಕಾಲಕ್ರಮದಲ್ಲಿ ಹೊಸ ಹೊಸ ಸಾಮಗ್ರಿಗಳು ಸಿಕ್ಕಿದಂತೆಲ್ಲಾ ಹೊಸ ಹೊಸ ಅಂಶಗಳು ಬೆಳಕಿಗೆ ಬಂದು, ತಮ್ಮ ಮೊದಲಿನ ದೃಢೋಕ್ತಿಗಳನ್ನು ಬದಲಾಯಿಸಿ ಹೊಸ ಪುಸ್ತಕಗಳನ್ನೂ ಪಾಶ್ಚಾತ್ಯರೇ ಬರೆದಿರುವದು ಅವರ ಸುಸಂಸ್ಕೃತಿಯ ಕುರುಹೆ ಆಗಿದೆ. ಹೀಗಿದ್ದರೂ ಹೊಸ ಸಾಮಗ್ರಿಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಶಕ್ತಿಯು ಅವರಿಗೆ ಸಂಪೂರ್ಣವಾಗಿದೆಯೆಂದಾಗಲಿ, ಅಥವಾ ಭಾರತೀಯರಿಗಿಂತ ಹೆಚ್ಚಿನ ಮಟ್ಟದಲ್ಲಿದೆಯೆಂದಾಗಲಿ ತಿಳಿಯುವುದು ಯುಕ್ತವಲ್ಲ. ಪ್ರತಿವರ್ಷವೂ ಈ ವಿಶಾಲವಾದ ಭರತಖಂಡದಲ್ಲಿ ಭಾರತ ಸರಕಾರದ ಶಾಸನ ಇಲಾಖೆಯ ಅಧಿಕಾರಿಗಳಿಂದ ಸಾವಿರಾರು ನಾಣ್ಯಗಳೂ ತಾಮ್ರಪಟಗಳೂ ಶಿಲಾಲೇಖಗಳೂ ಪ್ರಕಾಶಿತವಾಗುತ್ತಿವೆ. ಪ್ರತಿವರ್ಷವೂ ಹೊಸ ಹೊಸದಾಗಿ ನೂರಾರು ಪ್ರಾಚೀನ ಗ್ರಂಥಗಳು ಬೆಳಕನ್ನು ಕಾಣುತ್ತಿವೆ. ಇವೆಲ್ಲವೂ ಭಾರತದ ಭಾಷೆಗಳಲ್ಲಿ- ಸಂಸ್ಕೃತ, ಪ್ರಾಕೃತ ಅಥವಾ ಬೇರೆ ಪ್ರಾಂತೀಯ ದೇಶಭಾಷೆಗಳಲ್ಲಿ–ರಚಿತವಾಗಿರುವುದರಿಂದ ಇವುಗಳನ್ನೆಲ್ಲ ಸಾವಧಾನವಾಗಿ

ಓದಿ, ಸರಿಯಾಗಿ ಅರ್ಥಮಾಡಿಕೊಂಡು, ನಮ್ಮ ದೇಶದ ಇತಿಹಾಸ ವನ್ನು ರೂಪಿಸಬೇಕಾಗುತ್ತದೆ. ಈ ಕೆಲಸದಲ್ಲಿ ಕೇವಲ ಸರಕಾರದ ಅಧಿಕಾರಿಗಳಷ್ಟೇ ಅಲ್ಲದೆ ದೇಶದ ಜನತೆಯೇ ಆಸಕ್ತಿವಹಿಸುವವರೆಗೂ ಹೆಮ್ಮೆಪಡುವಂತಹ ಕೆಲಸವಾಗುವುದು ಅಸಂಭವ.

೨

ಪ್ರಾಚ್ಯಸಂಶೋಧದ ಅಂಗಗಳು ಬಹುವಿಧವಾಗಿವೆ; ಇದು ವರೆಗೂ ಭೂಗರ್ಭದಲ್ಲೇ ಅಡಗಿದ್ದು ಇಂದು ವಿಶೇಷ ಪರಿಶ್ರಮದ ಹಾಗು ನಮ್ಮ ಪುಣ್ಯದ ಫಲವಾಗಿ ದೃಗ್ಗೋಚರವಾಗಿರುವ ಅನೇಕಾನೇಕ ಸಾಂಸ್ಕೃತಿಕ ಅವಶೇಷಗಳನ್ನು ಪರೀಕ್ಷಿಸಿ, ತುಲನಾತ್ಮಕ ದೃಷ್ಟಿಯಿಂದ ಅವುಗಳನ್ನು ಅರ್ಥಮಾಡಿ, ಇತಿಹಾಸದ ಪುನರ್ನಿರ್ಮಾಣಕ್ಕೆ ಸಹಾಯತೆಯನ್ನೀಯುವದು ಮೊದಲನೆಯ ಹಾಗು ಅತ್ಯಂತ ಮುಖ್ಯವಾದ ಅಂಗ. ಇದಕ್ಕೆ ಲಿಪಿಶಾಸ್ತ್ರ, ಶಾಸನಶಾಸ್ತ್ರ, ಪ್ರಾಚ್ಯಶೋಧನಶಾಸ್ತ್ರ ಮೊದಲಾದವುಗಳ ಪ್ರಾವೀಣ್ಯವು ಅಗತ್ಯವಾಗುತ್ತದೆ-ಎರಡನೆಯದು ವಿವಿಧ ಶಾಖೋಪಶಾಖವಾದ ಸಾಹಿತ್ಯಸುಯ ಪ್ರಪಂಚದಲ್ಲಿ ವಿಶಿಷ್ಟ ಗ್ರಂಥಗಳ ಸೂಕ್ಷ್ಮ ಪರೀಕ್ಷೆಯೆನ್ನಬಹುದು. ಈ ಎರಡು ದಿಕ್ಕಿನಲ್ಲೂ ಈಗ ಆಗಿರುವ ಕೆಲಸವು ಗಮನಾರ್ಹವಾಗಿದ್ದರೂ ಇನ್ನೂ ಆಗಬೇಕಾದ ಕಾರ್ಯವು ಅಪಾರವಾಗಿದೆ. ಜನತೆಯ ಉತ್ಸಾಹವು ಹೆಚ್ಚಬೇಕಾದರೆ ಪುಣ್ಯವಂತರ ಹಾಗು ಸರಕಾರದ ಪ್ರೋತ್ಸಾಹವೂ ಉತ್ತೇಜನವೂ ಈಗಿರುವದಕ್ಕಿಂತ ಹೆಚ್ಚಾದ ಹೊರತು ಬೇರೆ ಮಾರ್ಗವಿಲ್ಲ. ವಿಪುಲವಾದ ದ್ರವ್ಯವ್ಯಯದಿಂದ ಎಷ್ಟು ಉತ್ತಮ ಫಲ ದೊರೆಯಬಹುದೆಂಬುದನ್ನು ತೋರಿಸಲು ಉದಾಹರಣೆಯಾಗಿ ಗತದಶಕದಲ್ಲಿ ಚಂದ್ರವಳ್ಳಿಯ ಹತ್ತಿರ ನಡೆದ ಭೂಶೋಧಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು :

ದಕ್ಷಿಣಾಪಥದಲ್ಲಿ ಭೂಶೋಧನೆಯನ್ನು ಆಸಕ್ತಿಯಿಂದ ಆರಂಭ ಮಾಡಿದುದು ಬಹಳ ಇತ್ತೀಚೆಗೆ. ಸಿಂಧೂ ನದಿಯ ಮರಳುಗಳಲ್ಲಿ ನಡೆಸಿದ ಶೋಧದಿಂದ ಅತ್ಯಂತ ಪ್ರಾಚೀನ ಸಂಸ್ಕೃತಿಯ ಬಹು ಮಹತ್ವದ ಸಂಗತಿಗಳು ಮೊಹೆಂಜೊ ದಾರೊ, ಹರಪ್ಪಾ, ಮೊದಲಾದೆಡೆಗಳಲ್ಲಿ ಹೊರಬಿದ್ದುದು ಸರ್ವರಿಗೂ ವಿದಿತವೇ ಇದೆ. ಆದರೆ ಇದೇ ರೀತಿಯಾಗಿ ದಕ್ಷಿಣ ದೇಶದ ಪ್ರಸ್ಥಭೂಮಿಯಲ್ಲಿ ಶೋಧವನ್ನು ಸುವ್ಯವಸ್ಥಿತವಾಗಿ ಮಾಡಲು ಮೊದಲು ಪ್ರಯತ್ನಪಟ್ಟಿರಲಿಲ್ಲ. ಇಲ್ಲಿನ ಭೂಗುಣವೂ ಅದಕ್ಕೆ ಸ್ವಲ್ಪ ಕಾರಣವಿರಬಹುದು. ಆದರೆ ೧೯೪೫ ರಲ್ಲಿ ಪಾಂಡಿಚೇರಿಗೆ ಸಮೀಪದಲ್ಲಿರುವ 'ಅರಿಕಮೇಡು' ಎಂಬ ಗ್ರಾಮದ ಹತ್ತಿರ ಭಾರತದ ಆರ್ಕಿಯಲಾಜಿಕಲ್ ಸರ್ವೆಯವರು ಮಾಡಿದ ಭೂಶೋಧದಿಂದ ಅತ್ಯಂತ ಮಹತ್ವಪೂರ್ಣವಾದ ಕೆಲವು ಸಂಗತಿಗಳು ಹೊರಬಿದ್ದುವು. ಪ್ರಾಚೀನ ದ್ರಾವಿಡ ಸಂಸ್ಕೃತಿಗೂ ರೋಮನ್ನರ ಮೆಡಿಟರೇನಿಯನ್ ಸಂಸ್ಕೃತಿಗೂ ಪರಸ್ಪರ ಸಂಪರ್ಕವಿತ್ತೆಂದು ಮೊದಲು ಊಹಾಮಾತ್ರವಾಗಿದ್ದ ಅಂಶವು ಈಗ ನಿಸ್ಸಂದಿಗ್ಧವಾಗಿ ಸ್ಥಿರವಾದಂತಾಯಿತು. ಏಕೆಂದರೆ ನಿರ್ದಿಷ್ಟಕಾಲದಲ್ಲಿ ರೋಮಿನಲ್ಲಿ ಮಾತ್ರ ತಯಾರಾಗುತ್ತಿದ್ದ ಕೆಲವೊಂದು ವಸ್ತುಗಳು ಈ ಶೋಧಕಾಲದಲ್ಲಿ ಉಪಲಬ್ಧವಾದುವು. ಕ್ರಿಸ್ತಶಕ ಒಂದನೆಯ ಶತಮಾನದಲ್ಲಿ ಮೆಡಿಟರೇನಿಯನ್ ಸಂಸ್ಕೃತಿಯ ಅಸಾಧಾರಣ ಧರ್ಮವೆಂದು ಪರಿಗಣಿತವಾಗಿದ್ದ ವಿಶಿಷ್ಟವಿನ್ಯಾಸಮಯ ಮೃತ್ಪಾತ್ರ ನಿರ್ಮಾಣಕಲೆಯ ವಿಶೇಷ ಪ್ರಚಾರವು ದಕ್ಷಿಣ ಭಾರತದಲ್ಲಿ ಅದೇ ಕಾಲಕ್ಕೆ ಆಗಿತ್ತೆಂಬ ಅಂಶವು ಸ್ಪಷ್ಟವಾಗಿತ್ತು. ಮುಖ್ಯವಾಗಿ ಅಲ್ಲಿ ದೊರೆತ ಈ ಬಗೆಯ ಮೃತ್ಪಾತ್ರಗಳೆಂದರೆ ಮಿರುಮಿರನೆ ಹೊಳೆಯುವ ಕರಿಯ ಇಲ್ಲವೆ ಹಳದಿ ಮಿಶ್ರವಾದ ಕರಿಯ ಬಣ್ಣದ ತಟ್ಟೆಗಳು. ಈ ತಟ್ಟೆಗಳ ಒಳಭಾಗದಲ್ಲಿ ಅನೇಕ ಬಿಂದುಗಳಿಂದಾದ ಎರಡು ಅಥವಾ ಮೂರು ಸುಂದರವಾದ ಸುತ್ತುಗಳಿರುತ್ತವೆ. ಪಾತ್ರೆಯನ್ನು ಸುಡುವುದಕ್ಕೆ ಮುಂಚೆ ಅದು ಚಕ್ರದ ಮೇಲೆ ಸುತ್ತುತ್ತಿರುವಾಗಲೇ ಒಂದು ಹಲ್ಲಿನ ಹುರುಳಿಯಿಂದ ಈ ಚಿತ್ರವರ್ತುಲಗಳನ್ನು ಕುಂಬಾರನು ಮೂಡಿಸುತ್ತಿದ್ದಿರಬೇಕು. ಪ್ರಾಚೀನ ಭಾರತದ ಮೃತ್ಪಾತ್ರನಿರ್ಮಾಣ ಕಲೆಯಲ್ಲಿ ಈ ಬಗೆಯ ಚಿತ್ರಮಯ ವಸ್ತುಗಳ ತಯಾರಿಕೆಯು ತೀರ ಹೊಸದು. ಈ ಹೊಸ ರೀತಿಯ ಪಾತ್ರೆಗಳನ್ನು ಮೆಡಿಟರೇನಿಯನ್ನರಿಂದಲೇ ನಮ್ಮವರು ಕಲಿತಿರಬೇಕೆನ್ನುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ಅವರಲ್ಲಿ ಆ ಕಲೆಯು ಕ್ರಿ. ಶ. ಒಂದನೆಯ ಶತಮಾನದ ಸಮಯದಲ್ಲಿ ಪ್ರಚಾರದಲ್ಲಿತ್ತು. ನಮ್ಮಲ್ಲಿಯೂ ಅದೇ ಕಾಲಕ್ಕೆ ಅವರೊಡನೆ ಉಂಟಾದ ಸಂಪರ್ಕದ ಪರಿಣಾಮವಾಗಿ ಈ ಕಲೆಯು ರೂಢಿಗೆ ಬಂದಿರಬಹುದು. ಇಂತಹ ಮಣ್ಣಿನ ಪಾತ್ರೆಗಳು ಉತ್ತರ ಹಿಂದುಸ್ತಾನದಲ್ಲಿ ಎಲ್ಲಿಯೂ ಸಿಕ್ಕುವುದಿಲ್ಲ. ಹೀಗೆ ದಕ್ಷಿಣ ಭಾರತದಲ್ಲಿ ಈ ಸಂಸ್ಕೃತಿಗೆ ಇದೇ ಕಾಲವೆಂದು ನಿರ್ಧರಿಸಲು ಒಂದು ಬುಡ ಸಿಕ್ಕಿದಂತಾಯಿತು.

ಇದನ್ನೇ ಅಧಾರವಾಗಿಟ್ಟುಕೊಂಡು ದಕ್ಷಿಣ ಭಾರತದ ಇತರ ಪ್ರದೇಶಗಳಲ್ಲಿ ನಡೆಸಿದ ಭೂಶೋಧನೆಗಳಿಂದ ಆ ಕಾಲದಲ್ಲಿ ಈ ಸಂಸ್ಕೃತಿಯು ಇಡಿಯ ದಕ್ಷಿಣ ಭಾರತದಲ್ಲೆಲ್ಲ ಎನ್ನುವಂತೆಯೇ ಹರಡಿತ್ತೆಂಬ ಅಂಶವು ಪ್ರಕಟವಾಯಿತು. ಅದರಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿದ ಚಂದ್ರವಳ್ಳಿಯ ಸಮೀಪದ

ಭೂಶೋಧಗಳೂ ಹೈದರಾಬಾದ ಸಂಸ್ಥಾನಕ್ಕೆ ಸೇರಿದ ಮಾಸ್ಕಿ ಮೊದಲಾದ ಕಡೆಗಳಲ್ಲಿ ನಡೆದ ಶೋಧಗಳೂ ಪೂರ್ವದಿಕ್ಕಿನಲ್ಲಿ ಅಮರಾವತಿಯ ಹತ್ತಿರದ ಭೂಶೋಧಗಳೂ ಮುಖ್ಯವಾದುವು. ಈ ಎಲ್ಲೆಡೆಗಳಲ್ಲಿಯೂ ಇಂತಹ ಮಣ್ಣಿನ ಪಾತ್ರೆಗಳು ದೊರೆತುದರಿಂದ ಆ ಸಂಸ್ಕೃತಿಯ ವ್ಯಾಪ್ತಿಯ ಹಾಗು ಕಾಲದ ಬಗೆಗೆ ಯಾವ ಸಂಶೇಹವೂ ಇಲ್ಲದಂತಾಯಿತು. ಆದರೆ ಕ್ರಿ. ಶ. ಮೊದಲನೆಯ ಶತಮಾನಕ್ಕಿಂತ ಹಿಂದೆ ದಕ್ಷಿಣ ಹಿಂದುಸ್ಥಾನದಲ್ಲಿ ಯಾವ ಯಾವ ರೀತಿಯ ಸಂಸ್ಕೃತಿಗಳು ಪ್ರಚಾರದಲ್ಲಿದ್ದುವೆಂಬ ಸಮಸ್ಯೆಯು ಮಾತ್ರ ಚಂದ್ರವಳ್ಳಿಯ ಸಂಶೋಧನೆಗಳಾಗುವ ವರೆಗೂ ಬಗೆಹರಿದಿರಲಿಲ್ಲ. ಆ ಸಮಸ್ಯೆ ಕೂಡ ಖಚಿತವಾಗಿ ಬಗೆಹರಿದುದೇ ಚಂದ್ರವಳ್ಳಿಯ ಭೂಶೋಧನೆಗಿರುವ ಪ್ರಾಮುಖ್ಯಕ್ಕೆ ಮುಖ್ಯ ಕಾರಣ.

೩

ಚಿತ್ರದುರ್ಗದಿಂದ ಸುಮಾರು ಒಂದೂವರೆ ಮೈಲು ದೂರದಲ್ಲಿ ಚಂದ್ರವಳ್ಳಿಯೆಂಬ ಊರಿದೆ. ಅಲ್ಲಿಯೇ ಸಮೀಪದಲ್ಲಿ ಬ್ರಹ್ಮಗಿರಿಯೂ ಇದೆ. ಇವೆರಡೂ ಪ್ರದೇಶಗಳು ಭೂಶೋಧಕರಿಗಷ್ಟೇ ಅಲ್ಲದೆ ಇತಿಹಾಸಜ್ಞರಿಗೂ ಮುಖ್ಯವಾದುವು. ಪ್ರಾಚೀನ ಭಾರತದ ಸಮ್ರಾಟ್ ಅಶೋಕನ ಶಿಲಾಲೇಖಗಳು ಈ ಪ್ರದೇಶಗಳಲ್ಲಿ ಸಿಕ್ಕಿರುವ ವಿಷಯವು ಎಲ್ಲರಿಗೂ ಗೊತ್ತೇ ಇದೆ. ಇದರ ಮೇಲಿಂದ ಅಶೋಕನ ರಾಜ್ಯ ವಿಸ್ತಾರವು ದಕ್ಷಿಣದಲ್ಲಿ ಇಲ್ಲಿಯವರೆಗೂ ಇದ್ದಿತೆಂದೂ ಈ ಪ್ರದೇಶವೇ ಅವನ ರಾಜ್ಯದ ದಕ್ಷಿಣ ಎಲ್ಲೆಯನ್ನು ಸೂಚಿಸುವುದೆಂದೂ ಹೇಳುತ್ತಾರೆ. ಆದರೆ ಅವನ ಎಷ್ಟೋ ಶಿಲಾಲೇಖಗಳಲ್ಲಿ ಆ ಲೇಖಗಳಿರುವ ಪ್ರದೇಶದ ನಾಮನಿರ್ದೇಶವಿರುವದಿಲ್ಲ. ಬ್ರಹ್ಮಗಿರಿಯ ಸಮೀಪದಲ್ಲಿರುವ ಲೇಖದಲ್ಲಿ ಮಾತ್ರ 'ಇಸಿಲ'ದ ಮಹಾಮಾತ್ರರಿಗೆ ಅಶೋಕನು ಕೊಟ್ಟ ಅನುಜ್ಞೆಯ ನಿರ್ದೇಶವಿದೆ. ಈ ಹಿಂದಿನ 'ಇಸಿಲ'ವು ಈಗಿನ ಬ್ರಹ್ಮಗಿರಿಯ ಪ್ರದೇಶದ ಊರೇ ಆಗಿದ್ದಿರಬೇಕೆಂದು ಡಾ. ಕೃಷ್ಣರೇ ಮೊದಲಾದವರು ನಿರ್ಧರಿಸಿದ್ದಾರೆ. ಇದಕ್ಕಿಂತಲೂ ಹೆಚ್ಚಾಗಿ ಇತಿಹಾಸಪಂಡಿತರು ಇನ್ನೊಂದು ಹೊಸ ಅಂಶವನ್ನೂ ಇದರ ಮೇಲಿಂದ ಕಲ್ಪಿಸುತ್ತಿದ್ದಾರೆ. ಚಂದ್ರಗುಪ್ತ ಮೌರ್ಯನ ರಾಜ್ಯವ್ಯಾಪ್ತಿಯು ವಿಂಧ್ಯ ಹಿಮಾಚಲಗಳ ನಡುವೆ ಇತ್ತೆಂದು ಪ್ರಸಿದ್ಧವಾಗಿರುವುದರಿಂದಲೂ ಅಶೋಕನು ಸಮ್ರಾಟನಾದ ಮೇಲೆ ಕಳಿಂಗದ ಮೇಲಲ್ಲದೆ ಮತ್ತೆಲ್ಲೂ ದಂಡಯಾತ್ರೆ ಮಾಡಲಿಲ್ಲವೆಂದು ಸ್ಪಷ್ಟವಾದ ಉಲ್ಲೇಖಗಳಿರುವುದರಿಂದಲೂ ಅಶೋಕನ ತಂದೆಯಾದ ಬಿಂದುಸಾರನ ವಿಜಯಪ್ರತಾಪಗಳನ್ನು ಒಂದೆರಡು ಪಾಲೀ ಗ್ರಂಥಗಳು ಸೂಚಿಸುವುದರಿಂದಲೂ ರಾಜ್ಯವಿಸ್ತಾರವು ಬಿಂದುಸಾರನ ದಂಡಯಾತ್ರೆಯ ಫಲವಾಗಿಯೇ ಆಗಿರಬಹುದೆಂಬುದೇ ಈ ಕಲ್ಪನೆ. ಇದರ ವಿಶೇಷ ವಿಮರ್ಶೆಯು ಇಲ್ಲಿ ಅಪ್ರಸ್ತುತ.

ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ ನಡೆಸಿದ ಭೂಶೋಧನೆಗಳಲ್ಲಿ ಅರಿಕಮೇಡು ಸಂಸ್ಕೃತಿಯ ದ್ಯೋತಕಗಳಾದ ಮಣ್ಣಿನ ಪಾತ್ರೆಗಳಲ್ಲದೆ ಇದಕ್ಕೂ ಆಳವಾದ ಮಣ್ಣಿನಲ್ಲಿ ಅಗೆದಾಗ ಅನೇಕಾನೇಕ ಪ್ರಾಚೀನತರ ಸಂಸ್ಕೃತಿಯ ಕುರುಹುಗಳೂ ದೊರೆತಿವೆ. ಮಹಾಶಿಲೆಗಳಿಂದ ಕಟ್ಟಿರುವ ಹತ್ತಾರು ಸಮಾಧಿಗಳು ಇಲ್ಲಿ ಸಿಕ್ಕಿದುದರಿಂದಲೇ ಆ ಮಹಾಶಿಲಾ ಸಮಾಧಿಗಳ ಸಂಸ್ಕೃತಿಯ (Megalithic tomb culture) ಕಾಲನಿರ್ಣಯವು ಸಾಧ್ಯವಾದುದು. ಕಡೆದ ಅಥವಾ ಕಡೆಯದೆ ಇರುವ ಬೃಹದಾಕಾರದ ಬಂಡೆಗಳಲ್ಲಿ ಹೆಣವನ್ನಿಡುವಂತೆ ಮಾಡಿದ ಸ್ಥಳಗಳಿಗೆ ಸುತ್ತಲೂ ಸಣ್ಣ ಅಥವಾ ದೊಡ್ಡ ಕಲ್ಲುಗಳ ವರ್ತುಲಾಕಾರದ ಗೋಡೆಯಿರುವುದು ಈ ಪ್ರಾಚೀನ ಸಮಾಧಿಗಳ ಲಕ್ಷಣ. ಇವುಗಳ ಮೇಲ್ಭಾಗವೂ ಕಲ್ಲಿನಿಂದಲೇ ಮುಚ್ಚಿರುತ್ತದೆ. ಒಳಗೆ ಬೂದಿಯನ್ನೊಳಗೊಂಡ ಮಣ್ಣಿನ ಪಾತ್ರೆಗಳೂ ಅಸ್ಥಿಗಳೂ ಇರುತ್ತವೆ. ಈ ವಿಧವಾದ ಸಮಾಧಿಗಳು ಬಹುದೂರದ ಪಶ್ಚಿಮ ಏಷ್ಯಾ ಮತ್ತು ಯುರೋಪು ಖಂಡಗಳ ಪ್ರಾಚೀನ ಅವಶೇಷಗಳಲ್ಲಿಯೂ ಕಂಡುಬರುತ್ತವೆ. ಭಾರತದಲ್ಲಿಯಾದರೋ ವಿಶೇಷವಾಗಿ ದಕ್ಷಿಣಾಪಥದಲ್ಲಿ ಮಾತ್ರ ದೊರೆಯುತ್ತವೆ. ಇದರಿಂದ ಒಂದು ವೇಳೆ ಈ ದೂರದ ಸಂಸ್ಕೃತಿಗಳೊಡನೆ ಸಂಬಂಧವು ದಕ್ಷಿಣ ಭಾರತಕ್ಕೆ ಕ್ರಿಸ್ತಪೂರ್ವ ಒಂದೆರಡನೆ ಶತಮಾನದಲ್ಲೇ ಇದ್ದಿರಬಹುದೆಂಬ ಊಹೆಗೂ ಅವಕಾಶವಾಗುತ್ತದೆ.

ಈ ಸಮಾಧಿಗಳಲ್ಲದೆ ಚಂದ್ರವಳ್ಳಿಯ ಭೂಶೋಧದಲ್ಲಿ ಇನ್ನೂ ಅನೇಕ ವಸ್ತುಗಳು ಸಿಕ್ಕಿವೆ. ಇವುಗಳಲ್ಲಿ ರೋಮನ್ನರ ನಾಣ್ಯಗಳಾದ 'ದೀನಾರ'ಗಳು ಕಾಲನಿರ್ಣಯಕ್ಕೆ ಬಹಳ ಸಹಕಾರಿಗಳು. ಒಟ್ಟು ಸಿಕ್ಕಿರುವ ದೀನಾರಗಳು ಐದು. ಅವುಗಳಲ್ಲಿ ಆಗಸ್ಟಸ್ ಚಕ್ರವರ್ತಿಯ ಕಾಲದಲ್ಲಿ ಮುದ್ರಿತವಾದ (ಸುಮಾರು ಕ್ರಿ. ಪೂ. ೨ ರಿಂದ ಕ್ರಿ. ಶ. ೧೧ ರೊಳಗೆ) ದೀನಾರಗಳೆರಡು. ಟೈಬೀರಿಯಸ್ ಚಕ್ರವರ್ತಿಯ ಕಾಲದಲ್ಲಿ ಮುದ್ರಿತವಾದ (ಸುಮಾರು ಕ್ರಿ. ಶ. ೨೬ ರಿಂದ ೩೭ ರೊಳಗೆ) ದೀನಾರುಗಳು ಮತ್ತೆರಡು ಐದನೆಯದು ಯಾರ ಕಾಲದ್ದೆಂದು ಸ್ಪಷ್ಟವಾಗಿ ಗೊತ್ತಾಗುವಂತಿಲ್ಲ. ಇದೇ ಕಾಲಕ್ಕೆ ಎಂದರೆ ಅರಿಕಮೇಡು ಸಂಸ್ಕೃತಿಗೆ ಸೇರುವ ಬಗೆಬಗೆಯ ಮಣ್ಣಿನ ಮಡಕೆಗಳೂ, ಅಂಧ್ರ ಅರಸರ ನಾಣ್ಯಗಳೂ ಸಿಕ್ಕಿವೆ. ಪುರಾಣಗಳಲ್ಲಿ

ಆಂಧ್ರ ರಾಜರ ವಂಶಾವಳಿಯು ಗೌತಮೀಪುತ್ರ ಶಾತಕರ್ಣಿ, ಪುಲೊಮಾಯಿ, ಶಿವಶ್ರೀ ಶಾತಕರ್ಣಿ, ಶಿವಸ್ಕಂದ ಶಾತಕರ್ಣಿ, ಯಜ್ಞಶ್ರೀ ಶಾತಕರ್ಣಿ-ಇವರ ಹೆಸರುಗಳನ್ನು ಒಳಗೊಂಡಿರುತ್ತದೆ. ಇಲ್ಲಿ ನಮಗೆ ಪುಲೊಮಾಯಿ ಮತ್ತು ಯಜ್ಞಶ್ರೀ ಶಾತಕರ್ಣಿಗಳ ಬೆಳ್ಳಿಯ ನಾಣ್ಯಗಳು ಸಿಕ್ಕಿವೆ. ಇವರ ಕಾಲ ಸುಮಾರು ಕ್ರಿಸ್ತ ಶಕ ಎರಡನೆಯ ಶತಮಾನವಿರಬಹುದು. ಇದೇ ಕಾಲದ ಇನ್ನೂ ಎಷ್ಟೋ ನಾಣ್ಯಗಳಲ್ಲಿ 'ಮಹಾರಥಿ'ಗಳೆಂಬ ಸಾಮಂತರ ಉಲ್ಲೇಖ ವಿದೆಯೇ ಹೊರತು ಶಾತಕರ್ಣಿಗಳ ಹೆಸರಿಲ್ಲ.

ಮೇಲಿನದನ್ನು ಅರಿಕಮೇಡು ಸಂಸ್ಕೃತಿ ಅಥವಾ ಆಂಧ್ರ ರಾಜರ ಕಾಲದ ಸಂಸ್ಕೃತಿಯೆನ್ನಬಹುದು. ಆ ಕಾಲದಲ್ಲಿ ಈಗಿನ ಕರ್ನಾಟಕದ ಎಷ್ಟೋ ಭಾಗಗಳು ಆಂದ್ರರ ಆಡಳಿತಕ್ಕೆ ಒಳಪಟ್ಟಿದ್ದುವೆಂಬಂಶವು ಸೂರ್ಯಪ್ರಕಾಶದಷ್ಟು ಸ್ಫುಟವಾಗಿದೆ.

ಇದಕ್ಕೂ ಪ್ರಾಚೀನವಾದ ಶಿಲಾಸಮಾಧಿಗಳ ಸಂಸ್ಕೃತಿಯಲ್ಲಿಯೂ ವಿಪುಲವಾದ ಈಟಿ, ಭಲ್ಲೆ, ವೊದಲಾದ ಕಬ್ಬಿಣದ ಆಯುಧಗಳೂ ಮಿಂಚುವ ಮಡಕೆಗಳೂ ಸುವರ್ಣ ಮಣಿಗಳೂ ಗಾಜಿನ ಬಳೆಗಳೂ ದೊರೆತಿವೆ. ಲೋಹದ ಉಪಯೋಗವನ್ನು ಜನರು ಅರಿತಿದ್ದುದು ಸ್ಪಷ್ಟವಾಗಿದೆ.

ಈ ಶಿಲಾಸಮಾಧಿಗಳ ಸಂಸ್ಕೃತಿಗಿಂತಲೂ ಪ್ರಾಚೀನವಾದ ಇನ್ನೊಂದು ಸಂಸ್ಕೃತಿಯ ಅವಶೇಷಗಳೂ ಸಹ ಇದೇ ಶೋಧನೆಯಲ್ಲಿಯೇ ಉಪಲಬ್ಧವಾಗಿವೆ. ಗಂಡುಗೊಡಲಿ, ಕೊಡತಿ ವೊದಲಾದ ಮೊನೆಮಾಡಿದ ಅನೇಕ ಕಲ್ಲಿನ ಆಯುಧಗಳು ಈ ಬಹಳ ಹಳೆಯ ಸಂಸ್ಕೃತಿಯ ಪ್ರತೀಕಗಳಾಗಿವೆ. ಕಬ್ಬಿಣದ ಉಪಯೋಗ ಇನ್ನೂ ಜನರಿಗೆ ಗೊತ್ತಿಲ್ಲದ ಆ ಯುಗವನ್ನು ಶಿಲಾಯುಗವೆಂದೂ ಎನ್ನಬಹುದು. ಆ ಯುಗದ ಮಣ್ಣಿನ ಪಾತ್ರೆಗಳೂ ಬಹಳ ಒರಟಾದುವು; ಯಾವ ನಯವೂ ಇಲ್ಲ. ಈ ಯುಗವನ್ನು ಸಾಮಾನ್ಯವಾಗಿ ಕ್ರಿ. ಪೂ. ಮೂರನೆಯ ಶತಮಾನವೆಂದು ಹೇಳಬಹುದು.

ಹೀಗೆ ಮೂರು ವಿಧದ ಸಂಸ್ಕೃತಿಗಳ ಕುರುಹುಗಳು ಕಾಲನಿರ್ಧಾರಕ್ಕನುಕೂಲಿಸುವಂತೆ ಏಕತ್ರ ಒಂದೇ ಭೂಸಂಶೋಧನೆಯಲ್ಲಿ ಸಿಕ್ಕಿದ ವೈಶಿಷ್ಟ್ಯವು ಚಂದ್ರವಳ್ಳಿಯದು. ಹೆಚ್ಚು ವಿವರಗಳನ್ನು ತಿಳಿಯಲುತ್ಸಾಹವಿರುವ ಜಿಜ್ಞಾಸುಗಳು ಭಾರತ ಸರಕಾರದ ಆರ್ಕಿಯಲಾಜಿಕಲ್ ಸರ್ವೆಯವರು ಪ್ರಕಟಿಸಿರುವ Ancient India ಎಂಬ ಪ್ರಕಟನೆಯ ನಾಲ್ಕನೆಯ ಸಂಪುಟವನ್ನು ನೋಡಬಹುದು. ಅದರಲ್ಲಿ ವ್ಹೀಲರ್ ಅವರು ಚಿತ್ರಗಳೊಂದಿಗೆ ಎಲ್ಲ ವಿವರಗಳನ್ನು ಕೊಟ್ಟಿರುವರು.

---

**ಬಹುಪತಿತ್ವ**

★ ಪ್ರತಿಯೊಬ್ಬ ಹೆಂಗಸಿಗೂ ಐವರು ಗಂಡಂದಿರು ಬೇಕು: ಬುದ್ಧಿಗೊಬ್ಬ ಸಂಗಾತಿ, ದುಡಿಯಲೊಬ್ಬ ಆಳು, ರೊಕ್ಕಕ್ಕೊಬ್ಬ ಕೋಟ್ಯಧೀಶ, ವಿಲಾಸಕ್ಕೊಬ್ಬ ಗೆಳೆಯ ಮತ್ತು ದುರಸ್ತಿಗೊಬ್ಬ ಕಲಾಯಿಗಾರ.

**ಬಹುಪತ್ನಿತ್ವ**

★ ಪ್ರತಿಯೊಬ್ಬ ಗಂಡಸಿಗೂ ಐವರು ಹೆಂಡಿರು ಬೇಕು; ಸಿನೆಮಕ್ಕೊಬ್ಬಳು ಗೆಳತಿ, ಕೆಲಸಕ್ಕೊಬ್ಬಳು ದಾಸಿ, ಅಡಿಗೆಗೊಬ್ಬಳು ರುಚಿಜ್ಞೆ, ಮಾತು ಕೇಳಲೊಬ್ಬಳು ಸಭಿಕೆ ಮತ್ತು ಸಾಕಲೊಬ್ಬಳು ದಾದಿ.

—ಅಮೇರಿಕನ್ ಪತ್ರಿಕೆ

ಚಿಕ್ಕ ಕಥೆ

# ಕಿನಾ

ಶ್ರೀ. ದ. ಲ. ಕೆರೂರ, ಬಿ. ಎ.

" ಕಿನಾ ! "

" ಏನಪ್ಪಣೆ ಮಹಾರಾಜ ? "

" ಏನೋ ಉಲ್ಲಾಸವಿಲ್ಲ, ರಾಣೀ ಲಕ್ಷ್ಮಿಬಾಯಿಯ ಹಾಡನ್ನಾದರೂ ಹೇಳಬಾರದೆ ? "

" ರಾಣೀ ಸರಕಾರ- - "

"ಹಂ, ರಾಣೀ ಲಕ್ಷ್ಮಿಬಾಯಿಯ ಹಾಡನ್ನೇ, ನಿನ್ನ ಪ್ರೀತಿಯ ಹಾಡನ್ನೇ. "

" ಅಲ್ಲ ಪ್ರಭೂ. "

" ಏನದು ಅಲ್ಲ ? "

"ಅವರ ಕಂಠದಿಂದ ಈ ಹಾಡು ಇನ್ನೂ ಚನ್ನಾಗಿರುತ್ತದೆ ಸರಕಾರ. "

" ಯಾರವರು ? "

" ರಾಣೀ ಸರಕಾರ. "

" ನಿನಗೆ ಹಾಡೆಂದು ಹೇಳಿದರೆ ನಮ್ಮ ರಾಣೀ ಸರಕಾರ ಅವರ ಪರವಾಗಿ ವಕಾಲತ್ತು ವಹಿಸಬಂದಿಯಾ?"

" ಇಲ್ಲ, ಸರಕಾರ. ನನ್ನ- - "

"ನಿನ್ನದೇನು? ಒಂದು ಹಾಡು ಹೇಳೆಂದರೆ ಎಷ್ಟರೇ ನಿನ್ನ ಜಂಭ, ಏನೇನೋ ಹರಟುತ್ತಿ . "

"ನನ್ನ ಕೆಲಸ ಮುಗಿಯಲಿಲ್ಲ, ಹಾಡುತ್ತ ಕುಳಿತುಕೊಳ್ಳುವದು ಹೇಗೆ? ಪ್ರಭುಗಳಿಗೆ ಕೊಡಬೇಕಾದ ಪರಿಮಳ ತಾಂಬೂಲವಿನ್ನೂ ಸಿದ್ಧವಾಗಿಲ್ಲ . "

"ಹಂ, ತಿಂದ ಅನ್ನ ಜೀರ್ಣವಾಗಬೇಕು, ನಾನು ಇಷ್ಟೊಂದು ಕೊಬ್ಬಿದ್ದು ಸಾಲದೇ ಇನ್ನೂ ಹಿಗ್ಗಬೇಕು ಎಂದು ಎಷ್ಟೇ ಕಾಳಜಿ ನಿನಗೆ! ತ್ರಯೋದಶಗುಣಯುಕ್ತ ತಾಂಬೂಲವಾಗಲಿ . "

" ಅದು ತಮ್ಮಂಥವರಿಗೇ ದೊರಕುವದಲ್ಲದೆ ಬೀದಿಯ ಭಿಕಾರಿಗೆ ಸಿಗಬಹುದೇ?" ಎಂದು ಕೃಷ್ಣಾ ತಾಂಬೂಲದ ಸಿದ್ಧತೆಗೆ ತೊಡಗಿದಳು. ಕೋಮಲವಾದ ನಾಲ್ಕು ವೀಳ್ಯದೆಲೆಗಳನ್ನು ಆಯ್ದು ಚಿನ್ನದ ಕರಡಿಗೆಯೊಳಗಿನ ಚಿಪ್ಪಿನ ಸುಣ್ಣವನ್ನು ನಯವಾಗಿ ಸವರಿ, ಏಲಕ್ಕಿ, ಪತ್ರಿ, ಜಾಜೀಕಾಯಿ, ಬದಾಮು, ಕೊಬ್ಬರಿ ಮುಂತಾದವುಗಳನ್ನು ಒಂದೊಂದಾಗಿ ಆರಿಸಿಕೊಂಡು ತಾಂಬೂಲ ಕಟ್ಟುವ ಸಂಭ್ರಮದಲ್ಲಿ ಮಗ್ನಳಾಗಿದ್ದಳು.

ಆಕೆಯನ್ನೇ ಎವೆಯಿಕ್ಕದೆ ನೋಡುತ್ತಿದ್ದ ಮಹಾರಾಜ, ಸುಂದರ ಬಂಧುರವಾದ ಆಕೆಯ ಲಾವಣ್ಯವನ್ನು ಕಂಡು ಉಸಿರನ್ನು ಬಿಗಿಹಿಡಿದ. ಅವಳು ಉಟ್ಟಿದ್ದ ಕೆಂಪು ಬಣ್ಣದ ರೇಶ್ಮೆ ಸೀರೆಯು ತನ್ನ ಪತ್ನಿ ವಿಲಾಸಿನಿರಾಣಿ ಸರಕಾರ ಅವರದೇ ಆಗಿತ್ತು. ಮೇಲೆ ಝುಘಿಝುಘಿಸುತ್ತಿದ್ದ ಗುಲಾಬಿ ಬಣ್ಣದ ವಿದ್ಯುದ್ದೀಪದ ಪ್ರಭೆಯು ಆ ಚೀನಾಂಬರಕ್ಕೊಂದು ಮೆರಗನ್ನು ತಂದುಕೊಟ್ಟಿತ್ತಲ್ಲದೆ ಕೃಷ್ಣಾಳ ಸುಕುಮಾರ ಮುಖಾರವಿಂದಕ್ಕೂ ಒಂದು ದೀಪ್ತಿಯನ್ನಿತ್ತಿತ್ತು.

"ನಿನ್ನ ತಾಯಿ ನಿನಗೆ ತಪ್ಪು ಹೆಸರನ್ನಿಟ್ಟಳು ನೋಡು, ಕಿನಾ" ಎಂದು ಮಹಾರಾಜ ತನ್ನ ಮನೋಭಾವನೆಗೆ ಹೊರಬೀಳಲು ಎಡೆ ಮಾಡಿಕೊಡುವಂತೆ ಚಿರೂಟ ಒಂದನ್ನು ಹೊತ್ತಿಸಿದ.

"ತನ್ನ ಮಗಳು ಕುರೂಪಿಯಾಗಿ ಜನರ ದೃಷ್ಟಿಬಾಧೆಗೆ ಸಿಗದಿರಲಿ ಎಂದು ಹಾಗೆ ಹೆಸರಿಟ್ಟಳಂತೆ, ಪ್ರಭು ! "

"ನಿನ್ನ ಮೈಮೇಲಿನ ಸೀರೆ ನಮ್ಮ ರಾಣೀ ಸರಕಾರ . . . "

"ಹೌದು ಅವರದೇ, ಪ್ರಭು, ಆದರೆ ಅದನ್ನೀಗ ನನ್ನ ಮೈ ಮೇಲಿಂದ ಸೆಳೆದುಕೊಳ್ಳಲು ತಮಗೆ ಸಾಧ್ಯವಿಲ್ಲ. ತಮ್ಮಂಥವರು ಬಿಟ್ಟು ಕೊಟ್ಟ ಬಟ್ಟೆಬರೆಗಳೇ ನಮ್ಮ ಮಾನ ಕಾಯಬೇಕಲ್ಲವೆ?"

"ಈ ಸೀರೆ ಉಟ್ಟರೆ ನೀನು ನಮ್ಮ ವಿಲಾಸಿನಿಗೇನೂ ಕಡಿಮೆಯಾಗಿ ತೋರುವದಿಲ್ಲ . "

"ಅಂತೇ ನಮ್ಮ ಮನೆಯಲ್ಲಿ ನಮ್ಮ ಅಣ್ಣ ಒಬ್ಬರ ಸೀರೆಯನ್ನು ಇನ್ನೊಬ್ಬರಿಗೆ ಉಡುಗೊಡುವದಿಲ್ಲ. ತನ್ನ ಹೆಂಡತಿಯ ಸೀರೆಯನ್ನು ಉಟ್ಟುಕೊಂಡಿದ್ದ ಅತ್ತಿಗೆಯನ್ನು ಹಿಂದಿನಿಂದ ನೋಡಿ ತನ್ನ ಹೆಂಡತಿಯೆಂದೇ ಬಗೆದು ದುಡುಕಿ ಮುಖಕ್ಕೆ ಮಂಗಳಾರತಿ ಮಾಡಿಸಿಕೊಂಡ. ಈಗ ನೀವೂ ಹೀಗೆ ಹೇಳುತ್ತೀರಿ. ನಾನು ಈಗಲೇ ಹೋಗಿ ನನ್ನ ಸೀರೆ ಸುತ್ತಿಕೊಂಡು ಬರುತ್ತೇನೆ" ಎಂದು ಎದ್ದೇಳತೊಡಗಿದಳು.

"ನನ್ನ ತಾಂಬೂಲವೆಲ್ಲಿ ? "

"ಇಲ್ಲೆ ಇದೆ ಪ್ರಭು, ಕೋಪಿಸಿಕೊಳ್ಳಬೇಡಿ," ಎಂದು ವೀಳ್ಯವನ್ನು ಮಡಿಚಿ ಅದಕ್ಕೆ ಲವಂಗವೊಂದನ್ನು ಚುಚ್ಚಿ ಚಿನ್ನದ ತಟ್ಟೆಯಲ್ಲಿಟ್ಟು ಕೈಮುಂದೆ ನೀಡಿದಳು.

"ವೀಳ್ಯ ಮಡಿಚಿದ ಕೈಯಿಂದಲೇ ಕೊಡಬಾರದೆ? ತಟ್ಟೆಯ ಮಧ್ಯಸ್ತಿ ಏಕೆ?"

ಕೃಷ್ಣಾ ತನ್ನ ಅಂಜಲಿಯಲ್ಲಿ ವೀಳ್ಯವನ್ನು ಇಟ್ಟು ನಳಿದೋಳುಗಳನ್ನು ಮುಂದೆ ನೀಡಿದಳು. ಕೈಗಳು ನಸುನಡುಗಿದಂತೆ ಆಕೆಗೆ ಅನಿಸಿತು. ಮಹಾರಾಜನು ಮೆಲ್ಲಗೆ ವೀಳ್ಯವನ್ನೆತ್ತಿಕೊಳ್ಳದೆ ಅವಳ ಎರಡೂ ಕೈಗಳನ್ನು ದೃಢವಾಗಿ ಹಿಡಿದುಕೊಂಡ. ಸ್ಪರ್ಶಸುಖ ಮಿದುಳಿಗೆ ಮುಟ್ಟಿ ಕಣ್ಣುಗಳು ಅರೆಮುಚ್ಚುವದರೊಳಗಾಗಿಯೆ ಕೃಷ್ಣಾ ತನ್ನ ಕೈಗಳನ್ನು ಬಿಡಿಸಿಕೊಂಡು ದೂರ ಸರಿದಿದ್ದಳು. ಮಹಾರಾಜನ ಮುಖದಲ್ಲಿ ಯಾವ ವ್ಯತ್ಯಾಸವೂ ಕಂಡುಬರಲಿಲ್ಲ. ವೀಳ್ಯವನ್ನು ಎತ್ತಿಕೊಂಡು ಬಾಯಿಗೆ ಹಾಕಿಕೊಂಡ.

"ಮಹಾರಾಜ, ನನ್ನದೇನಾಯಿತು?" ಎಂದು ಕೃಷ್ಣಾ ಕಟಾಕ್ಷ ಬೀರಿ ಕೇಳಿದಳು.

"ನಿನ್ನದು ಏನು, ಆ ದೇಸಾಯಿ ಕಾರಕೂನನ ವಿಷಯವಲ್ಲವೆ?"

"ಹೌದು ಮಹಾರಾಜ, ಈಗಲಾದರೂ ನೆನಪಾದದ್ದು ಹೆಚ್ಚಿನದೇ" ಎಂದು ಮುಗುಳುನಗೆ ಸೂಸಿದಳು.

“ನಿನ್ನ ನಗೆ, ನಿನ್ನ ನೋಟ, ಹಾವಭಾವಗಳಿಗೆ ಆ ತರುಣ ಕಂಗೆಟ್ಟಿದ್ದರೆ ಆಶ್ಚರ್ಯವೇನು? ಆದರೆ ಎಚ್ಚರ! ಸುಮ್ಮನೆ ಮಿಥ್ಯಾ ರೋಷಕ್ಕೆ ಅವನನ್ನು ಗುರಿಮಾಡಬೇಡ.”

“ಇಲ್ಲ ಪ್ರಭು, ಅಂದು ಅವನ ಕೈಯಲ್ಲಿ ಪಾರಾಗಿ ಬರಬೇಕಾದರೆ ಸಾಕುಬೇಕಾಯಿತು. ದಾಸಿಯರೆಂದರೆ ನಮಗೆ ಮಾನ ಮರ್ಯಾದೆ ಇಲ್ಲವೆ?”

“ಅವನ ಕಣ್ಣಲ್ಲಿ ಕಸ ಬಿತ್ತೆಂದು ಅವನು ಕಣ್ಣು ಮಿಟುಕಿಸಿದ. ಮುಂದೆ ಮೂರು ದಿನ ಆಸ್ಪತ್ರೆಯಲ್ಲಿ ಅವನು ಉಪಚಾರಹೊಂದಿದ. ಆದರೆ ಆ ಸಮಯಕ್ಕೆ ಅವನ ಎದುರಿಗೆ ಹಾಯ್ದುಹೋಗುತ್ತಿದ್ದ ನೀನೇನೋ ನಿನ್ನನ್ನೇ ಕಂಡು ಹುಬ್ಬು ಹಾರಿಸಿದ ಎಂದು ಜೊಗಳುತ್ತೀ.”

“ನಾನು ಇಲ್ಲಿಯೇ ಅರಮನೆಯಲ್ಲಿ ಬೆಳೆದು ದೊಡ್ಡವಳಾದೆ. ಯಾರು ಎಂತು ಎಂಬುದು ಗೊತ್ತು. ಇನ್ನು ನೀವು ಹೀಗೆ ನನ್ನನ್ನು ತೆಗಳಿದರೆ ನನಗಾರು ಗತಿ?” ಎಂದು ಹುಸಿಮುನಿಸನ್ನು ತೋರಿದಳು.

“ನೀನೇನೂ ಹೆದರಬೇಡ, ಅವನನ್ನು ಅರಮನೆ ಬಿಟ್ಟು ಪೋಲೀಸ ಕಚೇರಿಗೆ ವರ್ಗ ಮಾಡುತ್ತೇನೆ. ಆಯಿತೆ? ಎಲ್ಲಿ ನಿನ್ನ ಮುಖದ ಮೇಲಿನ ಸಿಟ್ಟಿನ ಕೆಂಪನ್ನು ಕಿತ್ತಿಹಾಕು; ಇಲ್ಲವೇ ತಾಳು, ನಾನೇ ಕಿತ್ತಿಹಾಕುತ್ತೇನೆ” ಎಂದು ಮಹಾರಾಜ ಆಕೆಯನ್ನು ಹಿಡಿದೆಳೆದ. ಅವನು ಕುಳಿತಿದ್ದ ಆಸನದ ಮೇಲೆಯೆ ಜೋಲಿಹೋಗಿ ಕುಕ್ಕರಿಸಿದಳು. ಚಕಿತಳಾದ ಅವಳು ಆಸನದಿಂದ ಪುಟಿದೇಳಹತ್ತಲು ಮಹಾರಾಜ ಚಿರೂಟಿನ ಹೊಗೆಯನ್ನು ಅವಳ ಮುಖಕ್ಕೆ ಊದಿಬಿಟ್ಟ. ಒಂದರೆ ನಿಮಿಷ ಅವಳ ಮುಖವೇ ಕಾಣಿಸದಷ್ಟು ಹೊಗೆ ಮುಸುಕಿತ್ತು. ಕಣ್ಣುಜ್ಜುತ್ತ ಅವಳು ಅವನತಮುಖಿಯಾಗಿ ನಿಂತಿದ್ದಳು. ಮಹಾರಾಜನ ಅಟ್ಟಹಾಸದ ದನಿ ದಿವಾಣಖಾನೆಯ ಹೊರಗೂ ಕೇಳಿಸಹತ್ತಿತು.

“ಕಿನಾ, ಏನೇ ಅದು ?”

“ನೀವೇ ನೋಡಿಕೊಳ್ಳಿ ತಾಯಿ.”

“ಇಲ್ಲೇಕೆ ನೀನು?”

“ತಾಂಬೂಲ ಕೊಡಲಿಕ್ಕೆ ಬಂದಿದ್ದೆ ತಾಯಿ.”

“ಇದೇನೇ, ನಿನ್ನ ಮುಖಕ್ಕೆ ಹೊಗೆಸೊಪ್ಪಿನ ವಾಸನೆ ಬರತಾ ಇದೆಯಲ್ಲವೆ?”

“ಅವರ ಚಿರೂಟಿನ ವಾಸನೆ ಅಲ್ಲವೇನೆ ಇದು?”

“ನಾನೇನು ಹೇಳಲಿ ತಾಯಿ?”

“ಈ ವಿದ್ಯೆ ಎಂದಿನಿಂದ ಕಲಿತೆ? ದಾಸಿಯಾಗಿರುವವಳಿಗೆ ಇಷ್ಟೇಕೆ ಬಡಿವಾರ?”

“ನನ್ನದೇನೂ ತಪ್ಪಿಲ್ಲ ತಾಯಿ.”

“ಇಲ್ಲಿಯುವಳು, ಇಲ್ಲಿನ ಎಲ್ಲ ಬಲ್ಲವಳು ಎಂಬೊ ಹೆಮ್ಮೆ, ಏನೆ ನಿನಗೆ?”

“ತಮ್ಮೆದುರಿನಲ್ಲಿ ನಾನಾವ ಗಿಡದ ತೊಪ್ಪಲು ತಾಯಿ? ಕೋಪಿಸಿಕೊಳ್ಳಬೇಡಿ, ತಪ್ಪೇನಿದ್ದರೂ ಮನ್ನಿಸಿ ಕಾಪಾಡಿ.”

“ಇನ್ನು ಓರಿಗೆಯಾಕೆ ಎಂದು ಇಷ್ಟೊಂದು ಸಲಿಗೆ ಕೊಟ್ಟದ್ದಕ್ಕೆ---”

“ನಿಮ್ಮ ಕಾಲಿಗೆ ಬಿದ್ದೆ ತಾಯಿ, ತ್ರಾಸ ಮಾಡಿಕೊಳ್ಳಬೇಡಿ ನಮ್ಮ ಜಾಗ ನಮಗೆ ತಿಳಿದಿಲ್ಲವೆ? ಪ್ರಭುಗಳು ತಮ್ಮ ಮೋಜಿಗೆಂದು”

“ಸಾಕು ಮುಚ್ಚೇ ಬಾಯಿ. ನಾನೇ ತೊಲಗುತ್ತೇನೆ ಇಲ್ಲಿಂದ” ಎಂದು ವಿಲಾಸಿನಿ ರಾಣೀ ಸರಕಾರ ಅವರು ಬಾಗಿಲ ಕಡೆಗೆ ಎರಡು ಹೆಜ್ಜೆ ಮುಂದಿಟ್ಟರು.

“ಇಲೆಕ್ಟ್ರಿಕ್ ಸ್ಟೋವಿನಂತೆ ಒಮ್ಮೆಲೆ ಹೀಗೆ ಕಾದುಬಿಟ್ಟರೆ ಗತಿಯೇನು? ನಮ್ಮ ಮುಖದ ಚಿರೂಟನ್ನಾದರೂ ಹೊತ್ತಿಸಿಕೊಳ್ಳುತ್ತೇವೆ ತಡೆಯಿರಿ” ಎಂದು ಮಹಾರಾಜ ಚಪಲಗತಿಯಿಂದ ಹೋಗಿ ವಿಲಾಸಿನಿಯ ಮಾರ್ಗವನ್ನು ಪ್ರತಿಬಂಧಿಸಿದ.

“ದಾರಿ ಬಿಡಿ ಅಂದರೆ, ನನಗಿಲ್ಲಿ ನಿಲ್ಲಲು ಎಳ್ಳಷ್ಟೂ ಇಷ್ಟವಿಲ್ಲ.”

“ನಿಮ್ಮ ಮನಸಿನ ಆವೇಗವನ್ನು ಸಹಿಸಲಾರದೆ ನಿಮ್ಮ ಮುಖವೆಷ್ಟು ಕೆಂಪಾಗಿದೆ, ಶಾಂತರಾಗಿರಿ.”

“ಹೌದು- -”

“ನಾವೂ ಅದೇ ಅಂದದ್ದು. ನಿಮ್ಮ ಸ್ತನಪ್ರದೇಶವು ಕೂಡ ಅಸ್ಥಿರವಾಗಿದೆ.”

“ಕಿನಾ ಇಲ್ಲಿಯೆ ಇದ್ದಾಳೆ.”

“ಅಂತೇ ಶಾಂತರಾಗಿರಿ, ಎಲ್ಲಿ ಹೀಗೆ ಬನ್ನಿ ನೋಡೋಣ” ಎಂದು ಮಹಾರಾಜನು ತನ್ನ ಕೈ ಮುಂದೆ ಚಾಚಿದ. ಮರವನ್ನಾಶ್ರಯಿಸುವ ಬಳ್ಳಿಯಂತೆ ಅವನ ಕೈಹಿಡಿದುಕೊಂಡು ರಾಣಿ ಬಂದಳು. ಏಕಾಸನದಲ್ಲಿ ಅವರಿಬ್ಬರೂ ಮಂಡಿಸಿದರು. ಕಿನಾ ಸೆರಗಿನಿಂದ ಬಾಯಿಮುಚ್ಚಿ

ಕೊಂಡು ಕುಡಿನೋಟ ಬೀರಿ ಸಮಾಧಾನದ ನಸುನಗೆ ಬೀರಿದಳು. ಆರಾಧನಾತತ್ಪರನಾದ ಮಹಾರಾಜನು ಪತ್ನಿಯ ಮುಖದಲ್ಲಿ ನಗೆ ಮಲ್ಲಿಗೆಯರಳಿಸಬೇಕೆಂದು

"ಕಿನಾ, ನೀನು ಬಹಳೇ ಕೆಟ್ಟವಳು, ನಿನಗೆ ಶಿಕ್ಷೆಯಾಗ ಬೇಕಲ್ಲವೆ?" ಎಂದ. ಕಿನಾ ತೆಪ್ಪಗಿದ್ದಳು.

"ಹೌದು, ಆಕೆಗೆ ಶಿಕ್ಷೆಯಾಗಲೇಬೇಕು."

"ದಾಸಿಯಾದ ನಿನಗೇಕೆ ಆ ರೇಶ್ಮೆ ಸೀರೆ?" ಎಂದ ಮಹಾರಾಜ. ಮತ್ತೇನೊ ಗತಿ ಬದಲಿಸಿತು ಎಂದುಕೊಂಡಳು ಕಿನಾ.

"ನಾನೇ ಕೊಟ್ಟದ್ದು. ಈ ಸೀರೆ ಬಹಳ ಚಂದವಾಗಿದೆ ಅಂತ ಬಹಳ ಕಣ್ಣಿಟ್ಟಿದ್ದಳು. ಹಳೇ ಸೀರೆಯೆಂದು ಕೊಟ್ಟುಬಿಟ್ಟೆ."

"ಇತ್ತೀಚೆಗೆ ನಿಮ್ಮ ಸ್ನೋ, ಕ್ರೀಮು, ಪೌಡರಗಳ ವೆಚ್ಚ ಬೆಳೆಯುತ್ತಿದೆಂದು ನಮಗೆ ತಿಳಿದಿದೆ. ಅವನ್ನೆಲ್ಲ ಈ ರಂಭೆ ಬಳಿದುಕೊಳ್ಳುತ್ತಾಳೆಂತ ಕಾಣುತ್ತದೆ."

"ರಂಭೆ ಅಂತ ಬಾಯಿಂದ ಹೇಳಿ ಸ್ನೋ ಪೌಡರ ಬಳೆದುಕೊಳ್ಳುತ್ತಾಳೆ ಅಂತೀರಲ್ಲ. ಒಳ್ಳೆಯ ಮೋಜುಗಾರರು ನೀವು. ಈ ನನ್ನ ಚಲುವಿಗೇಕೆ ಬೇಕು ಪೌಡರು?" ಎಂದು ಕೃಷ್ಣಾಳನ್ನು ಕಾಲಿನಿಂದ ಮೀಟಿದಳು. ಪಾದಪಲ್ಲವ ಸ್ಪರ್ಶದಿಂದ ಅಶೋಕ ತರುವಿಗೂ ಜೀವಕಳೆ ತುಂಬುವಾಗ ನಾವೂ ಆ ಸ್ಪರ್ಶದಿಂದ ಅಶೋಕರಾಗಬಾರದೇಕೆ ಎಂದುಕೊಂಡಳು ಕೃಷ್ಣಾ.

"ಇದುವರೆಗೆ ಶೂಲಕ್ಕೇರಿಸಲು ಸಿದ್ಧರಾಗಿದ್ದ ದಾಸಿಯನ್ನೇ ಈಗ ಎತ್ತಿ ಕಟ್ಟಿ ಮಾತಾಡುವಿರಲ್ಲ. ನಾನೇನು ತಿಳಿದುಕೊಳ್ಳಬೇಕು?"

"ಹಾಂ, ಅದೊಂದು ತುಂಟತನ ಇದೆ ಈಕೆಯಲ್ಲಿ. ಅದಕ್ಕೇ ನಾನು ಈಕೆಯ ಮೇಲೆ ಕೋಪಿಸಿಕೊಳ್ಳುವದು."

"ಏನದು? ನಿಮ್ಮ ಪುಷ್ಪಮಾಲೆಯನ್ನು ಕದ್ದೊಯ್ಯುತ್ತಾಳೆಯೆ?"

"ಛೀ, ನಿಮ್ಮ ಹೃದಯಕುಸುಮಕ್ಕೆ ಬಂದೆರಗುತ್ತಾಳೆ."

"ಪುರುಷರ ಹೃದಯ ಕಠಿಣವಲ್ಲವೆ? ಕುಸುಮವೆಂತಾದೀತು, ವಿಲಾಸಿನಿ?"

"ವಿಲಾಸಿನಿಯು ಸಿಕ್ಕಾಗಲೇ ಅವರ ಹೃದಯ ಆಕೆಯ ಕೈಯಲ್ಲಿಯ ಮೂಸುವ ಕುಸುಮವಾಗಿಬಿಡುತ್ತದೆ."

"ನಾನು ನಂಬಲಾರೆ-"

"ಅಲ್ಲದೆ ಅದು ನಿರ್ಗಂಧವಾಗದಂತೆ ನೋಡಿಕೊಳ್ಳಲು ನಮ್ಮಂಥ ಸತೀಮಣಿಗಳ ಕವಚ ಬೇಕಾಗುತ್ತದೆ. ಇದೇ ಈಗ ನಾನು ನೋಡಲಿಲ್ಲವೆ?"

"ನಿಜ, ನಿಜ, ಅಂತೇ ನಾನು ಆಕೆಗೆ ಶಿಕ್ಷೆಕೊಡಬೇಕೆಂದೆ. ನೀವು ಮಾತು ಬದಲಿಸಿಬಿಟ್ಟಿರಿ."

"ಆಕೆಗೇನು ಶಿಕ್ಷೆ? ಆಕೆಯದೇನೂ ಹೊಸ ಪರಿಯಲ್ಲ. ಆದರೂ ಬೆದರಿಕೆ ಇರಬೇಕು."

'ಅಂತೇ ಈಗ ಆಕೆಗೆ ಶಿಕ್ಷೆ ವಿಧಿಸುವೆ. ಕಿನಾ, ಇಲ್ಲಿ ನೋಡು, ನಮ್ಮಿಬ್ಬರಿಗಾಗಿ ತಾಂಬೂಲಗಳನ್ನು ಸಿದ್ಧಗೊಳಿಸು. ನನಗೆ ತ್ರಯೋದಶಗುಣಯುಕ್ತ, ನಿಮ್ಮ ವಿಲಾಸಿನಿ ರಾಣಿಯವರಿಗೆ ದ್ವಾದಶಗುಣಯುಕ್ತ."

"ಅಂತೂ ಪಕ್ಷಪಾತ ಕಂಡೇ ಬಂತಲ್ಲ. ಸ್ವಭಾವಕ್ಕೆಲ್ಲಿ ಔಷಧ? ಮತ್ತೆ ಇದೇನು ಶಿಕ್ಷೆಯೆ, ಆಕೆ ವಿಳ್ಯವನ್ನು ಕಟ್ಟುತ್ತಲೇ ಇದ್ದಾಳೆ."

"ಹಾಗಲ್ಲ ರಾಣೀ ಸರಕಾರ. ಮೊದಲೇ ಚುರುಕಾದ ನಿಮ್ಮ ನಾಲಿಗೆಗೆ ಸುಣ್ಣ ತಡೆಯಲಿಕ್ಕಿಲ್ಲೆಂದು ಹಾಗೆ ಹೇಳಿದರು. ನಿಮ್ಮ ಪಾಲಿನ ಸುಣ್ಣವನ್ನು ನಾನು ತಿನ್ನುತ್ತೇನೆ. ಮಹಾರಾಜರು ತುಂಬಾ ರಸಿಕರು."

"ಕಿನಾ ಬಲು ಜಾಣೆ, ಅಲ್ಲವೆ ವಿಲಾಸಿನಿ?"

"ಆಕೆಯ ಜಾಣತನ ನೀವೇ ಕಂಡು ಮೆಚ್ಚಿದ್ದೀರಿ. ಅಂತೆಯೇ ನನಗೆ ಆಗೀಗ ಈ ಪರಿಯ ತೊಂದರೆ."

"ಹಾಗಿದ್ದರೆ ಹಗಲಿರುಳೂ ಆಕೆಯನ್ನು ಬೆಂಗಾವಲಿಗಿಟ್ಟುಕೊಳ್ಳದಿದ್ದರಾಯಿತು ತೊಂದರೆ ತಪ್ಪುತ್ತದೆ."

"ಅಷ್ಟು ಹಿಡಿದಿಟ್ಟುಕೊಂಡರೂ ತಾಂಬೂಲ, ಹಾಲು, ಜೇನು, ಅದು ಇದು ಕೊಡಬೇಕಾಗಿದೆಯೆಂದು ನನ್ನ ಕಣ್ಣುತಪ್ಪಿಸಿ ಇಲ್ಲಿಗೆ ನುಸುಳಿ ಬಂದಿರುತ್ತಾಳೆ. ಸಾಕಾಗಿಹೋಗಿದೆ ನನಗೆ."

"ಬಯಲು ಬಂಗಾರ ನಾವು. ಕದ್ದೊಯ್ಯಲೆಂದು ಬರುತ್ತಾಳೆ. ಆದರೆ ನಿನ್ನ ಸರ್ಪಕಾವಲು ಇರುವಾಗ ನಾನೇನೂ ಭಯಪಡಬೇಕಾಗಿಲ್ಲ."

"ದೇಹದಲ್ಲಿ ಗುಂಡು ನಟ್ಟರೆ ಕಂಡು ಹಿಡಿಯುವ ಸಾಧನವನ್ನು ನಮ್ಮ ವೈಜ್ಞಾನಿಕರು ಹುಡುಕಿದ್ದಾರೆ. ಅಂತರಂಗದ ಗೂಢವನ್ನೆಲ್ಲ ಬಯಲಿಗೆಳೆಯುವ ಕನ್ನಡಿಯನ್ನು ಕಂಡುಹಿಡಿದಿದ್ದರೆ ಕಿನಾ ನಿಮ್ಮ ಹೃದಯದಲ್ಲಿ ಎಲ್ಲಿ ಅಡಗಿ ಕುಳಿತಿದ್ದಾಳೆಂಬುದನ್ನು ನಾನೂ ಅಷ್ಟು ನೋಡಿಕೊಳ್ಳುತ್ತಿದ್ದೆ."

ಕೃಷ್ಣೆಯ ಮುಖ ಕೆಂಜಗವಾಯಿತು. ನಡುಗುವ ಕೈಗಳಿಂದ ವೀಳ್ಯದ ತಟ್ಟೆಯನ್ನು ಮಹಾರಾಜರ ಕೈಗಿತ್ತಳು. ತಟ್ಟೆಯ ಶೀತಲ ಸ್ಪರ್ಶದಿಂದ ಎಚ್ಚತ್ತ ಮಹಾರಾಜ.

"ನನ್ನದಾವುದು, ನಮ್ಮ ವಿಲಾಸಿನಿ ರಾಣಿಯವರ ವೀಳ್ಯವಾವುದು ಇವುಗಳಲ್ಲಿ?"

"ಮರೆತೆ ಪ್ರಭು, ಇಬ್ಬರದೂ ಒಂದೇ- -"

"ಏನು ಇಬ್ಬರದೂ ಒಂದೇ?"

"ಹಾಸಿಗೆಯ ಸಿದ್ಧತೆಗಾಗಿ ನಾನೀಗಲೇ ಹೋಗಬೇಕು. ಮತ್ತೆ ನಾನಿನ್ನು ನಿಲ್ಲಲಾರೆ ದಂಡಿಸಿಕೊಳ್ಳಲಿಕ್ಕೆ."

"ಕಿನಾ ಏನು ಚತುರೆ ನೋಡಿದಿರಾ, ವಿಲಾಸಿನಿ?"

"ಅಂತೇ ಆಕೆ ಇಲ್ಲಿ ತಳವೂರಿ ನಿಂತಿದ್ದಾಳೆ."

"ಇಲ್ಲ, ನಮ್ಮ ಸರಸಕ್ಕಾಸ್ಪದ ಕೊಡಲು ಜಾರಿಕೊಂಡಿದ್ದಾಳೆ."

---

—ಗಾತ್ರ ನೋಡಿ ಮೋಸ ಹೋಗಬೇಡಿರಿ. ಒಂದೊಂದು ಸಲ ಒಬ್ಬ ಹೆಂಗಸಿನ ಮುಷ್ಟಿಯೊಳಗೆ ಒಬ್ಬ ಗಂಡಸು ಹುದುಗಿರುವುದುಂಟು.

—ಎರ್ನಾ ಫ್ರೀಸ್ಮನ್

—ಜನ್ಮದಲ್ಲಿ ಒಮ್ಮೆಯಾದರೂ ಒಬ್ಬ ಹೆಂಗಸನ್ನಾದರೂ ಕೆಣಕದವನ ಜೀವನ ವ್ಯರ್ಥ!

—ಕ್ರಿಸ್ಟೋಫರ ಮಾರ್ಲೆ

# ಕನ್ನಡ ಭಾರತದ ಅರ್ಜುನ

(ಸ್ಥಾಲೀಪುಲಾಕ)

ಶ್ರೀ. ಗೋವಿಂದ ಪೈ ಮಂಜೇಶ್ವರ

ಅರ್ಜುನನಿಗೆ ಮೊದಲಿಂದ ಕೊನೆಯತನಕ ದೈವಬಲವಿತ್ತು. ನಿತ್ಯವೂ ದೈವ ಆತನ ಕಿವಿಯ ಹಿಂದೆಯೇ ಇತ್ತು, ಆತನ ಬಲಗೆಯ್ಯಾಗೇ ಇತ್ತು. ಆತನು ಬೇಡವೆಂದರೂ ದೈವ ಆತನನ್ನು ಬೇಕು ಎನ್ನುತ್ತಿತ್ತು. ಅಥವಾ ಹೆಚ್ಚೇಕೆ? ಸಾಕ್ಷಾತ್ ದೈವವೇ ತಾನಾಗಿದ್ದ ಶ್ರೀ ಕೃಷ್ಣನು ಆತನಿಗೆ ಎಷ್ಟೋ ಲೆಕ್ಕದಿಂದ ಹತ್ತಿರದಲ್ಲಿ ಹತ್ತಿರದ ನಂಟನೇ ಅಲ್ಲ, 'ಪಾಂಡವಾನಾಂ ಧನಂಜಯಃ' ಎಂದು ತಾನೆಂದಿರುವಂತೆ ದೇಹವೆರಡು ಜೀವ ಒಂದಾದ ಗೆಳೆಯನೆಂದ ಮೇಲೆ ಬೇರೆ ಮಾತುಂಟೇ? ಆದರೂ ಮೊದಲ ದೃಷ್ಟಿಗೇನೋ ತಾನು ತೀರ ಸೋಲುತ್ತಲೆ, ಅಥವಾ ತಾನು ಹೊಲಬುಗೆಡುತ್ತಲೆ ಕೃಷ್ಣನಿಗೆ ಮೊರೆಯಿಡುವುದೇ, ಜಗಳಾಡಿ ಸೋತ ಮಗುವಂತೆ ತಾಯಿಯನ್ನು ಕರೆದು ಚೀರಾಡುವುದೇ, ಅರ್ಜುನನ ಕೆಲಸ; ತಾನು ಎಲ್ಲಿದ್ದರೂ ಆ ಕೂಡಲೆ ಅಲ್ಲಿಗಯ್ದಿ ಆತನ ಕುಸಿದ* ಅಣಿಯನ್ನು ನೇರ್ವಡಿಸಿ ಅದನ್ನಾತನಿಗೆ ತಿರುಗಿ ಕಟ್ಟಿ ಆತನನ್ನು ಕುಣಿಸುತ್ತಿರುವುದೇ ಕೃಷ್ಣನ ಕೆಲಸ ಎಂದು ತೋರಬಹುದು. ಅತಏವ (ಜೈಮಿನಿ ಭಾರತ, XIII)

> ಸಾರಥಿಯು ಬಲ್ಪಿಂದ ಕೌರವರ ಬಲದಖಿಳ
> ವೀರರಂ ಗೆಲ್ದೆಯಲ್ಲದೆ ನಿನ್ನನೀ ಧರೆಯೊ
> ಳಾರರಿವರಕಟ ನೀಂ ಕೃಷ್ಣನಂ ಕರಸಿಕೊಂಡಳವಿಗೊಡು ।೫।

ಎಂದು ಸುಧನ್ವನು ಆತನನ್ನು ಮೂದಲಿಸಿದ ಕಟಕಿಯ ಮಾತೇನೂ ತಪ್ಪಲ್ಲ, ಅಸಂಗತವಲ್ಲ ಎಂದು ಹೊಳಕಲೂಬಹುದು. ಹಾಗೂ ಇದಕ್ಕೆ ಉದಾಹರಣೆಯಾಗಿ, ಜಯದ್ರಥನನ್ನು ತಾನು ಅಂದಿನ ಸಂಜೆಯೊಳಗೆ ಕೆಡಹುವೆನೆಂದು ಅರ್ಜುನನು ತೊಟ್ಟುಕೊಂಡ ಭಾಷೆಯನ್ನು ಪಾಲಿಸಲಾಗದೆ ಸಾಯಲುದ್ಯುಕ್ತನಾದಾಗ ಶ್ರೀ ಕೃಷ್ಣನು ಅದನ್ನಾತನಿಂದ ಸಲ್ಲಿಸಿ ಆತನನ್ನು ಕಾದದ್ದೂ ಸುಧನ್ವನನ್ನು ಹಿಮ್ಮೆಟ್ಟಿಸಲಾಗದೆ ಆತನು ತಬ್ಬಿಬ್ಬಾಗಿ ಕೃಷ್ಣನನ್ನು ನೆನೆದು ಕಣ್ಣೀರಿಕಿದಾಗ ಕೃಷ್ಣನು ಅಲ್ಲಿಗೆ ಚಿತ್ತಯಿಸಿ ಆತನಿಂದ ಸುಧನ್ವನನ್ನು ಕೊಲ್ಲಿಸಿದ್ದೂ ಆತನು ಬಭ್ರುವಾಹನನಿಂದ ಹತನಾದಾಗ ಕೃಷ್ಣನು ಆತನನ್ನು ಪುನರುಜ್ಜೀವಿಸಿದ್ದೂ ಇತ್ಯಾದಿ ಹಲವು ಘಟನೆಗಳನ್ನು ಆ ಬಗ್ಗೆ ಉದಾಹರಿಸಲೂಬಹುದು. ಮಾತ್ರವಲ್ಲ, ಭಾರತ ಯುದ್ಧದಲ್ಲಿ ಭೀಷ್ಮಾಚಾರ್ಯನ ಶಸ್ತ್ರನ್ಯಾಸಕ್ಕೆ ಕಾರಣ ಶಿಖಂಡಿಯಲ್ಲದೆ ಅರ್ಜುನನಲ್ಲ, ದ್ರೋಣನ ಮರಣಕ್ಕೆ ಕಾರಣವೂ ಯುಧಿಷ್ಠಿರನ ದ್ವಯಾರ್ಥದ ಮಾತಲ್ಲದೆ ಅರ್ಜುನನಲ್ಲ, ಕರ್ಣನನ್ನು ನಿಜವಾಗಿ ಕೊಂದಾತನಾದರೂ ಕೃಷ್ಣನಲ್ಲದೆ ಅರ್ಜುನನಲ್ಲ ಎಂದೂ ಬೆರಳೂರಿ ಸಿದ್ಧಾಂತಿಸಬಹುದು. ಅತಏವ ಇವೆಲ್ಲ ಕಾರಣಗಳಿಂದ ಅರ್ಜುನನು ಯಾವ ವೀರತ್ವವನ್ನು ತಾನೆ ಮೆರಸಿದ್ದಾನೆ? ಎಂದು ಆಕ್ಷೇಪಿಸಲೂಬಹುದು.

**ಅರ್ಜುನನ ಚರಿತ್ರದ ಮತ್ತೊಂದು ಬದಿ**

ಆದರೆ ಇವಷ್ಟನ್ನೇ ಗ್ರಹಿಸಿ ಏಕಾಏಕಿಯಾಗಿ ಆತನ ವೀರತೆಯನ್ನು ಕುರಿತು ತೀರ್ಮಾನಿಸಲಾಗದು. ಆತನ ಚರಿತ್ರದ ಮತ್ತೊಂದು ಬದಿಯನ್ನೂ ಸಮೀಕ್ಷಿಸಬೇಕು. ಪಾಂಡವರ ಏಳು ಜನ್ಮದ ಹಗೆಗಾರನಂತಿದ್ದ ಶಕುನಿ ಬಾಯಿಬಿಟ್ಟು ಆಡಿದ ಈ ಮಾತು (ಕನ್ನಡ ಭಾರತ, ಆದಿ ೮)

> ಅರಸ ಕೇಳ್ ಬಿಲುವಿದ್ಯೆಯಲಿ ಮೂ
> ವರು ಕಣಾ ಸಾಮರ್ಥ್ಯಪುರುಷರು
> ಧರೆಯೊಳೊಬ್ಬರಿಗೊಂದು ಗುಣ ಪಾರ್ಥಂಗೆ ಮೂರು ಗುಣ।
> ಭರಿತವಾಗಿಹುದಾತನೊಬ್ಬನ
> ಸರಿಸದಲಿ ಮಾರಾಂತು ಜೀವಿಸಿ
> ಮರಳಬಲ್ಲವನಾವನೈ ಹೇಳೆಂದನಾ ಶಕುನಿ ॥೧೩॥
>
> ರಾಮಚಂದ್ರನ ಚರಣಯುಗ ನಿ
> ಸ್ಸೀಮ ಭೀಷ್ಮಾಚಾರಿಯರ ಶಿರ
> ವಾ ಮಹಾರಥ ದ್ರೋಣನೆದೆ ನಡುಗುವುದು ಸಮರದಲಿ।
> ಸೌಮನಸ್ಯನು ನಿಷ್ಪ್ರಕಂಪ ಸ
> ನಾಮನರ್ಜುನ ದೇವನಿದಿರಲಿ
> ಭೂಮಿಯಲಿ ಬಿಲ್ಲಾಳದಾವಹನೆಂದನಾ ಶಕುನಿ ॥೧೪॥

ಅರ್ಜುನನನ್ನು ಕುರಿತೋ? ಅಥವಾ ಕರ್ಣನನ್ನೊ? ಇಲ್ಲವೆ ಭಾರತದ ಮಿಕ್ಕ ಯಾವ ವೀರನನ್ನೊ? ಈ ಮಾತನ್ನು ಶಕುನಿ ಆಡುವಾಗ, ಕೌರವ ಪಾಂಡವಾದಿ ವೀರರೆಲ್ಲರೂ ತಂತಮ್ಮ ಅಗದಿ ಚಿಕ್ಕಂದಿನಲ್ಲಿದ್ದರು. ಇನ್ನೂ ಶಸ್ತ್ರಾಭ್ಯಾಸ ಮಾಡುತ್ತಿದ್ದರಷ್ಟೇ ಎಂಬುದನ್ನು ಅದರೊಂದಿಗೆ ಆಗ್ಗಿಯೇ ಆದರೂ ಅರ್ಜುನನು ಭೀಷ್ಮ-ದ್ರೋಣರಿಗಿಂತಲೇ ಅಲ್ಲ, ಜಗತ್ತಿನ ಅಖಿಲ ಧನುರ್ಧಾರಿಗಳಲ್ಲಿ ಮೇಲಿನವರಿಗೆ ಮೇಲಾದ ಶ್ರೀ ರಾಮನಿಗಿಂತಲೂ ಮೇಲಾಗಿದ್ದನು, ಹಾಗೂ ಆತನನ್ನು ಪ್ರತಿಭಟಿಸುವ ವೀರರು ಪೃಥ್ವಿಯಲ್ಲಿಲ್ಲ ಎಂದಿರುವ ಈ ಮಾತಿನ ಅರ್ಥವನ್ನು ಮನವರಿಸಿದರಷ್ಟೇ ಸಾಕು, ಆ ಎಳವೆಯಲ್ಲೇ ಧನುರ್ವಿದ್ಯೆಯ ಚರಮಸೀಮೆಯನ್ನು ಅಯ್ದಿದ ಪಾರ್ಥನು ಆಮೇಲಾಮೇಲೆ ಮತ್ತೂ ಏತರ ಪರಾಕಾಷ್ಠೆಯನ್ನು ಮುಟ್ಟಿರಬೇಕೆಂದು

**ಮದ್ರಾಸಿನ ಆಸ್ಥಾನಕವಿ ಶ್ರೀ. ಗೋವಿಂದ ಪೈಗಳು, ಕಳೆದ ದೀಪಾವಳಿ ಸಂಚಿಕೆಯಲ್ಲಿ ಕನ್ನಡ ಭಾರತದ ಭೀಮನ ಪಾತ್ರದ ವಿವೇಚನೆ ಮಾಡಿದ್ದರೆ, ಈ ಬಾರಿ ಅರ್ಜುನನ ಚರಿತ್ರವನ್ನು ತೆರೆದು ತೋರಿಸಿದ್ದಾರೆ. ಅರ್ಜುನ-ಕರ್ಣರಲ್ಲಿ ಯಾರು ಹೆಚ್ಚು ಯಾರು ಕಡಿಮೆಯೆಂಬ ನಿರ್ಧಾರಕ್ಕೆ ಅವರು ಬರಲಾರದೆ ಇದ್ದಾರಂತೆ!**

---

* ತುಳುನಾಡಿನ ಭೂತಗಳ ಜಾತ್ರೆಯಲ್ಲಿ ಅವುಗಳ ವೇಷವನ್ನು ಹಾಕಿ ಮೈಯುತ್ತುಂಬುವವರಿಗೆ ಕಟ್ಟುವ ಹಾಗೂ ತೆಂಗಿನ ಮೊದಲಾದ ಗರಿಗಳಿಂದಲೂ ಬಣ್ಣಬಣ್ಣದ ಬಟ್ಟೆಗಳಿಂದಲೂ ಮಾಡಿರುವ (ಒಮ್ಮೊಮ್ಮೆ ಚಿನ್ನ-ಬೆಳ್ಳಿಯ ಹೂವುಗಳನ್ನು ಹಚ್ಚಿಸಿರುವ) ತಕ್ಕಷ್ಟು ಎತ್ತರವಾದೊಂದು ಭೂಷಣಕ್ಕೆ 'ಅಣಿ' ಎನ್ನುತ್ತಾರೆ.

ಮೆನೆಗಾಣಲೇನೋ ಬಹುದಲ್ಲದೆ ಹೇಳಗೂಡುವಂತಿಲ್ಲ. ಅನಂತರ ದ್ರೌಪದೀಸ್ವಯಂವರದ ಕಾಲದಲ್ಲಿ ಕರ್ಣನೆ ಏಕೆ? ಭಾರತದ ಸಮಸ್ತ ವೀರರೂ ಅಲ್ಲಿದ್ದರಲ್ಲವೇ? ಅಲ್ಲಿ ಪಣವಾಗಿ ಕಟ್ಟಿದ ಆ ಲಕ್ಷ್ಯವನ್ನು ಎಚ್ಚು ಆಕೆಯನ್ನು ವರಿಸಿದಾತನು ಅರ್ಜುನನೊ? ಕರ್ಣನೊ? ಮತ್ತೆ ಯಾರೊಬ್ಬನೊ? ಆಗ್ಗೆ ಅರ್ಜುನನೇನು ಶ್ರೀ ಕೃಷ್ಣನ ನೆರವಿಗೆ ಸೆರಗೊಡ್ಡಿದನೆ? ಪಾಂಡವರು ದ್ವೈತವನದಲ್ಲಿದ್ದಾಗ ತನ್ನ ಸಮಸ್ತ ಪರಿವಾರದೊಂದಿಗೆ, ಪಂಪನೆಂದಂತೆ (ಪಂಪಭಾರತ, VII. ೩೩ ೩) ಮೃಗಯಾನಿಮಿತ್ತವಾಗಿ, ಕನ್ನಡ ಭಾರತಕಾರನೆಂದಂತೆ (ಕ. ಭಾ. ಆರಣ್ಯಕ: ೧೮-೨೦) ಘೋಷಯಾತ್ರೆಯ ವ್ಯಾಜದಿಂದ ಅಲ್ಲಿಗೆ ಬಂದಿದ್ದ ದುರ್ಯೋಧನನನ್ನು ಚಿತ್ರಾಂಗದ ಅಥವಾ ಚಿತ್ರಸೇನನು ಕೋಡಗಗಟ್ಟು ಕಟ್ಟಿಕೊಂಡು ಹೋದಾಗ, ಆ ಗಂಧರ್ವಪತಿಯೊಡನೆ ಕಾದಾಡಿ ಆತನನ್ನು ಸೋಲಿಸಿ ಧುರ್ಯೋಧನನನ್ನು ಬಿಡಿಸಿ ತಂದವರು ಆಗ್ಗೆ ದುರ್ಯೋಧನನ ಪಾಳ್ಯದಲ್ಲಿದ್ದ ಭೀಷ್ಮ ದ್ರೋಣರೋ? ಕೃಪಾಶ್ವತ್ಥಾಮರೊ? ಅಲ್ಲ, ಕರ್ಣನೆಯೊ? ಅಥವಾ ಅರ್ಜುನನೊ? ಹಾಗೆಯೇ ಸಾಕ್ಷಾತ್ ಪರಮೇಶ್ವರನೊಡನೆ 'ದಿಗಿಭದೊಳ್ ದಿಗಿಭಂ ಪೆಣೆವಂತೆ' (ಪಂ. ಭಾ. VIII. ೨೧) ಸಮಸ್ಕಂಧನಾಗಿ ಹತ್ತಾಹತ್ತಿಯಾಗಿ (ಕ. ಭಾ. ಆರಣ್ಯಕ: ೬, ೨೭) ಹೋರಾಡಿ ಆತನಿಂದ ಪಾಶುಪತಾಸ್ತ್ರವನ್ನೂ ಗಿರಿಜೆಯಿಂದ ಅಂಜನಾಸ್ತ್ರವನ್ನೂ, ಅಥವಾ ಪಂಪನೆಂದಿರುವಂತೆ ಅಂಜಲಿಕಾಸ್ತ್ರವನ್ನೂ, ಕರಿಮುಖ ಷಣ್ಮುಖರಿಂದ ಇತರ ಮಹಾಸ್ತ್ರಗಳನ್ನೂ ಪಡೆಕೊಂಡಾತನು ಧನಂಜಯನೊ? ಕರ್ಣನೊ? ಆಗಲೂ ಅರ್ಜುನನು ಕೃಷ್ಣನಿಗೆ ಮೊರೆಯಿಟ್ಟನೇ? ಆ ಮೇಲೆ ಇಂದ್ರನ ಅಪೇಕ್ಷೆಯ ಮೇರೆಗೆ ಅಮರಾವತಿಗೆ ಹೋಗಿ ಅಲ್ಲಿ ಇಂದ್ರನಿಗೂ ಮೇಲುಗೆಯ್ಯಾದ, ಅಸಾಧ್ಯರಾದ ನಿವಾತಕವಚಾದಿ ರಾಕ್ಷಸವೀರರನ್ನು ಗೆದ್ದು, ಇಂದ್ರನೊಂದಿಗೆ ಅರ್ಧಾಸನದಲ್ಲಿ ಮಂಡಿಸಿದಾತನು ಫಲ್ಗುಣನೊ? ಕರ್ಣನೊ? ಆ ರಾಕ್ಷಸರನ್ನು ವಧಿಸುವಂದೇನು ಅರ್ಜುನನು ಕೃಷ್ಣನನ್ನು ಮರೆವೊಕ್ಕನೆ? ಇಲ್ಲ. ಆತಏವ ಅರ್ಜುನನು ಜನುಷಾ ಅಧಿವೀರನೇ ಸರಿ, ಸ್ವಯಂ ಮಹಾವೀರನೇ ಸರಿ, ಜಗದ್ವೀರನೇ ಸರಿ, ಶ್ರೀರಾಮನಿಗೆ ಓರಗೆಯ ಮಹೇಷ್ವಾಸನೇ ಸರಿ. ಆತನಲ್ಲಿ ಕೆಲವೇನೋ ಎಡಹುಗಳು ತೋರಿದರೂ — ಯಾವ ಮಾನವನಲ್ಲಿಲ್ಲ? ಯಾವ ಮಹಾಮಾನವನಲ್ಲಿಲ್ಲ? — ಅವು ಆತನ ಮಹಾವೀರತೆಯ 'ಗುಣ ಸಂನಿಪಾತೇ ನಿಮಜ್ಜಂತೀಂದೋಃ ಕಿರಣೇಷ್ವಿವಾಂಕಃ', ಆತನ ಆ ಜಾಜ್ವಲ್ಯಮಾನವಾದ ಪ್ರತಿಭೆಯಲ್ಲಿ, ಆತನ ಅದ್ವಿತೀಯವಾದ ಓಜಸ್ಸಿನ ಪ್ರಭೆಯಲ್ಲಿ ಚಂದ್ರನ ಸುಧಾಕಿರಣಗಳಲ್ಲಿ ಮಚ್ಚೆ ಹೇಗೋ ಹಾಗೆ ಮ್ಲಾನಿಸುತ್ತವೆ. ಇನ್ನು ಅವುಗಳ ಸೊಡ್ಡು ಹಿಂದುಳಿಯುವಂತಿಲ್ಲ.

ಅಥವಾ ನನಗೆ ಅರ್ಜುನನನ್ನು ಕುರಿತು ಒಮ್ಮೊಮ್ಮೆ ಹೀಗೆನಿಸುತ್ತದೆ. ಭಾರತದ ಮಹಿಷ್ಠರಾದ ಯೋಧಾಗ್ರೇಸರರಲ್ಲಿ ತಾನು ಸೀಮಾಪುರುಷನಾದರೂ ಭಾರತ ಯುದ್ಧದಲ್ಲಿ ಸ್ವಯಂ ಅಸ್ತ್ರನೇತ್ರದ ಹಾಗೂ ದೇವಮಾನವತೆಯ ಪ್ರತ್ಯಕ್ಷ ಪರಾಕಾಷ್ಠೆಯೂ ತಾನಾದ ಶ್ರೀಕೃಷ್ಣನೊಬ್ಬನು ಭಾರತದಲ್ಲಿ ಇದ್ದಿಲ್ಲವಾದರೆ, ಅರ್ಜುನನ ವೀರತ್ವಕ್ಕೆ ಮತ್ತೂ ಮತ್ತೂ ಕಳೆಯೇರುತಿತ್ತು, ಅದು ಮುಗಿಲನ್ನು ಮುಟ್ಟುತಿತ್ತು, 'ನ ಭೂತಂ ನ ಭವಿಷ್ಯತಿ' ಎನಿಸುತಿತ್ತು. ಆದರೆ ಆ ದೇವದೇವನ ಮುಂದೆ ಅರ್ಜುನನ ವೀರತ್ವವಾದರೊ ಪ್ರಚ್ಛನ್ನನಾದರೂ ಮಾಧ್ಯಂದಿನದ ಸಹಸ್ರಕಿರಣನ ಮುಂದೆ ಸ್ಮಿತವಾದರೂ ಮಹಾಪ್ರಭವಾದರೂ ಬಹುಧಾ ತೇಜೋಹೀನವಾಗುವ ಮುಂಗಾರಿನ ವಿದ್ಯುದ್ವಲ್ಲಿಯಂತಾಯಿತು. ಕರೆವ ಮುಂಚೆಯೇ ಕಾವಾತನು ಬರುವದಾದರೆ ಯಾರಿಗೆ ಬೇಡ? ಸಿಂಹಕ್ಕೆ ಗುಹಾದ್ವಾರದಲ್ಲೇ ಬೇಟೆ ದೊರೆವುದಾದರೆ ಅದೇಕೆ ಬೇಟೆಗಾಗಿ ಹಾರಾಡೀತು? ತನ್ನ ಸಮಸ್ಕಂಧರೊಡನೆ ಹೋರಾಡೀತು? ತನ್ನ ಶೌರ್ಯವನ್ನೂ ಪರಾಕ್ರಮವನ್ನೂ ಮೆರಸೀತು? ತನ್ನ ಸಿಂಹತೆಯನ್ನು ಕಾಪಾಡಿಕೊಂಡೀತು?

## ಕರುಣೆ ಮತ್ತು ಔದಾರ್ಯ

ತ್ಯಾಗವೇ ಅಲ್ಲ, ಔದಾರ್ಯವೂ ಕರುಣೆಯೂ ವೀರತೆಯ ಆವಶ್ಯಕವಾದ ಅವಯವಗಳು. ಅರ್ಜುನನಲ್ಲಿ ಅವೆರಡೂ ತುಂಬಿ ಪುಷ್ಟವಾಗಿದ್ದುವು. ಈ ಬಗ್ಗೆ ಒಂದೇ ಉದಾಹರಣೆಯನ್ನು ಕೊಡುವುದಾದರೆ, ಕನ್ನಡ ಭಾರತದ ಕರ್ಣಪರ್ವದಿಂದ (೨೬ ನೆಯ ಸಂಧಿ) ಇದೊಂದು ಸಂಗತಿಯನ್ನು ಹೇಳಬಹುದು. ಕರ್ಣನ ಅವಸಾನಕ್ಕೆ ಕೆಲವೇ ಗಳಿಗೆಗಳ ಮುಂಚೆ ಆತನು ತೇರಿನಿಂದ ಇಳಿದು ಕೆಸರಿನಲ್ಲಿ ಹೂತುಕೊಂಡ ಅದರ ಗಾಲಿಗಳನ್ನು ಮೇಲಕ್ಕೆ ಎತ್ತುತಿದ್ದಾಗ, ಕೃಷ್ಣನು ಅರ್ಜುನನಿಗೆ ಈಗಲೇ ಕರ್ಣನನ್ನು ಹೊಡೆ, 'ಅಪತ್ತಿಸಗಿದಾಗಲೆ ಹಗೆಯ ಗೆಲುವುದು' (ಕರ್ಣ: ೨೬.೨೨), ಮುಂದೆ ಅಸಾಧ್ಯವಾದೀತು ಎಂದು ಉತ್ತೇಜಿಸುತ್ತಲೆ, ಆ ಮಾತನ್ನು ಮನ್ನಿಸದೆ ನಿರಾಯುಧನ ಮೇಲೆ ಅಸ್ತ್ರವನ್ನು ಪ್ರಯೋಗಿಸೆನೆಂದು ಅರ್ಜುನನು ಗಾಂಡೀವವನ್ನು ರಥದಲ್ಲಿ ಮಡಗಿ ನಿಕ್ಷೇಪ್ಯನಾಗಿ ಕುಳಿತು, ಕರ್ಣನು ತನಗೆ ಧರ್ಮರಾಯನಂತೆ ಕಾಣುತ್ತಾನಲ್ಲಾ? ನಿಜವಾಗಿಯೂ ಆತನು ಯಾರು? ಎಂದು ಕೃಷ್ಣನನ್ನು ಕೇಳಿ ಕಣ್ಣೀರು ಸುರಿಯಲಾರಂಭಿಸಿದನು. ಆದರೆ ಕರ್ಣನು ಯಾರೆಂಬ ನಿಶ್ಚಯವನ್ನು ಆತನಿಗೆ ಅರುಹದೆ ಕೃಷ್ಣನು ಬಹುಧಾ ಆತನನ್ನು ಕನಲಿಸಿ ನಿರಾಯುಧನಾಗಿದ್ದ ತನ್ನ ಸೋದರಳಿಯ ಅಭಿಮನ್ಯುವನ್ನು ಛಿನ್ನಭಿನ್ನವಾಗಿ ಕಡಿದ ಆ ಷಡ್ರಥಿಕರಲ್ಲಿ ಕರ್ಣನೂ ಒಬ್ಬನೆಂಬುದನ್ನು ಇಷ್ಟು ಬೇಗನೆ ಮರತಿಯಲ್ಲಾ? ಎಂದು ಮಲಗಿದ್ದ ಹಾವನ್ನು ಎಷ್ಟೋ ಪ್ರಯತ್ನಗಳಿಂದ ಕೆಣಕಿ ಕೆಣಕಿ ಎಬ್ಬಿಸಿದ ಮೇಲೂ, 'ಅಖಿಲ ಗುಣದೋಷ ನಿನ್ನದು ಪುಣ್ಯಪಾಪದ ವಾಸಿಯೆನಗೇಕೆ?' (ಕರ್ಣ: ೨೬.೩೦), ಇನ್ನು ಯಾವ ಲೇಪವೂ ತನಗಿಲ್ಲ ಎಂದು ಅರ್ಜುನನು ಕೆಲವೇ ದಿನಗಳ ಹಿಂದೆ ಕೃಷ್ಣನು ತನಗೊರೆದ ಆ ಗೀತೆಯ ಪೂತಜಲದಲ್ಲಿ ತನ್ನ ಮನಸ್ಸಿನಲ್ಲೇ ಕೈತೊಳಕೊಂಡು, ಆದರೂ ಕೃಷ್ಣನ ಬಲಾತ್ಕಾರಕ್ಕೆ ಈಡಾಗಿ ತಾನೆ ಎಂಬಂತೆ, ಕರ್ಣನಲ್ಲಿ ಬಾಣವೆಸೆದನು. ಕೃಷ್ಣನು ಆಗ ಅಲ್ಲಿ ಇಲ್ಲದಿದ್ದರೆ, ಕರ್ಣನ ಆ ಸಂದುಕಟ್ಟಿನಲ್ಲಿ ಅರ್ಜುನನು ಸರ್ವಥಾ ಆತನಲ್ಲಿ ಇಷುಪಾತವನ್ನು ಮಾಡುತ್ತಿರಲಿಲ್ಲ. ಆದರೆ ಕೃಷ್ಣನ ಕೆಯ್ಯಲ್ಲಿ ಅರ್ಜುನನೆಂದರೆ ಸವಾರನ ಕೆಯ್ಯಲ್ಲಿ ಪಳಗಿದ ಕುದುರೆಯಂತೆ, ಆತನ ಸಮಕ್ಷದಲ್ಲಿ ಅರ್ಜುನನಿಗೆ ತನ್ನತನ ಲೇಶವೂ ಇದ್ದಿಲ್ಲ.

ಕರ್ಣನನ್ನು ಕುರಿತು ಅನ್ಯತ್ರ ಹೇಳಿರುವಂತೆ, ವೀರರಿಗೆ ಹಾಗೂ ವೀರತೆಗೆ ಎಲ್ಲಕ್ಕಿಂತ ಮೇಲಾಗಿ ಬೇಕಾದುದು ಇಂದ್ರಿಯನಿಗ್ರಹ. ತನ್ನನ್ನು ಗೆದ್ದಿಲ್ಲದಾತನು ಅನ್ಯರನ್ನು ಗೆಲ್ಲಲಾರ. ಜಿತೇಂದ್ರಿಯನು ಏಕಭಾರ್ಯನೇ ಆಗಿರಬೇಕೆಂದಿಲ್ಲ, ಆಗಣ ವಾಡಿಕೆಯ ಮೇರೆಗೆ ಬಹುಭಾರ್ಯನಾಗಿರಲೂ ಬಹುದು. ಆದರೆ ಪರಭಾರ್ಯೆಯನ್ನು ಮಾತ್ರ ಆತನು ಮುಟ್ಟಬಾರದಷ್ಟೆ, ಮನವರಿಯಲೂ

ಬಾರದು, ಕನವರಿಯಲೂ ಬಾರದು. ಆ ಮಟ್ಟಿಗೆ ಅರ್ಜುನನೂ ಕರ್ಣನಂತೆ ಉಗ್ರ ಸಂಯಮಿಯಾಗಿದ್ದನು. ಆ ಬಗ್ಗೆ ಉದಾಹರಣೆ ಯಾಗಿ, ಅರ್ಜುನನು ಅಮರಾವತಿಗೆ ಹೋಗಿದ್ದಾಗ ಅಲ್ಲಿ ತನ್ನೊಡನೆ ಕೂಡಬೇಡ ಊರ್ವಶಿಯನ್ನು (ಅಥವಾ ಪಂಪನೂ ರನ್ನನೂ ಎಂದಿರುವಂತೆ ರಂಭೆಯನ್ನು) ಅಲ್ಲಗಳೆದು ಆಕೆಯಿಂದ ಶಪಿಸಿಕೊಂಡನೆಂಬುದನ್ನು ಇಲ್ಲಿ ನೆನವರಿಸಬಹುದು.

**ಅತಿಮಾನವತೆ**

ಭಾರತದ ವೀರರೆಲ್ಲರೂ ಒಂದಲ್ಲ ಒಂದು ಕಾರಣದಿಂದ ಶಾಪ ಗ್ರಸ್ತರಾಗಿ ಭೂಮಿಯಲ್ಲಿ ಅವತರಿಸಿದ ದೇವತೆಗಳೆಂದೇ ಹೇಳಿದೆ ಯಾದರೂ, ತಾವು ನೆಗಳಿದ ಅದ್ಭುತವಾದ ಕಾರ್ಯಗಳಲ್ಲಿ ಅವರ ಆ ಬಳಿಕನೂ ಜಗತ್ಪ್ರಸಿದ್ಧರಾದ ಐತಿಹಾಸಿಕ ವ್ಯಕ್ತಿಗಳನೆಷ್ಟೋ ಹಿಂದಕ್ಕೆ ತಳ್ಳಿರುವರಾದರೂ, ಶ್ರೀಕೃಷ್ಣನೊಬ್ಬನ[illegible]ಲ್ಲರಲ್ಲಿ ಮಿಕ್ಕ ಯಾರೂ ಅತಿಮಾನವರಲ್ಲ. ಆದ[illegible]ದೆ ಅವ ಕಾದಿದನೆಂಬ, ಅಮರಾವತಿಗೆ ಹೋಗಿ [illegible]ಪರಮೇಶ್ವರನೊಡನೆ ಸದೆಬಡಿದು ಇಂದ್ರನ ಸುಧರ್ಮೆಯ[illegible] ದೇವತೆಗಳ ಶತ್ರುಗಳನ್ನು ಅರ್ಜುನನಾದರೊ, ತನ್ನಂದಿನ [illegible]ವನೊಂದಿಗೆ ಮಂಡಿಸಿದನೆಂಬ ಮೇಲ್ತರದವರಾದರೂ ಯಾವಂತರ ವೀರರಿಗೇ ಅಲ್ಲ, ಎಷ್ಟೇ ಸುತರಾಂ ಅಸಾಧ್ಯವಾದ, [illegible]ನವರಾದರೂ ಮನುಷ್ಯಮಾತ್ರರಿಗೆ ನೆಂಬುದರಿಂದ, ಆತನಾ ಆ ಮಹತ್ಕಾರ್ಯಗಳನ್ನು ಈಡೇರಿಸಿದ ಮತ್ತೊಬ್ಬ ಅತಿಮಾ[illegible]ರೆ (ಭಾರತದಲ್ಲಿ ಮೂರನೆಯಾತನಿಲ್ಲದ) ನಾದ ಅತಿಮಾನವ[illegible]ನೆನ್ನಬಹುದು. ಕೃಷ್ಣನ ಸಮಾನಸ್ಕಂಧ ಹಲವಂಗುಲಕ್ಕೆ [illegible]ದರೆ ಆತನು ಸರ್ವಥಾ ಅಲ್ಲ, ಕೃಷ್ಣನಿಂದ ಅತಏವ ಭಾರತ[illegible]ತರನಾದರೆ ಆತನೂ ಅತಿಮಾನವಕಲ್ಪನಹುದು. ಅರ್ಜುನನೇ [illegible]ವೀರಾಧಿವೀರರಲ್ಲಿ ಪುರೋರಥನೂ ಮಹಾನುಹನೂ [illegible]ಮ ಬೇರೆ ಹೇಳಬೇಕೆಂದಿಲ್ಲ.

ಆದರೆ ಅಹಂಕಾರ[illegible]ನಲ್ಲಿ ಮಾನುಷೋಚಿತವಾದ ಕೆಲವು ಕೊರತೆಗಳಿವೆ. ಆದರೂ [illegible] ಮಹತ್ತ್ವಾಕಾಂಕ್ಷೆಯೂ ಆತನು ಕೊಟ್ಟರೆ ಉಂಟಷ್ಟೇ. ವೀರನ[illegible]ರ್ಣನಿಗೆಂದಂತೆ, ಅವು ಜ್ಞಾನಿಯಲ್ಲಿ ದೂಷಣವಲ್ಲದೆ ಸ್ವಾಮಿ[illegible]ಷಣವೆಂದು ಅವನ್ನು ವಿಸರ್ಜಿಸಬಹುದು. ಕರ್ಣನಲ್ಲಿ ಭ್ರಾತೃ ಪರಾಕಾಷ್ಠೆಯನ್ನು ಮುಟ್ಟಿತಾದರೆ, 'ಜ್ಯೇಷ್ಠೋ ಭ್ರಾ[illegible] ಪಿತುಃ ಸಮಃ' ಎಂದು ಅರ್ಜುನನಿಗೆ ಧರ್ಮರಾಯನಲ್ಲಿದ್ದ ಆ[illegible]ಕ್ತಿ ಆತನಲ್ಲಿ ಅದೇ ಮಟ್ಟದ ಚರಮಸೀಮೆಯನ್ನು ಬಿ[illegible]. ಅದಕ್ಕೆ ಈಡಾಗಿಯೇ, ಕೀಚಕನ ಬಲಾತ್ಕಾರದಿಂದ ಧ್ವ[illegible]ದ ದ್ರೌಪದಿ ಮೊತ್ತಮೊದಲು ತನ್ನಲ್ಲಿ ಮೊರೆಯಿಟ್ಟರೂ, [illegible]ರಾಯನ ವ್ರತಭಂಗವಾದೀತು, ಅತನ ಸತ್ಯಧರ್ಮಕ್ಕೆ [illegible] ತಟ್ಟೀತು ಎಂದು ಅಳುಕಿ ತಾನೆ ಆಕೆಯ ಗೋಳಿಗೆ ಆತನು [illegible] ಆಕೆಗೆ ನೆರಗೆಯ್ಯನ್ನು ನೀಡದೆ ಹೋದನು. ಇದೇನೂ [illegible]ಕ್ಷಣವಲ್ಲ. ಆತನು ಬೃಹನ್ನಳೆಯಾದನಷ್ಟೇ ಅಲ್ಲ, ಅದಕ್ಕೆ [illegible]ಯೂ ಸಮವಾಯಿಯೂ ಆದ ಕ್ಲೈಬ್ಯವೂ ಆತನನ್ನು ಆಗಾಗ್ಗೆ [illegible]ಸಿತ್ತು. ಆ ಕಾರಣವೇ ಆತನು ಯುದ್ಧಮುಖದಲ್ಲಿ ಧನು [illegible]ಕೆಳಗಿಟ್ಟು ತಾನು ಕಾದಲೊಲ್ಲೆನೆಂದು ಕೆಯ್ಗಳಿಗೆ ಬಳೆಗಳನ್ನು [illegible]ಕೊಂಡಂತೆ ಕಣ್ಣೀರಿಟ್ಟು ಶ್ರೀಕೃಷ್ಣನನ್ನು ಅಂಗಲಾಚಿ ಬೇಡಿ [illegible]. ಅದೇ ಕಾರಣ ಆತನು ಬಹುಧಾ ಎಲ್ಲಿ ತನ್ನ ಮುಂದೆ ಹೆ[illegible]ಟ್ಟುಗಳು ಪ್ರಾಪ್ತವಾದುದನ್ನು ಕಂಡನೊ, ತನ್ನ ಜತೆಯಲ್ಲಿ [illegible]ಕುತಿದ್ದ ದೈವವು ತತ್ಕಾಲಕ್ಕಾದರೂ ತನ್ನ ಕೈಬಿಟ್ಟಂತೆ ಶಂಕಿಸಿದನೊ, ನೆರವಿಂದ, ಆತ[illegible] ಕೂಡಲೆ ಶ್ರೀಕೃಷ್ಣನಿಗೆ ಬಾಯಿಬಿಟ್ಟು ಆತನ ಪಾರಾದ. ಹಸ್ತಲಾಗದಿಂದ ತಾನೆ ಆ ಸಂಕಷ್ಟಗಳಿಂದ

**ಕರ್ಣಾರ್ಜುನ[illegible]**

ಇನ್ನು ಕರ್ಣಾ[illegible]ರತ್ವದ ತುಲನ ವಿವೇಚಿಸುವಲ್ಲಿ [illegible]ರ್ಜುನರಲ್ಲಿ ಯಾವಾತನ ವೀರತೆ ಬಲಗೈ ಎಂದು ಅದೇನೆಂದ[illegible] ಇದೊಂದು ವಿಷಯವನ್ನು ಮನವರಿಸಿಕೊಳ್ಳಬೇಕು. ಯಾ[illegible]ರ, ಪ್ರಸ್ಪರ್ಧಿಗಳಾದ ಸಮತಕೂಕದ ಮಹಾವೀರರಿಬ್ಬರಲ್ಲಿ [illegible]ವಾತನು ಮಡಿದು ಧಾರಾತೀರ್ಥದಲ್ಲಿ ಕೆಡೆವನೊ, ಆತನ ಕಡೆಗೆ ಒಲವರವು ನಮ್ಮ ಮನಸ್ಸನ್ನು ಸಹಸಾ ಎಳಕೊಂಡು ಹೋಗುತ್ತದೆ. ಇದು ತೀರ ನೈಸರ್ಗಿಕ, ಬಹುಶಃ ತೀರ ಅನಿವಾರ್ಯ. ನಮಗಾತನು ಭೂತಲದಲ್ಲಿ ಅಲ್ಲ, ಇದೋ ನಮ್ಮ ಹೃತ್ತಲದಲ್ಲಿ ತಾನೆ ಬಿದ್ದನೆನಿಸುತ್ತದೆ. ಆತನ ಪತನದ ಭಾರದಿಂದ ಸಮರ ಭೂಮಿಯಲ್ಲ, ನಮ್ಮ ಹೃದಯಭೂಮಿಯೇ ಜಗ್ಗುತ್ತದೆ. ಸಾಹಿತ್ಯದಲ್ಲಾದರೂ ಮನುಷ್ಯ ಸ್ವಭಾವೋಚಿತವಾದ ಈ ಮರೀಚಿಕೆ ಇದೆ. ಕವಿಗಳಾದರೂ ತಮ್ಮ ಕಾವ್ಯಗಳಲ್ಲಿ ತಾವು ಸೃಷ್ಟಿಸಿದ ಈ ಮರೀಚಿಕೆಯಲ್ಲಿ ತಾವೇ ತೊಡಗಿಕೊಂಡಿರುತ್ತಾರೆ. ಹೀಗಾಗಿ ಪ್ರತ್ಯೇಕ ವೀರಕಾವ್ಯದಲ್ಲಿ ನಾಯಕನಿಗಿಂತ ಪ್ರತಿನಾಯಕನಲ್ಲಿ ಅವರ ಒಲವರ ಹೆಚ್ಚಿಗಿರುವಂತೆ ಎದ್ದು ಮೂಡುತ್ತದೆ. ಉದಾ — ರಾಮಾಯಣದ ಶರೀರದಲ್ಲಿ ಹೇಗೂ ವಾಲ್ಮೀಕಿ ತನ್ನ ಶಬ್ದಸಂಪತ್ತನ್ನು ಶ್ರೀರಾಮನಲ್ಲಿ ಸೂರೆಗೊಟ್ಟಿರುವನಷ್ಟೇ, ಅದರ ಯುದ್ಧಕಾಂಡ ಕೊನೆವರಿಯುವಾಗ, ಕವಿಯ ಮನಸ್ಸು ರಾಮನನ್ನು ಬಿಟ್ಟು ರಾವಣನ ಕಡೆಗೆ ಹರಿಯುತ್ತದೆ; ಹೋಮರನ (Homer) ಈಲಿಯಡಿನಲ್ಲಿ ( Iliad) ನಾಯಕನಾದ ಅಖಿಲ್ಲೀಸನಿಗಿಂತ (Achilles) ಪ್ರತಿನಾಯಕನಾದ ಹೆಕ್ಟರನಲ್ಲಿ (Hector) ಆತನು ತನ್ನ ವಾಕ್ಚಾತುರ್ಯವನ್ನು, ಅತಏವ ಒಲುಮೆಯನ್ನು, ಹೆಚ್ಚಿಗೆ ವೆಚ್ಚಿಸಿರುತ್ತಾನೆ; ಮಿಲ್ಟನನ (Milton) Paradise Lost ನಲ್ಲಿ ಹೇಗೂ ಅದರ ಪ್ರತಿನಾಯಕನಾದ ಸೈತಾನನ (Satan) ಮುಂದೆ ಯೆಹೂದ್ಯರು (Jews) ಯೆಹೋವ (Jehovah) ಎನ್ನುವ ಪ್ರತ್ಯಕ್ಷ ದೇವರೇ ಬರೇ ಒಂದು ಪಾಂಡುಲೇಖದಂತೆ ಭಾಸವಾಗುತ್ತಾನೆ; ರನ್ನನ ಗದಾಯುದ್ಧದಲ್ಲಂತೂ ದುರ್ಯೋಧನನ ವ್ಯಕ್ತಿತ್ವದ ಮುಂದೆ ಭೀಮನ ವ್ಯಕ್ತಿತ್ವ ಸಾಲದೆನಿಸುತ್ತದೆ, ಇ. ಇ. ಹೀಗೆ ಕವಿಗಳೇ ತಮ್ಮ ನಾಯಕರಿಗಿಂತ ಪ್ರತಿನಾಯಕರನ್ನು, ಆ ಪ್ರತಿನಾಯರಲ್ಲಿ ತೀರ ಮನಸೋತಂತೆ ಇಷ್ಟು ಒಲವರದಿಂದ ಬಣ್ಣಿಸಿರುವಲ್ಲಿ, ಅವರ ಕಾವ್ಯಗಳಿಂದ ತಾನೆ ನಾವು ಒಲ್ಲ ಕರ್ಣಾರ್ಜುನರ ವೀರತ್ವವನ್ನು ವ್ಯಕ್ತಿತ್ವವನ್ನು ಕುರಿತ ನಮ್ಮೀ ವಿವೇಚನೆಯ ದಂಡಿ ಸಾಹಜಿಕವಾಗಿ ತುಸವಾದರೂ ಕರ್ಣನ ಕಡೆಗೆ ಒಗ್ಗಿದರೆ ಅದೇನೂ ಸೋಜಿಗವಲ್ಲ. ಆದರೂ ಅವರ ಪರಸ್ಪರ ತುಲನೆಯನ್ನು ಕುರಿತು ನನ್ನ ನಿಷ್ಪಕ್ಷಳವಾದ ಅಭಿಪ್ರಾಯವನ್ನು ನಿವೇದಿಸುವುದಾದರೆ ಹೀಗೆನ್ನಬಹುದು—

ಗ್ರೀಕರ ಮತದಂತೆ, ಏವಂಚ ಅವರ ಮತವೆಂದು ಅವರ ಸಾಹಿತ್ಯದಿಂದ ನಿಶ್ಚಯಿಸಲಾಪಂತೆ, ಯಾವಾತನು ಪ್ರತಿಕೂಲವಾದ ದೈವದೊಡನೆ ಹೆಣಗಾಡುವನೊ, ಆತನು ಸೋತನೇ ಆದರೂ ಮಹಾವೀರ, ಅಥವಾ ಆತನೂ ಒಬ್ಬ ಮಹಾವೀರ. ಗ್ರೀಕರ ರುದ್ರನಾಟಕಗಳ ವೀರರು ಬಹುಶಃ ಈ ಜಾತಿಯವರು. ನಮ್ಮಲ್ಲಿ ಹಾಗಲ್ಲ. ತನಗೆ ಮೊತ್ತಮೊದಲಲ್ಲಿ ದೈವಬಲವಿಲ್ಲದಿದ್ದರೂ, ಯಾರು ಕೊನೆಯ ಹೋರಟೆಯಲ್ಲಿ ಗೆದ್ದು ಬರುವನೊ ಆತನೇ ಮಹಾವೀರ. ಅತಏವ ಕೊನೆಯ

# ಒಂದು ಪ್ರಾರ್ಥನೆ

( ರಾಗ ಕಾಂಬೋಧಿ )

ತಂದೆ, ನಾ ನಡೆನಡೆದು ಬಲು ಬಳಲಿದೆನ, ದಾರಿ
ಇನಿತೊಂದು ಕಠಿನವೆಂದರಿಯದಾದೆ ।
ಹಿಂದಕಡಿ ಇಡಲಾರೆ, ದಾರಿದೋರುವ ತಾರೆ,
ಮುಂದರಿಯೆ ಮಬ್ಬಿನಲಿ ಕಾಣದಾದೆ ॥

ಕಲ್ಲುಂಟು, ಮುಳ್ಳುಂಟು, ತಗ್ಗುದಿಣ್ಣೆಗಳುಂಟು,
ಮೆಲ್ಲಡಿಯ ಮನುಜಗಿದು ಸಲ್ವುದುಂಟೆ ? ।
ಎಲ್ಲ ದಾರಿಗಳಂತೆ ಈ ಲೋಕದೊಳಗಂತೆ
ಸೊಲ್ಲಿಸಿದರಲ್ತೆ ಬಲ್ಲವರು ಮುಂತೆ ! ॥

ವಕ್ರವಾಗಿದೆ ದಾರಿ ಎಂದದಂ ದೂರುವೆನೆ?
ಅದನಳೆಯುವೆನ್ನಡಿಯ ಹಳಿಯದಿಹೆನೆ? ।
ಶಕ್ರ ಸೂರ್ಯರ ಶುದ್ಧ ಪಾದವಾದೊಡಮೇನೊ
ಹುಡಿಯುಂಟದಿಹುದೆ ಹಾದಿಯ ನಡೆಯಲು ? ॥

ಕೈದೀವಿಗೆಯೆ ? ಮೆಯ್ಯ ಸುಡುವಗ್ನಿ ಜ್ವಾಲೆಯೆ ?
ಬೀದಿಯೇ ? ಬಾಯ್ದೆರೆದ ನಕ್ರಮುಖವೆ ?
ಹೊಗಳಿಕೆಯೆ ? ತೆಗಳಿಕೆಯೆ ? ಹೂವೆ ? ಹಾವಿನ ಹೆಡೆಯೆ ?
ನಗೆಯೆ ? ಬಗೆ ಇರಿವ ಹಗೆಗಳ ಕೋರೆಯೇ ? ॥

ಆವ ನಂಟನು ನೆಚ್ಚಿ ಕಡೆಯಲಾನೊಲ್ಲೆ ನೀ-
ನೊಬ್ಬನೇ ಕೈಗೊಡುವ ಬಂಧುವೆನಗೆ ।
ಭಾವ ಭಾನದಿ ಬಂದು ಕನಸನೆನಿತನೊ ತಂದು
ತಂದೆ ನೀ ಮುನ್ನೆನಿತು ಪರಿ ಸಲಹಿದೆ ! ॥

—ಜಿ. ಆರ್. ಪಾಂಡೇಶ್ವರ್

---

ವರೆಗೂ ತನಗೆ ದೈವಬಲವಿದ್ದು ಕೊಟ್ಟಕೊನೆಗೆ ಆ ನಿಯತಿ ತನ್ನಿಂದ ತೊಲಗಿಹೋದ ರಾವಣನು ಮಹಾವೀರನಲ್ಲ, ಮಹಾವೀರಕಲ್ಪನಷ್ಟೆ. ಈ ಪ್ರಕಾರ ನಮ್ಮ ದೃಷ್ಟಿಯಿಂದ ಅರ್ಜುನನೇ ಬಲಗೈ ವೀರನಾದರೆ, ಗ್ರೀಕರ ದೃಷ್ಟಿಯಿಂದ ಪ್ರಾಯಶಃ ಕರ್ಣನೇ ಬಲಗೈ ವೀರ. ಹೇಗೋ ಅವರಿಬ್ಬರ ವೀರತ್ವಗಳ ಪರಸ್ಪರ ತುಲನೆಯಲ್ಲಿ ನನಗೆ ತೋರುವಂತೆ ಇದೆ ಎಂದರೆ ಒಂದು ಭತ್ತದ ಕಾಳಿನಷ್ಟು ಹೆಚ್ಚುಕಡಿಮೆ. ಈ ಬಗೆಯ ಕೌಶಲವಾದರೊ ವ್ಯಾಸನ ಕವಿತಾಪ್ರತಿಭೆ ಪರಮಾವಧಿಗೆ ಮುಟ್ಟಿದುದರ ಹೆಗ್ಗುರುಹು. ಇತರ ಭಾರತಕಾರರೂ ಆತನ ಹೆಜ್ಜೆಯನ್ನೇ ಅನುಸರಿಸಿರುವುದರಿಂದ, ಕರ್ಣಾರ್ಜುನರ ವೀರತೆಯೊಳಗೆ ಈಗಲೂ ಅದೇ ಲವಮಾತ್ರದ ವ್ಯತ್ಯಾಸ ಉಳಿದಿದೆ. ಆ ಕಾಳನ್ನಾದರೆ ಯಾರ ಕಡೆಗೆ ಹಾಕಬೇಕೋ ನಾನು ಸುತರಾಂ ಕಂಡಿಸಲಾರೆ. ಅತಏವ ಅವರಿಬ್ಬರ ಅಪ್ರತಿಮವೂ ಅಪ್ರತಿರಥವೂ ಹೇಗೋ ಹಾಗೆ ಶ್ಲಾಘನೀಯವೂ, ವಿಸ್ಮಯನೀಯವೂ ಆದ ವೀರತ್ವಕ್ಕೆ ತಲೆಬಾಗಿ ಅದಕ್ಕೆ ನನ್ನ ಮನವಾರೆ ಮೆಚ್ಚುಗೆಯ ಈ ಹುಲುಕತ್ತರಿವೀಳ್ಯವನ್ನು ಅವರಿಬ್ಬರಿಗೂ ಅರ್ಪಿಸುತ್ತೇನೆ.

# ★ ವರ್ಷ ಭವಿಷ್ಯ ★

ಶಕೆ ೧೮೭೧ ಕಾರ್ತಿಕ ಶುದ್ಧ ೧ ಶನಿವಾರದಿಂದ ಶಕೆ ೧೮೭೨ ಆಶ್ವಿನ ವದಿ ೩೦ ಗುರುವಾರದ ವರೆಗೆ )
( ೧೯೪೯ ಅಕ್ಟೋಬರ ೨೨ನೇ ತಾರೀಖಿನಿಂದ ೧೯೫೦ ನವೆಂಬರ ೯ನೆಯ ತಾ॥ ನ ವರೆಗೆ )

ಜ್ಯೋತಿಷಿ:— ಶ್ರೀ. ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯ ಕಥನ ಆಫೀಸ, ಕಾರ್ಲೇಕರ ಬಿಲ್ಡಿಂಗ, ಖಡೆಬಜಾರ—ಬೆಳಗಾವಿ

## ಮೇಷ

ಅಂಜಿಕಿನ್ಯಾತಕಯ್ಯಾ. ಈ ವರ್ಷ ನಿಮ್ಮ ಆರೋಗ್ಯವು ಉತ್ತಮವಾಗಿ ಉಳಿಯುವದು. ನಾಲ್ಕೆಂಟು ದಿನವಾದರೂ ಹಾಸಿಗೆ ಹಿಡಿದು ಬೀಳುವ ಕಾಯಿಲೆಯಾಗುವ ಹೆದರಿಕೆ ನಿಮಗಿಲ್ಲ. ಆದರೆ ಕನ್ಯಾ ಮತ್ತು ವೃಶ್ಚಿಕ ರಾಶಿಯಲ್ಲಿ ಮಂಗಳನಿರುವ ಕಾಲದಲ್ಲಿ ಅಂದರೆ ೧೦–೧೨-೪೯ ರಿಂದ ೨೨-೩-೫೦ ರ ವರೆಗೆ, ೩೦–೫–೫೦ ರಿಂದ ೩೦-೭-೫೦ ರ ವರೆಗೆ ಮತ್ತು ೨೫-೧೦-೫೦ ರ ನಂತರದ ಕಾಲದಲ್ಲಿ ತಿಂಡಿ, ಬಣಹುರುಕು, ಅತಿ ವಿಚಾರದಿಂದ ತಲೆಶೂಲಿ, ಕಾಲುಜಾರಿ ಬೀಳೋಣ ಮುಂತಾದ ಕಿರುಕಳ ತ್ರಾಸವಾದರೂ ಸ್ವಲ್ಪ ಮಟ್ಟಿಗೇ ಆಗುವದು! ಇತರ ಉಪಯುಕ್ತ ವಸ್ತುಗಳಿಂದ ದೊರೆಯುವ ದೇಹ ಸುಖಕ್ಕೆ ಇಲ್ಲವೆ ದೇಹ ಪುಷ್ಟಿಗೆ ೧೨-೩-೫೦ ರ ನಂತರದ ಕಾಲ ಉತ್ತಮ. ಈ ವರ್ಷ ಪ್ರಾಪಂಚಿಕ ಸುಖಕ್ಕೆ ಕೊರತೆಯಿಲ್ಲದಿದ್ದರೂ ೨೯–೧೧–೪೯ ರಿಂದ ೨೯-೪-೫೦ ರ ವರೆಗೆ, ೨೦-೬-೫೦ ರಿಂದ ೩-೯-೫೦ ರ ವರೆಗೆ ಮತ್ತು ೨೨–೧೦–೫೦ ರ ನಂತರದ ಕಾಲವು ಹೆಚ್ಚಿಗೆ ಸುಖಕೊಡುವಂಥದೂ ಕುಟುಂಬದ ಉತ್ಕರ್ಷಕ್ಕೆ ಅನುಕೂಲವಾದ ಸಂಗತಿಗಳು ಘಟಿಸುವ ಸಂಭವವುಳ್ಳದ್ದೂ ಆಗಿದೆ. ೩೧-೧೦-೪೯ ರಿಂದ ೨೮-೧೧-೪೯; ಬಳಿಕ ೩೦-೩-೫೦ ರಿಂದ ೨೯-೪-೫೦ ನಂತರ ೨೬-೫-೫೦ ರಿಂದ ೨೦-೬-೫೦; ಆ ಮೇಲೆ ೧೬-೭-೫೦ ರಿಂದ ೩-೯-೫೦ ರ ವರೆಗೆ ಮತ್ತು ೨೨-೧೦-೫೦ ರಿಂದ ಮುಂದಿನ ದಿನಗಳು ಸ್ತ್ರೀ ಸುಖದ ದೃಷ್ಟಿಯಿಂದ ವಿಶೇಷ ಸಂತೋಷದಾಯಕವಾಗಿವೆ. ಈ ಕಾಲದಲ್ಲಿ ಪ್ರೇಮವೂ ಹೆಚ್ಚುವದು. ಸಂತತಿಯ ಏಳಿಗೆಗೆ ಈ ವರ್ಷ ಮಾರ್ಚ ೧೨ ರ ನಂತರ ಉತ್ತಮ ಕಾಲವಿದೆ. ಪರೀಕ್ಷೆಗಳಲ್ಲಿ ಯಶ, ನೌಕರಿಯಲ್ಲಿ ಬಡತಿ, ಸ್ವತಂತ್ರ ಧಂದೆಯಲ್ಲಿದ್ದವರಿಗೆ ವಿಶೇಷ ಧನಲಾಭವಾಗುವದು. ನೌಕರಿ ಇಲ್ಲವೆ ಧಂದೆಯನ್ನು ಪ್ರಾರಂಭಿಸಬೇಕೆನ್ನುವವರ ಇಷ್ಟಾರ್ಥವೂ ಕೈಗೂಡುವದು. ಆದರೆ ಈಗ ೧೦-೧೨-೪೯ ರ ವರೆಗಿನ ಕಾಲ ಮತ್ತು ಮುಂದೆ ೨೨–೩–೫೦ ರಿಂದ ೩೦-೫–೫೦ ರ ವರೆಗಿನ ಅವಧಿಯಲ್ಲಿ ಪ್ರಕೃತಿಗೆ ಸ್ವಲ್ಪ ಹೆಚ್ಚು ಕಡಿಮೆ ಆದಲ್ಲಿ ಖಂಡಿತವಾಗಿ ತೊಂದರೆ ಆಗುವದು. ಅಗಸ್ಟ ೧೬ ರಿಂದ ೩೦ ರ ಒಳಗಿನ ದಿನಗಳಲ್ಲಿ ಈ ಮೇಲಿನ ಇಬ್ಬರಲ್ಲಿ ಒಬ್ಬರಿಗೆ ಹಾನಿ ಆಗುವ ಸಂಭವವಿದೆ.

ನಿಮ್ಮ ಸ್ವಂತದ ಉದ್ಯೋಗ ಧಂದೆಗಳಿಗೆ ಈ ವರ್ಷವು ಚನ್ನಾಗಿದ್ದು ಎಪ್ರಿಲ, ಮೇ, ಜುಲೈ, ಸಪ್ಟೆಂಬರ, ಅಕ್ಟೋಬರಗಳಲ್ಲಿ ಭರಭರಾಟಿಯು ಕಂಡುಬರುತ್ತದೆ. ನೌಕರದಾರರಿಗೆ ಅಗಸ್ಟ ೩೦ ರ ವರೆಗೆ ವರಿಷ್ಠ ಅಧಿಕಾರಿಗಳ ಕಿರುಕುಳ ತೊಂದರೆ ಇದ್ದರೂ ಅನಂತರ ಅವರ ಶಿಫಾರಸಿನಿಂದಲೇ ಪಗಾರದಲ್ಲಿ ಬಡತಿ ಸಿಗುವದೆಂಬುದೂ ಅಷ್ಟೇ ಖಂಡಿತ! ನಿಮ್ಮ ಕೈಕೆಳಗಿನವರು ನಿಮ್ಮನ್ನು ಕೆಳಗುರುಳಿಸಬೇಕೆಂದು ಹಗಲಿರುಳೂ ಪ್ರಯತ್ನ ನಡೆಸುವರು. ಅವರ ಈ ಪ್ರಯತ್ನವು ನವಂಬರ ೧೫ ರಿಂದ ಡಿಸೆಂಬರ ೧೫, ಮಾರ್ಚ ೧೩ ರಿಂದ ಎಪ್ರಿಲ ೧೩, ಜೂನ ೧೯ ರಿಂದ ಜುಲೈ ೬ ಮತ್ತು ಸಪ್ಟೆಂಬರದ ಪ್ರಥಮಾರ್ಧದಲ್ಲಿ ವಿಶೇಷ ಭರದಿಂದ ನಡೆಯುವದು.

ದ್ರವ್ಯಲಾಭದ ದೃಷ್ಟಿಯಿಂದ ಮಾರ್ಚ ೧೨ ರ ನಂತರ ಉತ್ತಮಕಾಲವಿದೆಯಾದರೂ ಅಗಸ್ಟ ೩೦ ರ ನಂತರ ನಿಮ್ಮ ಅನುಕೂಲ ಗ್ರಹಗಳನ್ನು ಕಂಡು ನಿಮಗೇ ಆಶ್ಚರ್ಯವಾದೀತು! ಆಪ್ತೇಷ್ಟರು, ನೆರೆಹೊರೆಯವರು ವಿಶೇಷ ಸಲಿಗೆಯಿಂದ ನಡೆದುಕೊಳ್ಳುವರು. ನಿಮ್ಮ ತಾಯಿಗೆ ಮಾರ್ಚ ೧೨ ರ ನಂತರ ಮತ್ತು ತಂದೆಗೆ ಅಗಸ್ಟ ೩೦ ರ ವರೆಗೆ ಪ್ರಕೃತಿ ಚನ್ನಾಗಿರಲಾರದು. ನಿಮ್ಮ ಸಂತತಿಯ ಮದುವೆ ಆಗತಕ್ಕದ್ದಿದ್ದರೆ ಮಾರ್ಚ ೧೨ ರ ನಂತರ ನಿಶ್ಚಯವಾಗಿ ಮದುವೆಯಾಗುವ ನಿರ್ಧಾರವಿದೆ. ಈ ವರ್ಷದಲ್ಲಿ ಧನಲಾಭ ಬೇಕಾದಷ್ಟಾದರೂ ಮಾತ್ರ ಕೂಡಿಬೀಳುವದಕ್ಕೆ ಅನುಕೂಲವಿಲ್ಲ. ಶುಭಕಾರ್ಯದಲ್ಲಿ ದುಂದುಗಾರಿಕೆ ಕಂಡುಬಂದೀತು. ಇಲ್ಲದ ಸಲ್ಲದ ಚಟದ ಕಡೆಗೆ ಮನಸ್ಸು ಹರಿಯುವದು. ತರುಣರಿಗೆ ೩೦ ನವೆಂಬರದ ವರೆಗೆ, ಎಪ್ರಿಲ ೨೯ ರಿಂದ ಮೇ ೨೫ ರ ವರೆಗೆ, ಅಗಸ್ಟ ೧೦ ರಿಂದ ಸಪ್ಟೆಂಬರ ೩ ರ ವರೆಗೆ, ಸಪ್ಟೆಂಬರ ೨೮ ರಿಂದ ಅಕ್ಟೋಬರ ೨೨ ರ ವರೆಗಿನ ಕಾಲದಲ್ಲಿ ಕುಡಿತದ ಚಟ ಗಂಟುಬೀಳುವ ಸಂಭವವಿದೆ.

ಅಗಸ್ಟ ೩೦ ರ ನಂತರ ಮಿತ್ರರೊಡನೆ ಎಚ್ಚರದಿಂದ ನಡೆದುಕೊಳ್ಳಬೇಕು. ಯಾಕಂದರೆ ಒಬ್ಬನ ಮಬ್ಬಿಗೆ ಬಿದ್ದು ಹುಚ್ಚಾಪಟ್ಟಿ ಕುಣಿಯುವ ಸಂಭವವಿದೆ. ಆದರೆ ನಿಮ್ಮ ಶತ್ರುಗಳ ಸರ್ವನಾಶ ತಂತಾನೇ ಆಗುವದು. ಸರಕಾರೀ ಇಲ್ಲವೆ ಖಾಸಗಿ ರೀತಿಯಿಂದ ನಡೆದ ವಾದವಿವಾದಗಳಲ್ಲಿ ಮೊದಲು ವೈರಿಯ ಕೈಮೇಲಾದರೂ ನಂತರ ಅನೇಕ ಕಡೆಗಳಲ್ಲಿ ನಿಮಗೇ ಜಯ ದೊರೆಯುವಂತೆ ದೈವವು ನಿಮ್ಮ ಬೆನ್ನು ಕಟ್ಟುವದೆಂಬಲ್ಲಿ ಸಂದೇಹವಿಲ್ಲ! ಎರಡು ಮೂರು ಸಲ ದೂರದ ಪ್ರವಾಸ ಸಂಭವಿಸಿ ಒಮ್ಮೆಯಾದರೂ ಯಾತ್ರಾಸಂಚಾರದ ಪುಣ್ಯ ಲಭಿಸುವದು.

ಈ ರಾಶಿಯ ಸ್ತ್ರೀಯರಿಗೆ ಈ ವರ್ಷ ಪ್ರಾಪಂಚಿಕ ಸುಖದಲ್ಲಿ ವಿಶೇಷ ಆನಂದವಿದೆ. ಆದರೆ ಎಪ್ರಿಲ ೨೯ ರಿಂದ ಮೇ ೨೫ ರ ವರೆಗೆ, ಸಪ್ಟೆಂಬರ ೨೮ ರಿಂದ ಅಕ್ಟೋಬರ ೨೨ ರ ವರೆಗೆ ಪತಿಪತ್ನಿಯರಲ್ಲಿ ಸಿಟ್ಟು ಸೆಡವು ನಡೆದೀತು, ಜಾಗರೂಕರಾಗಿರಬೇಕು. ಗರ್ಭಿಣಿಯರಿಗೆ ಹೆಚ್ಚಾಗಿ ಪುತ್ರಲಾಭದ ಯೋಗವಿದೆ. ೨೨-೩-೫೦ ರಿಂದ ೩೦-೫-೫೦ ರ ವರೆಗಿನ ಅವಧಿಯಲ್ಲಿ ಹಡೆಯುವ ಹೆಣ್ಣುಮಕ್ಕಳಿಗೆ ಸ್ವಲ್ಪ ತೊಂದರೆಯಿದ್ದರೂ ಪ್ರಾಣಭಯ ವೆಳ್ಳಷ್ಟೂ ಇಲ್ಲ!

ಈ ರಾಶಿಯ ವಿದ್ಯಾರ್ಥಿಗಳಿಗೆ ಮಾರ್ಚ ೧೨ ರ ನಂತರ ಯಶಸ್ಸಿನ ಆಶೆ ಹೆಚ್ಚಿಗಿದೆ. ಅಕ್ಟೋಬರ ೧೮ ರಿಂದ ನವೆಂಬರ ೧೬ ಮತ್ತು ಡಿಸೆಂಬರ ೧೬ ರಿಂದ ಜಾನೇವರಿ ೧೪ ನಂತರ ಫೆಬ್ರುವರಿ ೧೩ ರಿಂದ ಮಾರ್ಚ ೧೪ ಬಳಿಕ ಎಪ್ರಿಲ ೧೪ ರಿಂದ ಮೇ ೧೪, ಮತ್ತು ಜೂನ ೧೫ ರಿಂದ ಜುಲೈ ೧೬ ಹಾಗೂ ಅಗಸ್ಟ ೩೦ ರಿಂದ ಸಪ್ಟೆಂಬರ ೧೫ ಈ ಅವಧಿಗಳಲ್ಲಿ ಪರೀಕ್ಷೆಗೆ ಕಟ್ಟತಕ್ಕ ವಿದ್ಯಾರ್ಥಿಗಳಿಂದ ಪೀಡೆ ದೊರೆಯುವ ಸಂಭವ ಹೆಚ್ಚಾಗಿದೆ!

## ವೃಷಭ

ಯಾವಾಗ್ಯೂ ಚಿಂತೆ ಈ ದೇಹಕ್ಕೆ! ಅಗಸ್ಟ ೩೦ ರ ವರೆಗೆ ಈ ರಾಶಿಯವರಿಗೆ ಆರೋಗ್ಯದ ದೃಷ್ಟಿಯಿಂದ ಚನ್ನಾಗಿಲ್ಲ. ಅದರಲ್ಲಿಯೂ ೧೦-೧೨-೪೯ ರ ವರೆಗೆ, ನಂತರ ೨೨-೩-೫೦ ರಿಂದ ೩೦-೫-೫೦ ರ ವರೆಗೆ ಹಾಗೂ ೨೫-೫-೫೦ ರ ನಂತರದ ಕಾಲಾವಧಿಯಲ್ಲಿ ಕಾಯಿಲೆಯ ತಕರಾರು ನಡೆದೇ ಇದ್ದರೂ ಜೀವಕ್ಕೆ ಹೆದರಿಕೆಯಿಲ್ಲ. ಮನೆಯಲ್ಲಿ ಸ್ವಲ್ಪ ಜಗಳ ಇದ್ದರೂ ಪ್ರಾಪಂಚಿಕ ಸುಖ ಸಾಕಷ್ಟು ಚನ್ನಾಗಿದೆ ಅದರಲ್ಲಿಯೂ ಅಕ್ಟೋಬರ ೩೦ ರ ವರೆಗೆ, ಡಿಸೆಂಬರ ೮ ರಿಂದ ೨೬ ರ ವರೆಗೆ ಜಾನೇವರಿ ೨೧ ರಿಂದ ಫೆಬ್ರುವರಿ ೮ ರ ವರೆಗೆ ನಂತರ ಮಾರ್ಚ ೪ ರಿಂದ ೧೮, ಜೂನ ೨೬ ರಿಂದ ಜುಲೈ ೧೩, ಬಳಿಕ ಜುಲೈ ೩೦ ರಿಂದ ಅಕ್ಟೋಬರ ೨೪ ರ ವರೆಗೆ ದಿನಗಳು ಉತ್ಸಾಹದಿಂದ ಕುಟುಂಬದ ಏಳಿಗೆಗೆ ಅನುಕೂಲವಾಗಿ ಕಳೆಯುವವು. ಸ್ತ್ರೀ ಸುಖಕ್ಕೆ ಈ ವರ್ಷವು ಅಪರೂಪವಾಗಿದ್ದು ಸತಿಪತಿಯರ ಮತ ಭೇದವೇನೆ ಇದ್ದರೂ ಅವು ಅಳಿದು ಪ್ರೇಮ ಬಂಧನವು ದೃಢವಾಗುತ್ತ ಹೋಗುವದು. ತಾಯಿತಂದೆಗಳಿದ್ದಲ್ಲಿ ಅವರ ಪ್ರಕೃತಿಗೆ ಮಾರ್ಚ ೨೩ ರಿಂದ ಮೇ ೩೦ ರ ವರೆಗೆ ವಿಶೇಷ ಕ್ಲೇಶ ಮತ್ತು ಅವರು ಮುಪ್ಪಿನವರೇ ಇದ್ದಲ್ಲಿ ಒಬ್ಬರಿಗೆ ಪ್ರಾಣ ಭಯ. ಅದೇ ಕಾಲದಲ್ಲಿ ನಿಮ್ಮ ಹೆಂಡತಿಯ ಆರೋಗ್ಯವೂ ಕೆಡುವ ಸಂಭವವಿದೆ. ಮಾರ್ಚ ೧೨ ರ ವರೆಗೆ ಸಂತತಿಪ್ರಾಪ್ತಿ ಯೋಗವಿದೆ. ಇದ್ದ ಮಕ್ಕಳ ಉತ್ಕರ್ಷದ ದೃಷ್ಟಿಯಿಂದಲೂ ಈ ವರ್ಷವು ಮೇಲಿನ ದಿನಾಂಕದ ವರೆಗೆ ಅತ್ಯುತ್ತಮ ಫಲಪ್ರದವಾಗಿದೆ. ಆ ನಂತರ ಕೂಡ ಮೇ ೨೫ ರಿಂದ ಜುಲೈ ೩೦ ರ ವರೆಗೆ ಮತ್ತು ಅಗಸ್ಟ ೨೦ ರಿಂದ ಸಪ್ಟೆಂಬರ ೮ ರ ವರೆಗೆ ಅವರ ಏಳಿಗೆಯ ಆಕಸ್ಮಿಕ ಯೋಗವಿದೆ. ವಾಹನಗಳು ಇದ್ದಲ್ಲಿ ಅವು ನಾದುರಸ್ತಾಗುವ ಇಲ್ಲವೆ ಮುರಿದು ಹೋಗುವ ಹೆದರಿಕೆಯು ಡಿಸೆಂಬರ ೧೦ ರ ವರೆಗೆ ಮತ್ತು ಮಾರ್ಚ ೨೨ ರಿಂದ ಎಪ್ರಿಲ ೨೨ ರ ವರೆಗೆ ಕಂಡು ಬಂದೀತು.

ನೆರೆಹೊರೆಯವರು ನಿಮ್ಮನ್ನು ಹೆಚ್ಚಾಗಿ ದ್ವೇಷಿಸುವರು, ಆಪ್ತರು ಸೆಡವಿನಿಂದ ನಡೆದುಕೊಳ್ಳುವರು, ಆಳು-ಹೋಳುಗಳೂ ಅನುಚಿತ ರೀತಿಯಿಂದ ವರ್ತಿಸುವರು. ಎಪ್ರಿಲ ೪ ರಿಂದ ೨೪ ಸುಮಾರಕ್ಕೆ ನಿಮ್ಮ ಸಂತತಿಯಲ್ಲಿ ಒಬ್ಬರು ಕಳೆದುಹೋಗುವ ಇಲ್ಲವೆ ಓಡಿ ಹೋಗುವ ಇಲ್ಲವೆ ಅಪ್ರಿಯ ರೀತಿಯಲ್ಲಿ ನಡೆದುಕೊಳ್ಳುವ ಸಂಭವವಿದೆ. ಅಗಸ್ಟ ೩೦ ರ ನಂತರ ಪ್ರಾಪಂಚಿಕ ತೊಂದರೆ ಒಂದೂ ಉದ್ಭವಿಸಲಾರದು. ಮಕ್ಕಳ ಮದುವೆಯಾಗತಕ್ಕದಿದ್ದರೆ ಮಾರ್ಚ ೧೨ ರ ಒಳಗಾಗಿ ನಿರಾಯಾಸದಿಂದ ಆಗುವದು.

ಉದ್ಯೋಗ ಧಂದೆಯಲ್ಲಿ ತೊಡಗಿದವರಿಗೆ, ನೌಕರದಾರರಿಗೆ ಈ ವರ್ಷವು ಒಳ್ಳೇ ಜಯಪ್ರದವಾಗಿದ್ದು ಮನಸೋಕ್ತ ದ್ರವ್ಯ ಲಾಭವಾಗುವದು. ಕೈಯಿಂದ ತಪ್ಪಾದರೂ ಅದರಿಂದ ಹಾನಿಯಾಗದೆ ಲಾಭವೇ ಆದೀತು! ದ್ರವ್ಯ ಸಂಪಾದನೆಯ ಕಾರ್ಯದಲ್ಲಿ ನೀತಿ ಅನೀತಿಯನ್ನು ನೀವು ಸಂಪೂರ್ಣವಾಗಿ ದುರ್ಲಕ್ಷಿಸಿದರೂ ನೀತಿಯ ಸೋಗನ್ನು ಮಾತ್ರ ಚನ್ನಾಗಿ ಹಾಕುವಿರಿ! ನೌಕರದಾರರಿಗೆ ಮಾರ್ಚ ೧೨ ರ ನಂತರ ವಿಪುಲ ಲಾಭವಿದೆ. ಮೇ ೧೪ ರಿಂದ ಜೂನ ೧೪ ರ ವರೆಗೆ ಗ್ರೇಡ ಸಿಗುವ ಸಂಭವ; ಈ ಕಾಲದಲ್ಲಿ ಮತ್ತು ಅಗಸ್ಟ ೧೫ ರಿಂದ ಸಪ್ಟೆಂಬರ ೧೫ ರ ವರೆಗೆ ಬದಲಿ ಆಗುವದು ಖಂಡಿತ. ನಿಮ್ಮ ವರಿಷ್ಠರು ತಮ್ಮ ಅಧಿಕಾರವನ್ನೆಲ್ಲ ನಿಮಗೇ ಒಪ್ಪಿಸಿ ಬಿಡುವಂತೆ ಅನುಗ್ರಹ ತೋರುವರು. ಕೈಕೆಳಗಿನ ಜನರು ನಿಮಗೆ ಪ್ರತಿಕೂಲರಾದರೂ ನಿಮ್ಮ ಬುದ್ಧಿ, ದರ್ಪಕ್ಕೆ ಅವರು ಕಂಗೆಟ್ಟು ಹೋಗುವದು. ಲಂಚ ಕೊಟ್ಟಾಧರೂ ಕೈಯಲ್ಲಿರುವ ಅಧಿಕಾರದ ದುರುಪಯೋಗ ಮಾಡಿಕೊಂಡರೂ ಗುರುಮಹಾರಾಜರ ಪೂರ್ಣಕೃಪೆಯಿರುವದರಿಂದ ಅದೆಂದಿಗೂ ಬಯಲಿಗೆ ಬರಲಾರದು.

ಸ್ವತಂತ್ರ ಧಂದೆಯವರೂ ಕಳ್ಳಪೇಟೆ ಮುಂತಾದ ಬೇಕಾದ ರೀತಿಯಿಂದ ತಮ್ಮ ಬೊಕ್ಕಸ ತುಂಬಿಕೊಳ್ಳುವದಕ್ಕೆ ಪ್ರಯತ್ನಿಸಬಹುದು. ಅಗಸ್ಟ ೩೦ ರ ವರೆಗೆ ನಾಲ್ಕನೇ ಶನಿಯಿರುವದರಿಂದ ಇಂಥ ಪಾಪಕೃತ್ಯಗಳಿಗೆ ಮನಸು ವಿಶೇಷ ಹರಿಯುವದು. ನಿಮ್ಮದು ಯಾವದೇ ಧಂದೆ ಇದ್ದರೂ ಗಿರಾಕಿಗಳು ಬಂದು ಮುಕರುವರು. ಈ ವರ್ಷ ನಿಮ್ಮ ದೈವ ಇಷ್ಟು ಬಲವತ್ತರವಾಗಿದೆ. ವಿಶೇಷತಃ ಮಾರ್ಚ ೧೨ ರ ವರೆಗೆ ತೇಜೀ ವ್ಯವಹಾರ ನಡೆಯುವನು.

ಈ ರಾಶಿಯ ಸ್ತ್ರೀಯರಿಗೆ ಈ ವರ್ಷ ಪತಿಸುಖಕ್ಕೆ ಯಾವ ವಿವಂಚನೆಯೂ ಇಲ್ಲ. ಆದರೆ ಎಪ್ರಿಲ ೨೨ ರಿಂದ ಮೇ ೩೦ ರವರೆಗೆ ಕಾಯಿಲೆ ಮತ್ತು ಜುಲೈ ೩೦ ರಿಂದ ಸಪ್ಟೆಂಬರ ೧೩ ರ ವರೆಗೆ ಅಗಲಿಕೆಯ ಯೋಗ ಸ್ವಲ್ಪ ಕಂಡು ಬರುತ್ತಿದೆ. ಮಾರ್ಚ ೧೨ ರೊಳಗಾಗಿ ಹಡೆಯುವವರಿಗೆ ಹೆರಿಗೆಯ ತೊಂದರೆ ಎಳ್ಳಷ್ಟೂ ಆಗಲಾರದು; ನಂತರ ನಿಮಗೆ ಸ್ವಲ್ಪ ಮತ್ತು ನಿಮ್ಮ ಕೂಸಿಗೆ ವಿಶೇಷ ತ್ರಾಸವಾಗುವದು. ಈ ರಾಶಿಯ ಮಹಿಳೆಯರಿಗೆ ಈ ವರ್ಷ ಪುತ್ರ ಪ್ರಾಪ್ತಿಗಿಂತ ಕನ್ಯಾಪ್ರಾಪ್ತಿಯ ಯೋಗವೇ ಜಾಸ್ತಿ. ಈ ವರ್ಷ ಅತ್ತೆಯ ಕಾಟ ಸ್ವಲ್ಪಮಟ್ಟಿಗೆ ಇದ್ದರೂ ಮನೆಯಲ್ಲಿ ಉಳಿದವರು ಪ್ರೀತಿಯಿಂದ ನಡೆದುಕೊಳ್ಳುವರು.

ವಿದ್ಯಾರ್ಥಿಗಳಿಗೆ ಮಾರ್ಚ ೧೩ ರ ವರೆಗೆ ವಿಶೇಷ ಯಶಕಾರಿಯಾಗಿದೆ, ಅನಂತರ ಅಭ್ಯಾಸದಲ್ಲಿ ಅನಿವಾರ್ಯವಾಗಿ ಇಲ್ಲವೆ ಬೇಕಾಗಿಯೆ ಮನಸ್ಸಿಲ್ಲದಂತಾಗಿ ಈ ಅಲಕ್ಷದ ಫಲ ಕಂಡು ಬರದಿರದು! ೩೧-೧೦-೪೯ ರ ವರೆಗೆ, ನವೆಂಬರ ೨೮ ರಿಂದ ಡಿಸೆಂಬರ ೫ ಮತ್ತು ದಿಸೆಂಬರ ೨೬ ರಿಂದ ಜಾನೇವರಿ ೧೪, ಫೆಬ್ರುವರಿ ೯ ರಿಂದ ಮಾರ್ಚ ೨, ಮತ್ತು ಜೂನ ೬ ರಿಂದ ಜುಲೈ ೩೦ ರ ವರೆಗೆ ಹಾಗೂ ಅಕ್ಟೋಬರ ೩ ರಿಂದ ೨೪ ರ ಅವಧಿಯಲ್ಲಿ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ತೇರ್ಗಡೆ ಹೊಂದಿ ಪಾಲಕರಿಗೆ ಸಂತೋಷವನ್ನುಂಟುಮಾಡುವರು.

## ಮಿಥುನ

ಈಸಬೇಕು ಇದ್ದು ಜಯಿಸಬೇಕು ಈ ಭವ ಸಾಗರವ ಅಲ್ಲವೆ! ಅಂದ ಮೇಲೆ ಚಿಂತೆಯೇಕೆ! ಈ ವರ್ಷ ಮಾರ್ಚ ೧೨ರನಂತರ ಲಭಿಸುವ ಆರೋಗ್ಯ ಭಾಗ್ಯ ಆ ಮೊದಲು ಇಲ್ಲ. ಡಿಸೆಂಬರ ೧೦ ನೇ ತಾ ನ ವರೆಗೆ ಎಂಥ ನಿರೋಗಿಗಳಿಗೂ ಪ್ರಕೃತಿಯ ತೊಂದರೆ ವಾರಕ್ಕೊಮ್ಮೆಯಾದರೂ ತಪ್ಪಿದ್ದಲ್ಲ.

ಮಾರ್ಚ ೧೨ ರಿಂದ ಆಗಸ್ಟ ೩೦ ರ ವರೆಗಿನ ಕಾಲದಲ್ಲಿ ಸೋದರ. ಸೋದರಿಯರಲ್ಲಿ ಒಬ್ಬರಿಗೆ ವಿಶೇಷ ಕಾಯಿಲೆ, ಮಾರ್ಚ ೨೨ ರ ವರೆಗೆ ಹೆಂಡತಿಯ ಪ್ರಕೃತಿಗೂ ಕಿರುಕುಳ ತೊಂದರೆ ತಪ್ಪಿದ್ದಲ್ಲ. ನಿಮ್ಮ ತಂದೆಯವರಿಗೂ ಆರೋಗ್ಯ ಸೌಖ್ಯವಿಲ್ಲ. ಪ್ರಾಪಂಚಿಕ ಸುಖದಲ್ಲಿ ಉಲ್ಲಾಸವಿಲ್ಲ. ಮನೆತನದಲ್ಲಿ ಪ್ರತಿಯೊಬ್ಬರೂ ತಮ್ಮ ಬೇಳೆ ಬೇಯಿಸಿಕೊಳ್ಳುವ ಪ್ರಯತ್ನದಲ್ಲಿಯೆ ಇರುವರು. ನಿಮ್ಮ ಹೆಂಡತಿ ಮಕ್ಕಳು ನಿಮ್ಮ ಮಾತನ್ನು ತಲೆಬಾಗಿ ಕೇಳಿಕೊಂಡರೂ ತಮ್ಮ ಮನಸ್ಸಿಗೇ ಬಂದಂತೇ ನಡೆದುಕೊಳ್ಳುವರು. ಮಾರ್ಚ ೨೨ ರ ವರೆಗೆ ನಿಮ್ಮ ಹೆಂಡತಿಯು ಸಿಟ್ಟಿಗೇಳಲು ತೀರ ಕ್ಷುಲ್ಲಕ ಕಾರಣಗಳೇ ಸಾಕು. ದೀಪಾವಳಿಯಲ್ಲಿಯೂ ಅವಳು ಗಂಟು ಮೋರೆಯಿಂದಲೇ ಇರಬಹುದು. ಸಂತತಿಯ ಶಿಕ್ಷಣ ಚನ್ನಾಗಿ ಸಾಗಿದರೂ ಅವನ ಚೈನಿಗಾಗಿ ವಿಪರೀತ ವೆಚ್ಚ ಮಾಡಬೇಕಾಗಿ ಅಸಹ್ಯವೆನಿಸುವದು. ನವೆಂಬರ ೨೯ ರಿಂದ ಮಾರ್ಚ ೧೦, ಜೂನ ೨೦ ರಿಂದ ಜುಲೈ ೧೫ ರ ವರೆಗಿನ ಕಾಲದಲ್ಲಿ ಮನೆಯಲ್ಲಿಯ ಮಾತಿನ ತಿಕ್ಕಾಟದಿಂದ ಮನೆಬಿಟ್ಟು ಅಡವೀ ಸೇರಬೇಕು ಎಂದೆನ್ನಿಸಬಹುದು. ಆದರೂ ಮನೆಯಲ್ಲಿಯ ಸೇವಕರು ಪ್ರಾಮಾಣಿಕರಾಗಿ ಉಳಿದು ನಿಮಗೆ ಧೈರ್ಯ ಕೊಡುವರು. ಅಷ್ಟೇ ಸಂತೋಷ. ನಿಮ್ಮದೇ ಆಗಲಿ ಹೆರವರದೇ ಆಗಲಿ ವಾಹನದಲ್ಲಿ ಸಂಚರಿಸುವ ಯೋಗ ಹೆಚ್ಚಾಗಿ ಬರುತ್ತನೆ. ಯೋಗ್ಯತೆಯಂತೆ ಒಂದಾದರೂ ವಾಹನವನ್ನು ಕೊಂಡುಕೊಳ್ಳಬಹುದು; ೧೨ ನೇ ತಾ॥ ನಂತರ ವಿವಾಹೇಚ್ಛುಗಳ ಲಗ್ನವು ಅನಾಯಾಸವಾಗಿ ಆದೀತು. ಪರಸ್ತ್ರೀ ಕಾಮನೆಯ ನಿಂದೆ ಸುಳ್ಳುಸುಳ್ಳೇ ನಿಮ್ಮ ಸುತ್ತ ಸಪ್ಟೆಂಬರ ೨೮ ರಿಂದ ಅಕ್ಟೋಬರ

೨೪ ರ ನಡುವಿನ ಅವಧಿಯಲ್ಲಿ ಬರುವ ಹೆದರಿಕೆ ಈ ವರ್ಷ ನಿಮಗೆ ಅತಿಥಿ ಅಭ್ಯಾಗತರ, ಅವರಲ್ಲಿಯೂ ಲಬ್ಧಪ್ರತಿಷ್ಠರ ಭಾರವನ್ನು ಹೊರುವ ಪ್ರಸಂಗವಿದೆ.

ಮನೆಯಲ್ಲಿ ಇಷ್ಟೊಂದು ಕೋಲಾಹಲ ವಿದ್ದರೂ ವ್ಯಾಪಾರ ಉದ್ದಿಮೆಯಲ್ಲಿ ವಿಶೇಷ ಸುಖವಿದೆ. ಸ್ವತಂತ್ರ ಉದ್ಯೋಗದಲ್ಲಿ ತೊಡಗಿದ್ದವರಿಗೆ ಸುಖದಿಂದ ಒಂದು ತುತ್ತು ಅನ್ನವನ್ನು ತಿನ್ನುವಷ್ಟು ಅವಕಾಶ ಕೂಡ ವ್ಯವಹಾರದ ಗಡಿಬಿಡಿಯಲ್ಲಿ ದೊರೆಯುವದಿಲ್ಲ. ೧೨ ನೇ ಮಾರ್ಚದ ನಂತರ ಅನೇಕ ಸಾಹಸದ ಕೃತ್ಯಗಳನ್ನು ಲೀಲಾಜಾಲವಾಗಿ ಮಾಡಿ ತೋರಿಸುವಿರಿ. ಆಗ ನಿಮಗೆ ಒಂಬತ್ತನೇ ಗುರು ಮಹಾರಾಜನ ಕೃಪೆ ಆಗುವದರಿಂದ ಶತ್ರುಗಳನ್ನು ಮಿತ್ರರನ್ನಾಗಿಸಿಕೊಂಡು ಅವರಿಂದ ನಿಮ್ಮ ಅಪೇಕ್ಷೆಯಂತೆ ಕೆಲಸ ಮಾಡಿಸಿಕೊಳ್ಳುವಿರಿ. ಎಂಥ ಕಷ್ಟದ ಮತ್ತು ಹೊಣೆಗಾರಿಕೆಯ ಕೆಲಸವನ್ನು ಕೈಕೊಂಡರೂ ನಿಶ್ಚಯಿಸಿದಂತೆ ಅದನ್ನು ಪೂರಯಿಸುವ ಅಪಾರ ಉತ್ಸಾಹ ಕಂಡುಬರುವದು.

ಮಾರ್ಚ ೧೨ ರಿಂದ ಅಗಸ್ಟ ೩೦ ರ ವರೆಗೆ ನಿಮಗೆ ನಿಮ್ಮ ಯೋಗ್ಯತೆ ಮೀರಿ ಧನಲಾಭವಾಗುವದು. ಅದರಲ್ಲಿಯೂ ಡಿಸೆಂಬರ ೧೦ ನೇ ತಾ। ನ ಪರ್ಯಂತ, ಮಾರ್ಚ ೨೨ ರಿಂದ ಮೇ ೩೦ ಮತ್ತು ಜುಲೈ ೩೦ ರಿಂದ ಅಕ್ಟೋಬರ ೨೫ ನೇ ತಾ॥ ನ ವರೆಗೆ ವಿಶೇಷ ದ್ರವ್ಯಲಾಭ.

ನೌಕರದಾರರಿಗೆ ಲಾಭದ ದೃಷ್ಟಿಯಿಂದ ಮಾರ್ಚ ೧೨ ರ ವರೆಗೆ ಚನ್ನಾಗಿದ್ದರೆ ಆ ನಂತರ ಬಡತಿ ಸಿಗಬಹುದು. ಒಂದು ಖಾತೆಯಿಂದ ಇನ್ನೊಂದು ಖಾತೆಗೆ ವರ್ಗವಾಗುವ ನೌಕರಿಯಿದ್ದರೆ ಹನ್ನೆರಡು ತಿಂಗಳಲ್ಲಿ ೧೩ ಸಲವಾದರೂ ಬದಲಿ ಆದೀತು. ವರಿಷ್ಠರ ಕೃಪೆ ಚೆನ್ನಾಗಿ ಉಳಿದು ಶಿಫಾರಸು ಪಡೆದುಕೊಳ್ಳುವ ಒಂದು ಪ್ರಸಂಗವನ್ನೂ ಕಳೆದುಕೊಳ್ಳಲಾರಿರಿ. ನಿಮ್ಮ ಸರಸ ವರ್ತನೆಯಿಂದ ಕೈಕೆಳಗಿನವರ ಪ್ರೀತಿಯನ್ನೂ ಸಂಪಾದಿಸುವಿರಿ. ಸಮಾಜದಲ್ಲಿ ಗೌರವ ದೊರೆಯುವಂತೆ ನಿಮ್ಮ ಅಧಿಕಾರದ ಸದುಪಯೋಗವಾದೀತು. ಒಂದೆರಡು ಮುಖ್ಯ ಯಾತ್ರಾಸ್ಥಳಗಳ ಸಂದರ್ಶನವೂ ಆಕಸ್ಮಿಕವಾಗಿ ಆದೀತು. ವೇದಾಂತದಲ್ಲಿ ಆಸಕ್ತಿ. ಮಿತ್ರರು ಮೂಗು ಮುರಿಯುವರು. ಚಿಕ್ಕ ದೊಡ್ಡ ಸ್ಥಾವರ ಅಸ್ತಿ ಒತ್ತಿ ಹಿಡಿಯುವ ಇಲ್ಲವೆ ಕೊಂಡುಕೊಳ್ಳುವ ಯೋಗವೂ ಇದೆ. ಜಾನೇವರಿ ೨೧ ರಿಂದ ಮಾರ್ಚ ೨ ಮತ್ತು ಜೂನ ೬ ರಿಂದ ೨೬ ರ ವರೆಗಿನ ಅವಧಿಯಲ್ಲಿ ಈ ಕಾರ್ಯವಾದೀತು.

ಸ್ತ್ರೀಯರಿಗೆ, ಮಾರ್ಚ ೧೨ ರ ನಂತರ ಪತಿಸುಖ, ಮಕ್ಕಳ ಸುಖ ಸಾಧಾರಣ ದೊರೆತರೂ ಮನೆಯಲ್ಲಿಯ ಇತರ ಹೆಣ್ಣುಮಕ್ಕಳು ಪ್ರತ್ಯಕ್ಷ ಇಲ್ಲವೇ ಅಪ್ರತ್ಯಕ್ಷವಾಗಿ ನಿಮ್ಮನ್ನು ದ್ವೇಷಿಸುವರು. ಪತಿಗೆ ಬೇಕಾದಷ್ಟು ಹಣ ದೊರೆತರೂ ನಿಮ್ಮ ಬಯಕೆ ಕೈಗೂಡದಂತೆ ಆ ಹಣ ವೆಚ್ಚವಾಗುವ ಪರಿಸ್ಥಿತಿ ಉಂಟಾಗುವದು. ಮಾರ್ಚ ೨೨ ರಿಂದ ಮೇ ೩೦ ರ ಅವಧಿಯಲ್ಲಿ ಹಡೆಯುವ ಹೆಂಗಸರಿಗೆ ಸ್ವಲ್ಪ ಹೆರಿಗೆ ತ್ರಾಸ. ಮಾರ್ಚ ೧೨ ಕ್ಕೆ ಮೊದಲು ಕನ್ಯಾಪ್ರಾಪ್ತಿ, ನಂತರ ಪುತ್ರಪ್ರಾಪ್ತಿಯ ಯೋಗ ಹೆಚ್ಚಾಗಿದೆ.

ವಿದ್ಯಾರ್ಥಿಗಳಿಗೆ ಸ್ವಲ್ಪ ಕಠಿಣ ಕಾಲವಿದೆ. ಮಾರ್ಚ ೧೨ ರೊಳಗಾಗಿ ಪರೀಕ್ಷೆ ಆದರೆ ಮೋರೆ ಒಣಗಿಸಿಕೊಂಡು ಬರಬೇಕಾದೀತು. ಆ ನಂತರ ಪರೀಕ್ಷೆ ಆದರೆ ಸ್ವಲ್ಪ ಆಶೆಯಿದೆ. ಮಾರ್ಚ ೩೧ ರಿಂದ ಎಪ್ರಿಲ ೨೯; ಮೇ ೨೫ ರಿಂದ ಜೂನ ೨೦; ಜುಲೈ ೧೫ ರಿಂದ ಅಗಸ್ಟ ೧೦; ಸಪ್ಟೆಂಬರ ೪ ರಿಂದ ೨೮; ಅಕ್ಟೋಬರ ೨೩ ರ ನಂತರ ಪರೀಕ್ಷೆ ಆದಲ್ಲಿ ಖಂಡಿತ ತೇರ್ಗಡೆ ಹೊಂದುವಿರಿ. ಶಂಕಿಸಬೇಕಾಗಿಲ್ಲ. ವಕೀಲಿ, ಮೆಡಿಕಲ ವಿದ್ಯಾರ್ಥಿಗಳಿಗೆ ಈ ವರ್ಷ ಜಯಪ್ರದವಾಗಿದೆ.

## ಕರ್ಕ

ಕಂಡು ಕಂಡು ನೀ ಎನ್ನ ಕೈ ಬಿಡುವರೆ ಮಡದಿ ಎಂದು ಹಂಬಲಿಸುವ ಸ್ಥಿತಿ ನಿಮ್ಮದಿದೆ ಈ ಸಲ ನಿಮ್ಮ ಮಕ್ಕಳು ಕೂಡ ತಮ್ಮ ತಾಯಿಯ ಬೆನ್ನುಕಟ್ಟಿ ನಿಮ್ಮ ಮಾತು ಕೇಳದಾಗುವರು. ನಿಮಗಿರುವ ಶನಿಕಾಟದ ಮಹಿಮೆ. ಎರಡನೇ ಶನಿಯ ಪ್ರತಾಪದಿಂದ ಧನ, ಕುಟುಂಬ, ನೇತ್ರ, ವಾಣಿ ಈ ವಿಷಯಗಳಲ್ಲಿ ನಿಮಗೆ ಸುಖವಿಲ್ಲ. ಎಷ್ಟೇ ವೆಚ್ಚ ಮಾಡಿದರೂ ಮತ್ತಿಷ್ಟು ವೆಚ್ಚ ಮಾಡುವ ಪ್ರಸಂಗ ಬರಬಹುದು ಡಿಸೆಂಬರ ೧೦ ರ ವರೆಗೆ ಮತ್ತು ನಂತರ ಮಾರ್ಚ ೨೨ ರಿಂದ ಮೇ ೩೦ ರ ವರೆಗಿನ ಅವಧಿಯಲ್ಲಿ ಮನೆಯಲ್ಲಿ ಹೆಂಡಿರು-ಮಕ್ಕಳ ತ್ರಾಸು ವಿಪರೀತವಾಗುವದು. ಸವಿಮಾತಿಗಿಂತ ಕಟೂಕ್ತಿಗಳಿಂದಲೇ ಕಾರ್ಯ ಸಾಧಿಸುವ ವಿಚಿತ್ರ ಅನುಭವ ನಿಮಗೆ ಬಂದೀತು! ಕಣ್ಣಲ್ಲಿ ಕಸರು ಹೋದ ನೆವದಿಂದ ಅದು ಊಬಿಕೊಂಡು ತೊಂದರೆ ಕೊಡಬಹುದು. ಇಲ್ಲವೇ ಬೇರೆ ಕಾರಣಗಳಿಂದ ಕಣ್ಣು ಕೆಡಬಹುದು. ಮೂಲವ್ಯಾಧಿ ಇಲ್ಲವೆ ಅಂಡವೃದ್ಧಿಯ ಹೆದರಿಕೆಯಿದೆ. ಎರಡನೆಯವರಿಗೆ ನಿಮ್ಮ ದೃಷ್ಟಿ ಆಗುವದು ಎಂಬ ತಪ್ಪು ಕಲ್ಪನೆ ಜನರಲ್ಲಿ ಹರಡುವದು. ಪ್ರಕೃತಿ ಹಾಗೂ ಪ್ರಾಪಂಚಿಕ ಸುಖದ ದೃಷ್ಟಿಯಿಂದ ನಿಮಗೆ ಮಾರ್ಚ ೧೨ ರಿಂದ ಅಗಸ್ಟ ೩೦ ರ ವರೆಗೆ ತೊಂದರೆಯಿದ್ದರೂ ನಿಮ್ಮ ಹೆಂಡಿರು ಮಕ್ಕಳು ಇತರ ಜನರು ಸುಖದಿಂದಿರುವರು. ಮಾರ್ಚ ೨೨ ರಿಂದ ಎಪ್ರಿಲ ೨೨ ರ ನಡುವೆ ನಿಮ್ಮ ಹೆಂಡತಿಗೆ ಅಜೀರ್ಣದಿಂದ ಮಕ್ಕಳಿಗೆ ಅಪಘಾತದಿಂದ ಕ್ಲೇಶ. ತಂದೆಗಿಂತ ತಾಯಿಯಿಂದ ನಿಮಗೆ ಸುಖ ದೊರೆತೀತು. ಅಗಸ್ಟ ೩೦ ಕ್ಕೆ ಅಂದರೆ ಎರಡನೇ ಶನಿ ತೊಲಗಿದ ಕೂಡಲೆ ನಿಮ್ಮ ಹೆಂಡತಿಯಲ್ಲಿ ಪತಿಭಕ್ತಿ, ಮಕ್ಕಳಲ್ಲಿ ಪಿತೃಭಕ್ತಿ, ತಾಯ್ತಂದೆಗಳಲ್ಲಿ ಅಪತ್ಯಪ್ರೇಮ ಒಮ್ಮೆಲೇ ಕಂಡು ಬಂದು ಸುಖದ ಗಾಳಿ ಬೀಸುವದು.

ಅಗಸ್ಟ ೩೦ ರ ನಂತರ ಭ್ರಾತೃವಿರೋಧ, ಪ್ರಕೃತಿ ಕ್ಲೇಶ ಕಂಡುಬಂದರೂ ಸಾಹಸದ ಕೃತ್ಯಕ್ಕೆ ಮನಸ್ಸೆಳೆಯುವದು. ಈ ಮೊದಲು ನಿಂದಿಸಿದವರೇ ನಿಮ್ಮನ್ನು ಹೊಗಳುವರು. ಮಾರ್ಚ ೧೨ ರ ನಂತರ ನಿಮ್ಮ ಪ್ರಯತ್ನದಿಂದ ಆಪ್ತೇಷ್ಟರಲ್ಲಿ ಶುಭಕಾರ್ಯಗಳು ಹೆಚ್ಚಾಗಿ ನಡೆದರೂ ಆ ಎಲ್ಲ ಕಾರ್ಯಗಳಲ್ಲಿ ಭಾಗ ವಹಿಸಲು ನಿಮಗೆ ಸಾಧ್ಯವಾಗುವದಿಲ್ಲ. ಕೇವಲ ಶುಭಸಂದೇಶಗಳನ್ನು ಕಳಿಸುವಿರಿ. ಸ್ಥಾವರ ಆಸ್ತಿ ಹೆಚ್ಚಿಸಬೇಕೆಂದು ಬಹಳ ಪ್ರಯತ್ನಿಸಿದರೂ ಅದರ ಫಲ ಬರುವ ವರ್ಷದಲ್ಲಿ ಕಂಡು ಬರುವದು. ಆಪ್ತೇಷ್ಟರಿಗಿಂತ ನೆರೆ ಹೊರೆಯವರೇ ನಿಮ್ಮನ್ನು ಆತ್ಮೀಯತೆಯಿಂದ ಕಾಣುವರು.

ಈ ವರ್ಷ ಮಾರ್ಚ ೧೨ ರ ವರೆಗೆ ನಂತರ ಅಗಸ್ಟ ೩೦ ನೇ ತಾ। ನ ನಂತರ ವ್ಯಾಪಾರೋದ್ಯೋಗದಲ್ಲಿ ಉತ್ಸಾಹ ಕಂಡುಬಂದೀತು. ಮಿತ್ರರಿಂದ ಕಲ್ಪನಾತೀತ ಸಹಾಯ ಅವರಲ್ಲಿ ಕೆಲವರ ಪರ್ವತಪ್ರಾಯವಾದ ಹಿರಿಮೆಯನ್ನು ಕಂಡು ನಿಮ್ಮ ಕ್ಷುದ್ರ ಮನಸ್ಸಿನ ಅರಿವು ನಿಮಗಾದೀತು. ಎರಡನೇ ಶನಿ ಅಗಸ್ಟ ೩೦ ಕ್ಕೆ ತೊಲಗಿದ ಕೂಡಲೆ ಶತ್ರುಗಳು ನಷ್ಟ

ವಾಗಿ ನಿಮ್ಮ ಮನಸಿದಂತೆ ಕಾರ್ಯ ಕೈಗೂಡು ವವು. ವಿಶೇಷ ಶ್ರಮ ವಹಿಸಬೇಕಾಗಿಲ್ಲ. ಈ ವರ್ಷ ಆದಾಯ ವೆಚ್ಚ ಸುಮಾರು ಅಷ್ಟಷ್ಟೆ ಇದೆ. ಅಗಸ್ಟ ೩೦ ರ ಸುಮಾರಕ್ಕೆ ಆಕಸ್ಮಿಕ ಲಾಭದ ಯೋಗವಿದೆ. ಅಕ್ಟೋಬರ ೨೯ ರ ವರೆಗೆ, ನವೆಂಬರ ೨೯ ರಿಂದ ಮಾರ್ಚ ೩೦ ರ ವರೆಗೆ, ಎಪ್ರಿಲ ೩೦ ರಿಂದ ಮೇ ೨೫ ರ ವರೆಗೆ, ಜೂನ ೨೧ ರಿಂದ ಜುಲೈ ೧೫ ರ ವರೆಗೆ, ಅಗಸ್ಟ ೧೦ ರಿಂದ ಸಪ್ಟೆಂಬರ ೩ ರ ವರೆಗೆ ಮತ್ತು ಸಪ್ಟೆಂಬರ ೨೮ ರಿಂದ ಅಕ್ಟೋಬರ ೨೨ ರ ವರೆಗಿನ ಕಾಲವು ಉದ್ದಿಮೆದಾರರಿಗೆ ಕೇವಲ ಧನ ಲಾಭದ ದೃಷ್ಟಿಯಿಂದ ಹೆಚ್ಚು ಉತ್ತಮವಿದೆ. ನೌಕರದಾರರೂ ಅಗಸ್ಟ ೩೦ ರ ವರೆಗೆ ತಮ್ಮ ಸಂಬಳ ಪ್ರತಿ ತಿಂಗಳ ಒಂದನೇ ತಾ|| ಗೇ ಕೈಗೆ ಬಂದರೆ ಸಾಕೆಂದು ತಾಳ್ಮೆಯಿಂದಿರ ಬೇಕು. ಅನಂತರ ಯಾವ ಗೊಣಗಾಟಕ್ಕೂ ಆಸ್ಪದವಿಲ್ಲದಂತೆ ಉತ್ಕರ್ಷವಾದೀತು. ವರಿಷ್ಠರ ಸಹಾನುಭೂತಿಯಿದ್ದರೂ ಕೈಕೆಳಗಿನವರು ವೃಥಾ ಪೀಡಿಸುವರು. ಲಂಚದ ಆರೋಪವನ್ನು ಹೊರಿಸಬಹುದು. ನಿಮ್ಮ ಸೋದರ-ಸೋದರಿಯರಿಗೆ ಮಕ್ಕಳಿಗೆ ಈ ವರ್ಷ ಸುಖಕರವಾಗಿದೆ. ಹೆಂಡತಿಯ ಅಣ್ಣ ತಮ್ಮಂದಿರಲ್ಲಿ ಅಲ್ಪ ಕಾರಣಕ್ಕಾಗಿ ವೈಮನಸ್ಸು. ಅಕ್ಕ ತಂಗಿಯರ ಇಲ್ಲವೆ ಮಕ್ಕಳ ಮದುವೆ ಮಾಡಲಿಚ್ಛಿಸಿದಲ್ಲಿ ಮಾರ್ಚ ೧೨ ನೇ ತಾ|| ನೊಳಗಾಗಿ ನಿರಾಯಾಸದಿಂದ ಆದಂತೆ ಮುಂದೆ ಆಗಲಾರದು. ನಿಮಗೆ ಪೂಜ್ಯರಾದ ವ್ಯಕ್ತಿಗಳ ಸಹವಾಸದಿಂದ ಮನಸ್ಸಿಗೆ ವಿಶ್ರಾಂತಿ ದೊರೆತರೂ ಮತ್ತೆ ಒಬ್ಬಿಬ್ಬರ ವಿಯೋಗ ಇಲ್ಲವೆ ವಿರಹವಾ(ದೀ)ತು. ಮಾರ್ಚ ೧೨ ರ ನಂತರ ಅನೇಕ ಶುಭ ಸ್ವಪ್ನಗಳು ಬಿದ್ದು ಅವುಗಳ ಫಲವು ೨-೩ ವರ್ಷಗಳ ನಂತರ ಕೂಡ ಕಂಡು ಬಂದೀತು!

ಈ ರಾಶಿಯ ಕುಮಾರಿಯರ ಲಗ್ನವು ಮಾರ್ಚ ೧೨ ನೇ ತಾ. ನೊಳಗಾಗಿ ಆಗಬಹುದು ಆದರೆ ಅನೇಕರಿಗೆ ಇಮನೇವರ ಗಂಟು ಬೀಳಬಹುದೆಂದು ತೋರುತ್ತದೆ. ವಿವಾಹಿತರಿಗೆ ಅಪೇಕ್ಷಿಸಿದಂತೆ ಪತಿಸುಖವು ದೊರೆಯಬೇಕಾದರೆ ಅಗಸ್ಟ ೩೦ ರ ನಂತರವೇ! ಅಲ್ಲಿಯ ವರೆಗೆ ಕೆಲವರಿಗೆ ವಿರಹ, ಕೆಲವರಿಗೆ ಅಪ್ರೀತಿಯ ಅನುಭವ ಬರಬಹುದು. ಅತ್ತೆಮನೆ ಸೌಖ್ಯಕ್ಕಿಂತ ತವರು ಮನೆಯ ಮತ್ತು ಜೀವದ ಗೆಳತಿಯ ಸೌಖ್ಯ ಹೆಚ್ಚಿಗೆ ದೊರೆತೀತು. ಗರ್ಭಿಣಿಯರಿಗೆ ಬಯಕೆ ತ್ರಾಸ ಹೆಚ್ಚಾಗಬಹುದು. ಮಾರ್ಚ ೧೨ ರೊಳಗಾಗಿ ಹೆರಿಗೆ ಆದಲ್ಲಿ ಯಾವ ತ್ರಾಸವಾಗಲಿಕ್ಕಿಲ್ಲ, ಪುತ್ರ ಪ್ರಾಪ್ತಿಯಾದೀತು ಅನಂತರ ಕನ್ಯಾಪ್ರಾಪ್ತಿ ಯೋಗವಿದೆ ಅಲ್ಲದೆ ಬಾಣಂತಿತನವೂ ಚನ್ನಾಗಿ ಆಗಲಾರದು. ಅಗಸ್ಟ ೩೦ ರ ನಂತರ ಹಡೆಯುವವರಿಗೆ ಕದಾಚಿತ್ ಅವಳಿ ಜವಳಿ ಮಕ್ಕಳು ಹುಟ್ಟಬಹುದು.

ವಿದ್ಯಾರ್ಥಿಗಳಿಗೆ ಮಾರ್ಚ ೧೨ ರ ವರೆಗೆ ತೇರ್ಗಡೆ ಹೊಂದುವ ಖಾತ್ರಿ ಇದ್ದಂತೆ ಮುಂದೆ ಇರಲಾರದು. ವಿದ್ಯಾರ್ಜನೆಗಿಂತ ಕಲೋಪಾಸನೆ ಮಾಡುವವರಿಗೆ ಈ ವರ್ಷವು ಹೆಚ್ಚು ಯಶಪ್ರದವಾಗಿದೆ. ಡಿಸೆಂಬರ ೧೧ ರಿಂದ ಮಾರ್ಚ ೨೨, ಮೇ ೩೦ ರಿಂದ ಜುಲೈ ೩೦, ಸಪ್ಟೆಂಬರ ೧೪ ರಿಂದ ಅಕ್ಟೋಬರ ೨೫ ರ ಕಾಲಾವಧಿಯಲ್ಲಿ ಪರೀಕ್ಷೆಗೆ ಕಟ್ಟುವವರು ಹೇಗಾದರೂ ಪಾಸಾಗಿ ಪೇಡೆ ಕೊಡುವರೆಂಬಲ್ಲಿ ಸಂದೇಹವಿಲ್ಲ!

## ಸಿಂಹ

ಸುಖದುಃಖಗಳೆರಡಿವು ಸಮವು, ಎಂಬುದನೆ ತೋರುತಿದೆ ಜಗವು ಎಂಬ ಮಾತಿನ ಅನುಭವ ನಿಮಗೆ ಈ ವರ್ಷ ಬಂದೀತು. ಸಾಡೇಸಾತಿ (ಶನಿಕಾಟ) ದ ಮಧ್ಯಕಾಲದಲ್ಲಿರುವ ನೀವು ಪ್ರಕೃತಿಯನ್ನು ಹೆಚ್ಚಾಗಿ ಜಪ್ಪಿಸಬೇಕು. ಡಿಸೆಂಬರ ೧೦ ನೇ ತಾ। ನ ವರೆಗೆ ಮತ್ತು ಮಾರ್ಚ ೨೨ ರಿಂದ ಎಪ್ರಿಲ ೨೨ ರ ವರೆಗೆ ವಿಶೇಷ ಜಾಗರೂಕರಾಗಿರಬೇಕು. ಅನಾರೋಗ್ಯದಂತೆಯೆ ಅಪಘಾತದ ಹೆದರಿಕೆಯು ನಿಮಗಿದೆ. ಆದರೆ ಗಂಡಾಂತರವಿಲ್ಲ. ಕ್ಲೇಶ ಪರಿಹಾರಾರ್ಥ ೧೧೦೦೦ ಮಹಾಮೃತ್ಯುಂಜಯ ಜಪ ಮಾಡಬೇಕು. ಅಗಸ್ಟ ೩೦ ರ ನಂತರ ಮನೆಯಲ್ಲಿ ಅಲ್ಪಸ್ವಲ್ಪ ಕಲಹ ಕಂಡು ಬಂದರೂ ಪ್ರಾಪಂಚಿಕ ಸುಖಕ್ಕೆ ಈ ವರ್ಷವೇನೂ ಕೆಟ್ಟದ್ದಲ್ಲ! ಪತಿಪತ್ನಿಯರಲ್ಲಿ ಉತ್ಕಟ ಪ್ರೇಮ. ಮಾರ್ಚ ೧೨ ರ ನಂತರ ಮಕ್ಕಳು ತೀರ ಅಜ್ಞಾಧಾರಕರಾಗುವರು. ಹೆಂಡತಿಗೆ ಮೇ ೩೦ ರಿಂದ ಜುಲೈ ೩೦ ಮತ್ತು ಸಂತತಿಗೆ ಜಾನೇವರಿ ೧೪ ರಿಂದ ಫೆಬ್ರುವರಿ ೧೨ ರ ಮಧ್ಯದ ಕಾಲದಲ್ಲಿ ಸ್ವಲ್ಪ ಕಾಯಿಲೆಯಾಗುವ ಸಂಭವ.

ವಿವಾಹೇಚ್ಛುಗಳ ಮದುವೆಯು ಮಾರ್ಚ ೧೨ ರ ನಂತರ ಆಕಸ್ಮಿಕವಾಗಿ ಕೂಡಿಬಂದರೂ ಕಾರ್ಯಾರಂಭಕ್ಕೆ ಅನಪೇಕ್ಷಿತ ಅಡಚಣಿ ಉಂಟಾಗಿ ಸ್ವಲ್ಪ ವಿರಸವಾಗುವ ಪ್ರಸಂಗ! ಮಾರ್ಚ ೧೨ ರ ನಂತರ ದಾಯಾದ್ಯರ, ಸಂತತಿಯ ಮತ್ತು ಮಿತ್ರರ ಉತ್ಕರ್ಷದ ೨-೩ ಮುಖ್ಯ ಘಟನೆಗಳಾದರೂ ಸಂಭವಿಸುವವು. ಆಪ್ತೇಷ್ಟರಿಗಿಂತ ಮಿತ್ರರಿಂದಲೇ ಹೆಚ್ಚು ಸುಖ. ಸೋದರಮಾವನ ಮನೆಯ ಹೆಣ್ಣುಮಗಳೊಬ್ಬಳ ಬಗ್ಗೆ ನಿಮ್ಮಲ್ಲಿ ಪಾಪಬುದ್ಧಿಯು ಬೆಳೆದುಬಂದು ಅದು ಅವಳಿಗೆ ತಿಳಿದ ಕೂಡಲೆ ಆಕೆಯ ಕಡೆಯಿಂದ ಕಿವಿ ಹಿಂಡಿಸಿಕೊಳ್ಳುವ ಹೆದರಿಕೆಯು ನವೆಂಬರ ೨೯ ರಿಂದ ಮಾರ್ಚ ೨೫ ರ ನಡುವಿನ ಅವಧಿಯಲ್ಲಿ ಇದೆ. ಧನ ಸ್ಥಾನದಲ್ಲಿ ಕೇತು ಇರುವದರಿಂದ ಅಮೂಲ್ಯ ವಸ್ತುವೊಂದು ಬಿದ್ದು ಕಳೆದು ಹೋಗುವ ಇಲ್ಲವೆ ಅಪಹರಿಸಲ್ಪಡುವ ಸಂಭವವು ಸಪ್ಟೆಂಬರ ೧೫ ರಿಂದ ಅಕ್ಟೋಬರ ೧೫ ರ ವರೆಗೆ ಇದೆ. ಮಾರ್ಚ ೧೨ ರ ವರೆಗೆ ಅಶುಭ ಸ್ವಪ್ನಗಳು ಹೆಚ್ಚಾಗಿ ಕಂಡಾವು. ವಾಹನ ಸುಖ ಚನ್ನಾಗಿದೆ. ಅತಿ ಪ್ರಿಯ ವ್ಯಕ್ತಿಗಳ ಭೆಟ್ಟಿ ಸಹವಾಸದ ಯೋಗ ಆಕಸ್ಮಿಕವಾಗಿ ಬರುವದು.

ಉದ್ಯೋಗ ಧಂದೆಗಳಿಗೆ ಈ ವರ್ಷವು ಮಾರ್ಚ ೧೨ ರ ವರೆಗೆ ಕೆಟ್ಟದಿದ್ದಷ್ಟೇ ತದನಂತರ ಅತ್ಯುತ್ತಮವಿದೆ! ಅದರಲ್ಲಿಯೂ ಮಾರ್ಚ ೪ ರಿಂದ ೨೫, ಎಪ್ರಿಲ ೪ ರಿಂದ ೨೪, ಮೇ ೨೬ ರಿಂದ ಜೂನ ೬, ಜೂನ ೨೭ ರಿಂದ ಜುಲೈ ೧೩ ಮತ್ತು ಜುಲೈ ೩೧ ರಿಂದ ಅಕ್ಟೋಬರ ೨೪ ರ ವರೆಗಿನ ಕಾಲವು ಬಹಳೇ ಲಾಭದಾಯಕವಿದೆ. ಯಂತ್ರದ ವ್ಯಾಪಾರಿಗಳು, ಸರಕಾರೀ ಗುತ್ತಿಗೆದಾರರು, ಗಿರಣಿಯವರು, ಮೋಟರ ಧಂದೆಯವರು, ಉಕ್ಕು ಕಬ್ಬಿಣದ ಸರಕುಗಳನ್ನು ಹೊತ್ತು ಮಾರುವ ಧಂದೆ ಮಾಡುವವರು ಇವರೆಲ್ಲರಿಗೆ ಈ ವರ್ಷವು ಸಾಕಷ್ಟು ಲಾಭಕಾರಕವಿದೆ. ಅದರಂತೆಯೆ ಖಾಸಗೀ ನೌಕರದಾರರಿಗಿಂತ ಸರಕಾರಿ ನೌಕರದಾರರಿಗೆ ಹೆಚ್ಚು ಸುಖಕರವಾಗಿದ್ದು ಅದರಲ್ಲಿಯೂ ಜುಲೈ ೩೦ ರಿಂದ ಅಕ್ಟೋಬರ ೨೫ ರ ಮಧ್ಯದ ಕಾಲದಲ್ಲಿ ಪೋಲೀಸ, ಮಿಲಿಟರಿ, ಮೆಕ್ಯಾನಿಕಲ ಇಂಜನಿಯರ್ಸ, ರೇಲ್ವೆ ಡ್ರಾಯವರ, ಅಬಕಾರಿ ಮತ್ತು ಪಿ ಡಬ್ಲ್ಯೂಡಿ ಖಾತೆಯಲ್ಲಿಯ ನೌಕರದಾರರಿಗೆ ಮೇಲಿನ ಗ್ರೇಡ ಸಿಗದೇಇರಲಿಕ್ಕಿಲ್ಲ. ಮಾರ್ಚ ೧೨ ರ ವರೆಗೆ ಮೇಲಿನವರೂ ಕೆಳಗಿನವರೂ ನಿಮ್ಮ ಜೀವ ಹಿಂಡುತ್ತಿರುವದರಿಂದ ರಾಜೀನಾಮೆ ಸಹಿತ ಕೊಡಲು ನೀವು ಸಿದ್ಧರಾಗಬಹುದು. ಬಹು ದೂರದ ಪ್ರವಾಸ ಯೋಗ ಒಮ್ಮೆಯಾದರೂ ಬರುವದು. ಮಾರ್ಚ ೧೨ ರ ವರೆಗೆ ಸಂಕಟ ಪರಿವಾರವೇ ಗುಳೆಎತ್ತಿ ಬರುವದರಿಂದ ದೇವರು ದಿಂಡರಲ್ಲಿ ನಿಮ್ಮ ಶ್ರದ್ಧೆಯು ಹಾರಿಹೋಗಿ ಹೇಗಾದರೂ ಹೊಟ್ಟೆ ಹೊರಕೊಂಡರೆ ಸಾಕೆಂಬ ಸಂಗತಿ ಬರುವದು. ಮಿತ್ರ ಸುಖ ಉತ್ತಮ. ಸ್ಪರ್ಧೆ ಇಲ್ಲವೆ ವಾದದಲ್ಲಿ ಮಾರ್ಚ ೧೨ ರ ವರೆಗೆ ಶತ್ರುಗಳು ನಿಮ್ಮನ್ನು ಹೈರಾಣ ಮಾಡಿದರೆ ಆ ನಂತರ ನೀವು ಅವರನ್ನು ಕಂಗೆಡಿಸಿ ಓಡಿಸಿ ಬಿಡುವಿರಿ. ಈ ತಾರೀಖಿನ ನಂತರ ನಿಮ್ಮ ಹತ್ತರ ನಾಲ್ಕು ದುಡ್ಡು ಕೂಡಿಬೀಳುವವು.

ಸ್ತ್ರೀಯರಿಗೆ ಪತಿ ಸುಖ ಚನ್ನಾಗಿದ್ದರೂ ಸಂತತಿ ಸುಖ ಅಷ್ಟಕ್ಕಷ್ಟೇ. ಮಕ್ಕಳಿಗಿಂತ ಅಳಿಯ ಸೊಸೆಂದಿರೆ ನಿಮ್ಮನ್ನು ಹೆಚ್ಚು ಪ್ರೀತಿಯಿಂದ ಕಾಣುವರು. ಹೆರಿಗೆ ವಿಚಾರದಲ್ಲಿ ಮಾರ್ಚ ೧೨ ರ ವರೆಗೆ ಸ್ವಲ್ಪ ತೊಂದರೆ, ನಂತರ ಸುಖಪ್ರಸವನಾಗುವದು. ಹೆಚ್ಚಾಗಿ ಪುತ್ರಪ್ರಾಪ್ತಿಯ ಯೋಗವಿದ್ದರೂ ಮಾರ್ಚ ೨೨ ರಿಂದ ಎಪ್ರಿಲ ೨೨ ರ ಮಧ್ಯೆ ಹುಟ್ಟುವ ಕೂಸುಗಳಿಗೆ ದೇಹಪೀಡೆ ಹೆಚ್ಚಾಗುವ ಸಂಭವ. ಮನೆಯಲ್ಲಿ ಸ್ತ್ರೀಯರ ಪ್ರೀತಿಗೆ, ಪುರುಷರ ತಿರಸ್ಕಾರಕ್ಕೆ ಪಾತ್ರರಾಗಬೇಕಾಗುವದು.

ವಿದ್ಯಾರ್ಥಿಗಳಿಗೆ ಅಭ್ಯಾಸದ ದೃಷ್ಟಿಯಿಂದ ಮಾರ್ಚ ೧೨ ರ ವರೆಗಿನ ಕಾಲವು ಚನ್ನಾಗಿದ್ದರೂ ಪರೀಕ್ಷೆಯಲ್ಲಿ ಯಶ ದೊರೆತೀತೆಂದು ಹೇಳಲಿಕ್ಕಾಗುವದಿಲ್ಲ. ಪರೀಕ್ಷೆಗೆ ಕಟ್ಟಲು ಸಹ ಅನುಕೂಲವಿಲ್ಲದಂತೆ ಕೆಲವರಿಗೆ ವಿಘ್ನವುಂಟಾಗಬಹುದು. ಮಾರ್ಚ ೧೨ ರ ನಂತರ ಯಶಪ್ರಾಪ್ತಿಯ ಯೋಗವಿದ್ದು ಎಪ್ರಿಲ ೧೩ ರಿಂದ ಮೇ ೧೪, ಜೂನ ೧೫ ರಿಂದ ಜುಲೈ ೧೬ ಮತ್ತು ಅಕ್ಟೋಬರ ೧೫ ನೇ ತಾರೀಖಿನ ನಂತರದ ಕಾಲದಲ್ಲಿ ಪರೀಕ್ಷೆ ಆದವರಿಗೆ ಯಶಸ್ಸು ಕಟ್ಟಿಟ್ಟಂತೇ!

## ಕನ್ಯಾ

ಆರೇನು ಮಾಡುವರು ದೈವ ತಾ ಮುನಿದರೆ ಎಂದೆನ್ನಲೆ! ನಿಮ್ಮ ಶನಿಕಾಟದ ಮೊದಲ ೨॥ ವರ್ಷಗಳು ಅಗಸ್ಟ ೩೦ ಕ್ಕೆ ಮುಗಿದು ಎರಡನೇ ಭಾಗವು ಪ್ರಾರಂಭವಾಗುವದು. ಅಂದರೆ ಅಗಸ್ಟದ ವರೆಗೆ ಹನ್ನೆರಡನೆಯ ಮತ್ತು ಆ ಮೇಲೆ ಒಂಬನೇ ಶನಿಯ ದೃಷ್ಟಿ ನಿಮ್ಮ ಮೇಲಿದೆ. ಹನ್ನೆರಡನೆಯ ಶನಿ ಇರುವ ವರೆಗೆ ಸಂತತಿಗೆ, ಅಣ್ಣ ತಮ್ಮಂದಿರಿಗೆ ಸ್ವಲ್ಪ ಕಾಯಿಲೆ, ವೆಚ್ಚ ವಿಪರೀತ, ಜನರು ಪ್ರತಿಕೂಲ, ಕ್ಷುಲ್ಲಕ ಕಾರಣಕ್ಕಾಗಿ ಪರಿಸ್ಥಿತಿ ವಿಕೋಪಕ್ಕೆ ಹೋಗುವದು ಮತ್ತು ಯಾವ ಅಗತ್ಯದ ಕೆಲಸವೂ ಮುಂಗಡ ಕೈಗೂಡುವದು ದುಸ್ಸಾಧ್ಯ! ಹೊತ್ತಿಗೆ ಒದಗದಂತೆ ಕೆಲಸವಾಗಿ ವೃಥಾ ವೈರ ಹುಟ್ಟಿಕೊಂಡು ತೊಂದರೆ ಆದೀತು. ಮಾರ್ಚ ೧೨ ಕ್ಕೆ ಬರುವ ಆರನೇ ಗುರು ಅಗಸ್ಟ ಮುಗಿಯುವ ವರೆಗೆ ನಿಮಗೆ ಹೆಚ್ಚು ತೊಂದರೆ ಕೊಡುವದರಿಂದ ಆ ಗುರು ಬಂದಂದಿನಿಂದ ಮೇ ೩೦ ನೇ ತಾ॥ನ ವರೆಗೆ ಉತ್ತಮ ಕಾರ್ಯಗಳನ್ನು ಪ್ರಾರಂಭಿಸಬೇಕಾದರೂ ಪೂರ್ಣ ವಿಚಾರ ಮಾಡಿಯೆ ಕೈಕೊಳ್ಳಬೇಕು. ಮನೆಯಲ್ಲಿ ಒಡಕು ಹುಟ್ಟಿ ನಿಮಗೆ ಮಂಕು ಕವಿಯುವಂಥ ಘಟನೆಗಳು ಸಂಭವಿಸಬಹುದು. ಆಗಸ್ಟ ೩೦ ಕ್ಕೆ ಒಂದನೇ ಶನಿ ಬಂದ ನಂತರ ನಿಮ್ಮ ಗಾಡಿ ಮತ್ತೆ ದಾರಿ ಹಿಡಿದು ತೊಂದರೆಯಿಲ್ಲದೆ ಸಾಗುವದು!

ಮೊದಲನೇ ಶನಿಯ ಕಾಲದಲ್ಲಿ ಮನೆಯಲ್ಲಿ ಸ್ವಲ್ಪ ಜಗಳ, ಸ್ತ್ರೀಗೆ ಕಾಯಿಲೆ ಆದರೂ ನಿಮ್ಮ ಭಾಗ್ಯಸೂರ್ಯನು ಉದಯ ಹೊಂದಿ ಅನೇಕ ಸಂಗತಿಗಳು ನಿಮ್ಮ ಮನಸ್ಸಿನಂತೆ ಘಟಿಸುವವು. ಅಗಸ್ಟ ೩೧ ರಿಂದ ದೀಪಾವಳಿಯ ವರೆಗಿನ ಕಾಲದಲ್ಲಿ ನಿಮ್ಮ ಮಕ್ಕಳಲ್ಲಿ ಒಬ್ಬರು ವಿಶೇಷ ವೈಭವ ಹೊಂದುವರು. ಮಿತ್ರರು ಪ್ರೇಮದಿಂದಲೇ ನಡೆದುಕೊಳ್ಳುವರು ಮತ್ತು ಶತ್ರುಗಳು, ವಿರೋಧಿಗಳು ಕೂಡ ನಿಮ್ಮ ಸ್ನೇಹ ಕೃಪಾಯಾಚನೆ ಮಾಡುವರು! ಅಕ್ಟೋಬರ ೨೬ ರ ನಂತರ ಇದು ಹೆಚ್ಚಾಗಿ ನಿಮ್ಮ ಅನುಭವಕ್ಕೆ ಬಂದೀತು.

ನಿಮ್ಮ ಪ್ರಕೃತಿಗೆ ಈ ವರ್ಷ ಅಷ್ಟೇನೂ ಕೆಟ್ಟದ್ದಿಲ್ಲ. ನೆಗಡಿ ಕೆಮ್ಮು ಟೊಂಕಸೂಲಿ ಮುಂತಾದವುಗಳಿಂದ ಹೆಚ್ಚು ಅಶಕ್ತತೆ ಉಂಟಾದಂತೆ ಅನಿಸುವದೇ ಹೊರತು ಹೆಚ್ಚಿನ ಕಾಯಿಲೆಯ ಹೆದರಿಕೆಯಿಲ್ಲ! ಪ್ರಾಪಂಚಿಕ ಸುಖ ಅಷ್ಟಕ್ಕಷ್ಟೆ. ಪ್ರತಿಯೊಬ್ಬರೂ ಮನಬಂದಂತೆ ವರ್ತಿಸುವರು. ಅವರು ಹೇಳುವದು ಆಚಾರವಾದರೂ ತಿನ್ನುವದು ಬದನೇಕಾಯಿಯೆ! ಜುಲೈ ೩೦ ರಿಂದ ಅಗಸ್ಟ ೩೦ ರ ವರೆಗೆ ಮತಭೇದವು ತೀವ್ರವಾಗುವದು. ಮಾರ್ಚ ೧೨ ರಿಂದ ಮೇ ೩೦ ರ ವರೆಗಿನ ಕಾಲದಲ್ಲಿ ಸ್ಥಾವರ ಆಸ್ತಿಯ ಹಾನಿ, ವಾಹನಗಳ ನಾದುರಸ್ತಿ, ನೆರೆಹೊರೆಯವರ ವಿರೋಧ, ಆಪ್ತರಿಂದ ವಂಚನೆ, ನಂಬಿಗೆಯ ಆಳುಗಳ ಕಾಯಿಲೆ ಇವುಗಳಲ್ಲಿ ಯಾವದಾದರೂ ತೊಂದರೆ ಉಂಟಾಗುವದು. ನಿಮ್ಮ ವಿವಾಹ ಇಲ್ಲವೆ ನಿಮ್ಮ ಮಕ್ಕಳ ವಿವಾಹವಾಗಬೇಕಾಗಿದ್ದಲ್ಲಿ ಮಾರ್ಚ ೧೨ ರ ವರೆಗೆ ನಂತರ ಅಗಸ್ಟ ೩೦ ರ ವರೆಗೆ ಮಹತ್ಪ್ರಯಾಸದಿಂದ ಕೂಡಿ ಬರುವದು. ಒಟ್ಟಿನ ಮೇಲೆ ಪ್ರಾಪಂಚಿಕ ವಿಷಯದಲ್ಲಿ ವಿಶೇಷ ಸ್ಥಿತ್ಯಂತರವಿದೆ.

ಉದ್ಯೋಗ ಧಂದೆಯವರಿಗೆ ಮಾರ್ಚ ೧೨ ರ ವರೆಗೆ ಮತ್ತು ನೌಕರದಾರರಿಗೆ ಆನಂತರ ಅಗಸ್ಟ ೩೦ ರ ವರೆಗೆ ಅಲ್ಲದೆ ಈ ಎರಡೂ ವರ್ಗದವರಿಗೆ ಸಪ್ಟೆಂಬರ ನಂತರದ ಕಾಲವು ಉತ್ಸಾಹದಾಯಕವಿದೆ. ಮಾರ್ಚ ೧೨ ರಿಂದ ಅಗಸ್ಟ ೩೦ ರ ವರೆಗೆ ಉದ್ಯೋಗ ಧಂದೆಯವರು ಬಹಳ ಜಾಗರೂಕರಾಗಿರಬೇಕು. ನೌಕರದಾರರು ಮುನ್ನುಗ್ಗಬೇಕು. ಸಪ್ಟೆಂಬರದ ನಂತರ ಇವರೆಲ್ಲರೂ ನಿರ್ಭೀತಿಯಿಂದ ಸಾಹಸ ಕಾರ್ಯ ಕೈಕೊಳ್ಳಲು ಹಿಂಜರಿಯಬಾರದು. ಹೀಗೆ ನಡೆದುಕೊಂಡಲ್ಲಿ ಅವರವರ

ಯೋಗ್ಯತೆಯ ಪ್ರಕಾರ ಲಾಭವಾದರೂ ಹಾನಿಯೆಂದಿಗೂ ಅಗಲಿಕ್ಕಿಲ್ಲ. ನೌಕರದಾರರಿಗೆ ಅಕ್ಟೋಬರ ೨೫ ರ ನಂತರ ಬಡತಿ ಇಲ್ಲವೆ ಹೆಚ್ಚಿನ ಗ್ರೇಡ ಸಿಗುವದು. ಉದ್ಯೋಗ ಧಂದೆಯವರಿಗೆ ಡಿಸೆಂಬರ ೧೦ ರಿಂದ ಫೆಬ್ರುವರಿ ೧೩ ಮತ್ತು ಅಗಸ್ಟ ೩೦ ರಿಂದ ಅಕ್ಟೋಬರ ೨೫ ರ ವರೆಗೆ ಹಣದ ಝುಣಝುಣ ನಿನಾದ ಹೆಚ್ಚಾಗಿ ಕೇಳಬಂದೀತು. ವಾದ ಸ್ಪರ್ಧೆಗಳಲ್ಲಿ ಮಾರ್ಚ ೧೨ ರ ವರೆಗೆ ಮುಂದೆ ಆಗಸ್ಟ ೩೦ ರ ನಂತರ ಪ್ರತ್ಯಕ್ಷ ಯಶ ದೊರೆಯದಿದ್ದರೂ ಅದಕ್ಕೆ ಅನುಕೂಲ ವಾತಾವರಣವು ನಿರ್ಮಾಣವಾದೀತು. ಅಗಸ್ಟ ೩೦ ರ ವರೆಗೆ ಶತ್ರು ಮತ್ತು ಸಾಹುಕಾರರಿಂದ ಅತ್ಯಂತ ತ್ರಾಸ. ನಿಮಗೇನಾದರೂ ವ್ಯಸನವಿದ್ದಲ್ಲಿ ಮಾರ್ಚ ೨೨ ರಿಂದ ಮೇ ೩೦ ರ ಒಳಗಿನ ಕಾಲದಲ್ಲಿ ಅತ್ಯುಚ್ಚ ಸ್ಥಿತಿಯನ್ನು ಮುಟ್ಟುವದು.

ಈ ರಾಶಿಯ ಕುಮಾರಿಯರ ವಿವಾಹ ಮೊದಲು ಕೂಡಿಬರುವ ಮತ್ತು ಕೂಡಿಬಂದರೆ ನಂತರ ಗೊತ್ತುಪಡಿಸಿದ ಮುಹೂರ್ತಕ್ಕೆ ಅಗುವ ಸಂಭವವಿದೆ. ಬಹಳೇ ಅವಸರ ಮಾಡಿದಲ್ಲಿ ಆದಷ್ಟು ಮನಸ್ಸಿನಂತೆ ಕೆಲಸವಾದೀತು. ಹತ್ತರಲ್ಲಿ ಏಳೆಂಟು ಕನ್ನೆಯರಿಗೆ ಇಮನೇ ವರ ದೊರೆತಾನು! ವಿವಾಹಿತ ಸ್ತ್ರೀಯರಿಗೆ ಮಾರ್ಚ ೧೨ ರ ವರೆಗೆ ದೊರೆಯುವಂಥ ಗೃಹ ಸೌಖ್ಯ, ಪತಿ ಸುಖಗಳು ಅನಂತರ ದೊರೆಯಲಾರವು. ಸ್ವಕಾರ್ಯಕ್ಕಾಗಿ ದೂರ ಪ್ರಯಾಣಿಸುವ ಪತಿಯ ವಿರಹ, ಅಥವಾ ಅವನ ಕಾಯಿಲೆ ಇಲ್ಲವೆ ದುರಾಗ್ರಹ ಮೂಲಕ ಪತಿ ಪತ್ನಿಯರ ಪ್ರೇಮದಲ್ಲಿ ವಿರಸವುಂಟಾದೀತು. ನಿಮ್ಮ ಪತಿಯು ನಿಮ್ಮನ್ನು ತೋರಿಕೆಗೆ ಪ್ರೀತಿಸುತ್ತಾನೆಂಬ ಸಂದೇಹವೂ ಅನೇಕರಿಗೆ ಉಂಟಾದರೂ ದೇವರ ದಯೆಯಿಂದ ಸಪ್ಟೆಂಬರದ ನಂತರ ನಿಮ್ಮ ತೊಂದರೆಗಳೆಲ್ಲ ನಿವಾರಣೆ ಹೊಂದಿ ದೀಪಾವಳಿಯನ್ನು ಆನಂದೋಲ್ಲಾಸದಿಂದ ಕಳೆಯುವಿರಿ. ಗರ್ಭಿಣಿಯರಿಗೆ ಮಾರ್ಚ ೨೨ ರಿಂದ ಎಪ್ರಿಲ ೨೨ ರ ವರೆಗಿನ ಕಾಲವನ್ನು ಬಿಟ್ಟು ಇಡೀ ವರ್ಷವು ಸುಖಕರವಿದೆ. ಮಾರ್ಚ ೧೨ ರ ವರೆಗೆ ಪುತ್ರ ಪ್ರಾಪ್ತಿ ಆ ಮೇಲೆ ಕನ್ಯಾ ಪ್ರಾಪ್ತಿಯ ಯೋಗವಿದ್ದರೂ ಹುಟ್ಟುವ ಮಕ್ಕಳು ಸದೃಢವಾಗಿರುವವು.

ವಿದ್ಯಾರ್ಥಿಗಳಿಗೆ ಈ ವರ್ಷ ಮಾರ್ಚ ೧೨ ರಿಂದ ಅಗಸ್ಟ ೩೦ ರ ವರೆಗೆ ಬಹಳೇ ತೊಂದರೆಯಾಗಿದ್ದು ಮಾರ್ಚ ೨೨ ರಿಂದ ಮೇ ೩೦ ರ ಒಳಗಿನ ಕಾಲದಲ್ಲಿ ನಡೆವ ಪರೀಕ್ಷೆಗಳಲ್ಲಿ ಬರಿ ಬಿಳಿ ಉತ್ತರ ಕಾಗದಗಳನ್ನೇ ಕೊಟ್ಟು ಬರಬೇಕೇನೊ ಎಂದೂ ಅನಿಸಬಹುದು. ಇದೇ ೩೦ ನೇ ಅಕ್ಟೋಬರದ ವರೆಗೆ ಮತ್ತು ನವೆಂಬರ ೧೭ ರಿಂದ ಡಿಸೆಂಬರ ೭ ರ ವರೆಗೆ, ಡಿಸೆಂಬರ ೨೭ ರಿಂದ ಮಾರ್ಚ ೨ ವರೆಗೆ, ಜೂನ ೬ ರಿಂದ ಜುಲೈ ೧೩ ರ ವರೆಗೆ ಮತ್ತು ಅಕ್ಟೋಬರ ೪ ರಿಂದ ೨೩ ರ ನಡುವಿನ ಕಾಲದಲ್ಲಿ ಪರೀಕ್ಷೆ ಅಗುವ ವಿದ್ಯಾರ್ಥಿಗಳಿಗೆ ತೇರ್ಗಡೆ ಹೊಂದುವ ಆನಂದ ಹೆಚ್ಚಾಗಿ ದೊರೆಯುವದು.

## ತುಲಾ

"ದೈವವೇ ನಿನ್ನನ್ನು ಓಲಗಿಸುತಿರಲು। ಯಾವ ಭೀತಿಯು ನಿನಗೆ ಯಾವ ದುಗುಡವು ಪೇಳೊ ।।" ಎಂದು ನಿಮ್ಮನ್ನು ಕೇಳಬಹುದೆ? ಮಾರ್ಚ ೧೨ ರಿಂದ ಅಗಸ್ಟ ೩೦ ರ ವರೆಗೆ ನಿಮ್ಮ ಆರೋಗ್ಯ ಚನ್ನಾಗಿದ್ದಷ್ಟು ಈ ವರ್ಷದ ಉಳಿದ ಕಾಲದಲ್ಲಿ ಚನ್ನಾಗಿರುವದಿಲ್ಲೆಂಬ ಚಿಂತೆಯೆ? ಆದರೆ ಮೇಲೆ ಹೇಳಿದ ಮಾರ್ಚ–ಅಗಸ್ಟಗಳ ನಡುವಿನ ಕಾಲದಲ್ಲಿ ನಿಮ್ಮ ಹೆಂಡತಿ, ಮಕ್ಕಳು, ಆಪ್ತೇಷ್ಟರು ನೆರೆಹೊರೆಯವರು, ಮಿತ್ರರು, ಆಳುಹೋಳುಗಳು ಅಷ್ಟೇ ಏಕೆ ನಿಮ್ಮ ಮನೆಯಲ್ಲಿಯ ದನಕರುಗಳು ಸಹಿತ ನಿಮ್ಮನ್ನು ಸಂತೋಷದಲ್ಲಿ ಇಡಲು ಪ್ರಯತ್ನಿಸುವವು. ಆದ್ದರಿಂದ ನಿಮಗೆ ಶಾರೀರಿಕ, ಮಾನಸಿಕ, ಆರ್ಥಿಕ ತೊಂದರೆಗಳು ಉಂಟಾದರೂ ನಿಮಗೆ ಕಂಡುಬರುವದಿಲ್ಲ. ಸತಿಪತಿಯರಲ್ಲಿ ಪರಸ್ಪರ ಪ್ರೇಮ ಬೆಳೆಯುತ್ತ ನಡೆಯುವದು. ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಅಗತಕ್ಕದಿದ್ದರೆ ಈ ಅವಧಿಯಲ್ಲಿ ಅದು ಅನಾಯಾಸವಾಗಿ ಕೂಡಿಬಂದು ನಿಮ್ಮ ಅಪೇಕ್ಷೆಗಿಂತಲೂ ಉತ್ತಮ ಬೀಗರು ದೊರೆತು ಶುಭಕಾರ್ಯಗಳು ಒಳ್ಳೆ ವಿಜೃಂಭಣೆಯಿಂದ ಜರಗುವವು. ಈ ಅವಧಿಯಲ್ಲಿ ನಾಲ್ಕೂ ನಿಟ್ಟಿನಿಂದ ಆನಂದದ ಸುದ್ದಿ, ಸಮಾಧಾನ ಹೆಚ್ಚಿಸುವ ಪತ್ರವ್ಯವಹಾರ, ಭಾವೀಹಿತಕ್ಕೆ ಅನುಕೂಲವಾಗುವ ಲೇಖೀ ವ್ಯವಹಾರ, ಪುಣ್ಯಾರ್ಜನೆಯ ನಿಮಿತ್ತ ಪ್ರವಾಸಾದಿ ಕಾರ್ಯಗಳು ನಡೆಯುವವು. ಜನರ ಕುತೂಹಲದೊರನೆ ಹೊಟ್ಟೆಕಿಚ್ಚಿಗೂ ಕಾರಣವಾಗುವಂತೆ ನೀವು ಗಣ್ಯವ್ಯಕ್ತಿಗಳ ಕೃಪಾಕಟಾಕ್ಷಕ್ಕೆ ಪಾತ್ರರಾಗುವಿರಿ.

ಈ ನಿಮ್ಮ ಆನಂದವೃತ್ತಿಗೆ ಯಾರದೋ "ದೃಷ್ಟಿ" ಆಯಿತೆನ್ನುವಂತೆ ಅಥವಾ ನಿಮ್ಮ ಆನಂದದಲ್ಲಿ ನಿಮ್ಮ ಲಾಭ ಸ್ಥಾನದಲ್ಲಿದ್ದ ೧೧ ನೇ ಶನಿಯನ್ನು ನೀವು ಅಲಕ್ಷಿಸಿದಿರಿ ಎಂದು ಅವನು ಆಗಸ್ಟ ೩೦ ನೇ ತಾ. ಗೆ ೧೨ ನೇ ಸ್ಥಾನಕ್ಕೆ ಹೋಗಿ "ಸಾಡೇಸಾತಿ" ಶನಿಕಾಟವನ್ನು ಪ್ರಾರಂಭಿಸಿ ನಿಮ್ಮ ಮನಃಸ್ವಾಸ್ಥ್ಯವನ್ನು ಕೆಡಿಸುತ್ತಾನೆ. ಈ ದಿನದ ನಂತರ ನಿಮ್ಮ ಎಲ್ಲ ಕಾರ್ಯಗಳಲ್ಲಿ ತೀರ ಮಂದಗತಿಯ ಪ್ರಗತಿ ಕಂಡುಬರುವದು. ತುಲಾ ರಾಶಿಯು ಶನಿಯ ಉಚ್ಚರಾಶಿಯಿರುವದರಿಂದ ಮೇಷ, ಕರ್ಕ, ಸಿಂಹ, ವೃಶ್ಚಿಕ ಇತ್ಯಾದಿ ವೈರಿ ರಾಶಿಯವರನ್ನು ಕಾಡಿದಂತೆ ನಿಮ್ಮನ್ನು ಕಾಡುವದಿಲ್ಲ ಇಷ್ಟೇ ಅಲ್ಲ ಅದರೆ ಜನ್ಮಸ್ಥ ಶನಿಯು ಅಂದರೆ ಒಂದನೇ ಶನಿಯು ತನ್ನ ಈ ರಾಶಿಗೆ

ಬಂದ ಕೂಡಲೆ ಕೆಲ ಕೆಲವು ವಿಷಯಗಳಲ್ಲಿ ಕಲ್ಪನಾತೀತ ಯಶಸ್ಸು ಕೊಡುವನು. ೧೨ನೇ ಶನಿಯಿದ್ದಾಗ ಸಂತತಿಗೆ ಕ್ಲೇಶ, ಇಲ್ಲವೆ ಅವರಿಂದ ಅಪ್ರಿಯ ವರ್ತನೆ, ವಿನಾಕಾರಣ ವಿಶೇಷ ವೆಚ್ಚ, ಸ್ಥಾವರ ಆಸ್ತಿ ಹೆಚ್ಚಿಸುವ ಇಲ್ಲವೆ ಇಲ್ಲದ ಸಲ್ಲದ ಕಾಯದೆ ಆಧಾರದಿಂದ ಇತರರ ಆಸ್ತಿಯನ್ನು ಎತ್ತಿಹಾಕುವ ಪ್ರಯತ್ನದಲ್ಲಿ ಅಳತೆ ಮೀರಿ ವೆಚ್ಚಮಾಡಿದರೂ ಕೊನೆಗೆ ಅಪಯಶಸ್ಸು ಬರುವದರಿಂದ ತೀರ ಕಂಗಾಲಾಗುವಿರಿ. ಮೊದಲನೇ ಶನಿಯು ೧೯೫೨ ನವೆಂಬರ ೫ಕ್ಕೆ ಬಂದ ನಂತರ ನಿಮಗೆ ಉತ್ತಮ ಸುಖ ದೊರೆತೀತು.

ಉದ್ಯೋಗ ಧಂದೆದವರಿಗೆ ಅಗಸ್ಟ ೩೦ ರ ವರೆಗೆ ಮಾತ್ರ " ಮುಟ್ಟಿದ್ದೆಲ್ಲ ಚಿನ್ನ"ವಾಗುವ ಯೋಗವಿದೆ. ಮಾರ್ಚ ೧೨ ರ ವರೆಗೆ ನೌಕರದಾರರಿಗೆ ಅನಂತರ ಸ್ವತಂತ್ರ ಧಂದೆದವರಿಗೆ ಲಾಭದಾಯಕ ಕಾಲವಿದೆ. ನೌಕರದಾರರ ಅಧಿಕಾರ ಬೆಳೆದು ಅನುಕೂಲ ಸ್ಥಳಗಳಿಗೆ ಬದಲಿ ಆಗುವದು. ವರಿಷ್ಠರ ಕೃಪೆಯು ಅಗಸ್ಟ ೩೦ ರ ವರೆಗೆ ತೀರ ಚನ್ನಾಗಿದ್ದು ಅನಂತರ ಕೂಡ ಏನೂ ಕೆಟ್ಟದ್ದಿಲ್ಲ. ಅಕ್ಟೋಬರ ೩೦ ರಿಂದ ನವೆಂಬರ ೧೬, ೨೬ ಡಿಸಂಬರದಿಂದ ಮಾರ್ಚ ೩, ಎಪ್ರಿಲ ೪ ರಿಂದ ೨೪, ಜೂನ ೨೬ ರಿಂದ ಜುಲೈ ೧೩, ಜುಲೈ ೩೦ ರಿಂದ ಅಗಸ್ಟ ೨೦ ಮತ್ತು ಅಕ್ಟೋಬರ ೨೪ ರ ನಂತರದ ಕಾಲವು ಧನಲಾಭದ ದೃಷ್ಟಿಯಿಂದ ವಿಶೇಷ ಸಮಾಧಾನಕಾರಕವಿದೆ. ಅದರಂತೆ ಧಂದೆಯವರಿಗೆ ನವೆಂಬರ ೨೮ ರಿಂದ ಮಾರ್ಚ ೩, ಎಪ್ರಿಲ ೨೨ ರಿಂದ ಮೇ ೩೦, ಜುಲೈ ೩೦ ರಿಂದ ಅಕ್ಟೋಬರ ೨೫ ರ ವರೆಗಿನ ಕಾಲವು ವಿಶೇಷ ಲಾಭದಾಯಕವಿದೆ. ವಕೀಲರಿಗೆ ಅಗಸ್ಟ ೩೦ ರ ವರೆಗೆ ವಿಪುಲ ದ್ರವ್ಯಲಾಭ. ಧಂದೆ ಇಲ್ಲವೆ ನೌಕರಿ ಯಾವದೇ ನಿಮ್ಮ ವೃತ್ತಿಯಿದ್ದರೂ ಸ್ವಲ್ಪ ಸ್ಥಾವರ ಆಸ್ತಿ ಜಂಗಮ ಆಸ್ತಿ ಖಂಡಿತವಾಗಿ ಕೂಡಿಬೀಳುವದು! ಸಾಲವಿದ್ದರೆ ಅದು ಸಂಪೂರ್ಣ ಇಲ್ಲವೆ ಬಹ್ವಂಶದಿಂದ ಮುಟ್ಟಿಹೋಗುವದು. ಕವಿ, ಗಾಯಕ ನಟ, ವಾದ್ಯವಿಶಾರದ ಮುಂತಾದ ಲಲಿತ ಕಲೋಪಾಸಕರಿಗೆ ಕೀರ್ತಿಯೊಂದಿಗೆ ದ್ರವ್ಯಲಾಭವೂ ಆಗುವದು. ಗಾಣಿಗರು, ಚಿಕ್ಕ ತಕ್ಕಡಿ ಅಂಗಡಿಯವರು, ಬೋರ್ಡಿಂಗ ಲಾಜಿಂಗದವರು, ದನಗಳ ವ್ಯಾಪಾರಿಗಳು ಇವರಿಗೆ ಈ ವರ್ಷ ಲಾಭದಾಯಕವಿದೆ.

ಸ್ತ್ರೀಯರಿಗೆ ಅಗಸ್ಟ ೩೦ ರ ವರೆಗೆ ಮನಸೋಕ್ತ ಸಂಸಾರಸುಖ ದೊರೆಯುವದು. ಅನಂತರ ಕೂಡ ಪ್ರಾಪಂಚಿಕ ಸುಖ ಚನ್ನಾಗಿದ್ದರೂ ಮಕ್ಕಳಿಗೆ ಸ್ವಲ್ಪ ಕಾಯಿಲೆ ಆದೀತು. ಮನಸಿನಲ್ಲಿ ಇಲ್ಲದಿದ್ದರೂ ಬಹಳ ವೆಚ್ಚಮಾಡುವಂಥ ಪ್ರಸಂಗ ಬರುವವು. ಅವಿಭಕ್ತ ಕುಟುಂಬವಿದ್ದರೆ ಹೆಂಗಸರಲ್ಲಿ ಕಲಹ ಸಂಭವಿಸಿ ನಿಮ್ಮ ಪತಿಯೂ ಅವರ ಬೆನ್ನು ಕಟ್ಟುವನು. ಗರ್ಭಿಣಿಯರು ಮಾರ್ಚ ೧೨ ರಿಂದ ಅಗಸ್ಟ ೩೦ ರ ಅವಧಿಯಲ್ಲಿ ಪ್ರಸೂತರಾದರೆ ತೊಂದರೆಯಾಗದೆ ಪುತ್ರಪ್ರಾಪ್ತಿಯ ಆನಂದ ಲಭಿಸೀತು. ಈ ಅವಧಿಯಲ್ಲಿ ಕನ್ನೆಯರ ವಿವಾಹವೂ ಅನಾಯಾಸ ಕೂಡಿಬರುವದು. ಮಹಾಯಾತ್ರೆ ಕೈಕೊಳ್ಳಲಿಚ್ಛಿಸುವ ಸ್ತ್ರೀಪುರುಷರಿಗೆ ಆ ಯೋಗವು ಮಾರ್ಚ ೨೨ ರಿಂದ ಎಪ್ರಿಲ ೨೨ ರ ವರೆಗೆ ಇಲ್ಲವೆ ಜುಲೈ ೩೦ ರಿಂದ ಅಕ್ಟೋಬರ ೨೫ ರ ಸುಮಾರಕ್ಕೆ ಖಂಡಿತ ಬರುವದು!

ಮಿತ್ರಸುಖಕ್ಕೆ ಈ ವರ್ಷ ಚನ್ನಾಗಿದ್ದರೂ ನಿಮ್ಮ ಒಬ್ಬಿಬ್ಬರು ಜೀವದ ಗೆಳೆಯರು ದುರ್ದೈವಕ್ಕೆ ಬಲಿಯಾಗಿ ಹಾಳಾಗಿಹೋಗುವ ಇಲ್ಲವೆ ಪರಲೋಕಪ್ರಯಾಣ ಬೆಳೆಸುವ ಸಂದರ್ಭವಿದೆ. ಅಗಸ್ಟ ೩೦ ರ ವರೆಗೆ ವಾದ ಸ್ಪರ್ಧೆಗಳಲ್ಲಿ ಉತ್ತಮ ಯಶ ದೊರೆತು ನಿಮ್ಮ ಶತ್ರುಗಳ ಅವತಾರಸಮಾಪ್ತಿಯಾದೀತು.

ವಿದ್ಯಾರ್ಥಿಗಳಿಗೆ ಈ ವರ್ಷ ಅಭ್ಯಾಸ ಚನ್ನಾಗಿ ಆಗದಿದ್ದರೂ ಮಾರ್ಚ ೧೨ ರಿಂದ ಅಗಸ್ಟ ೩೦ ರ ಒಳಗೆ ಆಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳಿಗೆ ಬಹುಶಃ ಮೇಲಿನ "ಕ್ಲಾಸ" ದೊರೆಯಬಹುದು ಮತ್ತು ಇತರ ಸಮಯದಲ್ಲಿ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳಿಗೂ ಯಶ ದೊರೆಯದಿರದು. ಆದರೆ ಮೇ ೩೦ ರಿಂದ ಜುಲೈ ೩೦ ರ ಒಳಗೆ ಪರೀಕ್ಷೆಗೆ

ಕುಳಿತುಕೊಳ್ಳುವ ವಿದ್ಯಾರ್ಥಿಗಳ ಪರಿಣಾಮ ಮಾತ್ರ ಸಂದೇಹಾಸ್ಪದ.

## ವೃಶ್ಚಿಕ

"ನೀನ್ಯಾಕೊ, ನಿನ್ನ ಹಂಗ್ಯಾಕೊ" ಎಂಬ ವೃತ್ತಿ ನಿಮ್ಮದು ಈ ಸಲ. ನಿಮ್ಮ ಪ್ರಕೃತಿ ಚನ್ನಾಗಿಯೆ ಉಳಿದರೂ ಯಾವದೊಂದರ ಅತಿರೇಕದ ಮೂಲಕ ಮಾರ್ಚ ೨೨ ರಿಂದ ಎಪ್ರಿಲ ೨೨ ರ ವರೆಗೆ ಜುಲೈ ೩೦ ರಿಂದ ಅಕ್ಟೋಬರ ೨೫ ರ ವರೆಗೆ ನಿಮ್ಮ ಪ್ರಕೃತಿಗೆ ಸ್ವಲ್ಪ ತೊಂದರೆ. ಮಕ್ಕಳ ತ್ರಾಸ ನಿತ್ಯ ಇದ್ದದ್ದೇ. ಸ್ತ್ರೀ ಸುಖ ನಿಮ್ಮ ಬಯಕೆಯಂತೆ ದೊರೆತು ಮಾರ್ಚ ೧೨ ರ ವರೆಗೆ ಪತಿ-ಪತ್ನಿಯರಲ್ಲಿಯ ಪ್ರೇಮವು ಹೆರವರು ಹೊಟ್ಟೆಕಿಚ್ಚುಪಡುವಂತೆ ಉತ್ಕಟವಾಗಿ ಉಳಿದೀತು. ಆ ನಂತರ ಮಕ್ಕಳ ನಡತೆಯ ವಿಚಾರದಲ್ಲಿ ಉಭಯತರಲ್ಲಿ ಮತಭೇದ ಉಂಟಾದೀತು. ಆದರೂ ಈ ವರ್ಷ ಪ್ರಾಪಂಚಿಕ ಸುಖ ಕೆಟ್ಟದ್ದಿಲ್ಲ ಎಂದೇ ಕಂಡು ಬಂದೀತು. ತೀರ ಪ್ರಿಯರಾದ ಆಪ್ತರ ಮಿತ್ರರ ಸಹವಾಸ ಲಭಿಸಿ ಮನಸಿಗೆ ವಿಶೇಷ ಶಾಂತಿ ಸಮಾಧಾನ ದೊರೆತೀತು. ಅವಿವಾಹಿತರಿದ್ದರೆ ಮಾರ್ಚ ೧೨ ರೊಳಗಾಗಿ ಮದುವೆಯಾಗುವದು. ಮಕ್ಕಳ ಮದುವೆಯಾಗತಕ್ಕದಿದ್ದರೆ ಡಿಸೆಂಬರ ೨೭ ರಿಂದ ಜಾನೇವರಿ ೨೦, ಫೆಬ್ರುವರಿ ೧೦ ರಿಂದ ಮಾರ್ಚ ೩, ಎಪ್ರಿಲ ೨೫ ರಿಂದ ಮೇ ೧೫, ಜೂನ ೬ ರಿಂದ ಜುಲೈ ೨ ಮತ್ತು ಅಕ್ಟೋಬರ ೩ ರಿಂದ ನವೆಂಬರ ೧ ನೇ ತಾ. ನ ಒಳಗಾಗಿ ಆ ಯೋಗ ವಿಶೇಷ ಪ್ರಬಲವಿದೆ. ತಾಯಿ ತಂದೆಗಳಿದ್ದರೆ ಅವರಲ್ಲೊಬ್ಬರಿಗೆ ಮಾರ್ಚ ೨೨ರಿಂದ ಮೇ ೩೦ರ ವರೆಗಿನ ಕಾಲವು ಕಂಟಕಪ್ರಾಯವಾಗಿದ್ದು ಆಗ ನಿಮ್ಮ ವಯಸ್ಸು ೧೪–೧೫ ಇಲ್ಲವೆ ೨೯-೩೦ ಇದ್ದರೆ ನಿಮ್ಮ ತಾಯಿ ತಂದೆಗಳಲ್ಲಿ ಒಬ್ಬರಿಗೆ ಮರಣ ಭಯವೂ ಇದೆ. ಸ್ಥಾವರ ಅಸ್ತಿಯಲ್ಲಿ ದಾಯಾದರು ಬಹಳೇ ಗೊಂದಲ ಹಾಕುವದರಿಂದ ನಿಮಗೆ ತೊಂದರೆ. ವಾಹನ ಮತ್ತು ಉಪಯುಕ್ತ ದನಕರುಗಳಿಗೆ ಹಾನಿ. ಆಳುಹೋಳುಗಳು ನಿಮ್ಮ ಹಂಗು ಇಡದೆ ನಡೆದುಕೊಳ್ಳುವರು. ಆದರೆ ನಿಮ್ಮ ಶಿಸ್ತು ದರ್ಪದ ಎದುರು ಅವರಲ್ಲಿ ಅನೇಕರು ಮೇ ೩೦ ರಿಂದ ಜುಲೈ ೩೦ ಮತ್ತು ಅಕ್ಟೋಬರ ೨೫ ರ ನಂತರ ಮೆತ್ತಗಾಗುವರು. ನಿಮ್ಮ ಮಕ್ಕಳು ನಿಮ-ಗೆ ಅಪ್ರಿಯ ಕಾರ್ಯವನ್ನು ಮಾಡುವ ಒಳಸಂಚು ನಡೆಸಿದರೂ ನೀವದನ್ನು ನಡೆಯಗೊಡುವದಿಲ್ಲ. ಅವರ ಶಿಕ್ಷಣ ವ್ಯವಸ್ಥಿತವಾಗಿ ನಡೆಯುವದು. ಒಂದೇ ವಿಷಯದ ಬಗ್ಗೆ ನಿಮಗೆ ಅನೇಕ ಸ್ವಪ್ನ ಬೀಳುವವು. ಯಜ್ಞದಂಥ ಮಹಾಧರ್ಮ ಕಾರ್ಯ ಮಾಡಿ ಧಾರ್ಮಿಕರ ಪ್ರೀತಿ ಸಂಪಾದಿಸುವಿರಿ. ಒಂದು ಮನೆ, ಒಂದು ಭೂಮಿ ಕೊಂಡುಕೊಳ್ಳುವ ಯೋಗವಿದ್ದು ಈ ವ್ಯವಹಾರವು ಮಾರ್ಚ ೧೨ ರಿಂದ ಎಪ್ರಿಲ ೧೩, ಇಲ್ಲವೆ ಅಗಸ್ಟ ೧೬ ರಿಂದ ಸಪ್ಟೆಂಬರ ೧೬ ಈ ಕಾಲದಲ್ಲಿ ನಡೆಯಬಹುದಾಗಿದೆ. ಯಾವದೊಂದು ಕಾರ್ಯ ಕೈಗೂಡಿತೆನ್ನುವಷ್ಟರಲ್ಲಿ ಆಕಸ್ಮಿಕ ವಿಘ್ನ ಬಂದೊದಗಿ ಅದು ಕೆಟ್ಟು ಹೋಗುವದೆಂಬ ನಿರಾಶೆ ತಲೆದೋರಿದರೂ ಅದನ್ನು ನಿವಾರಿಸಿ ಸ್ವೀಕೃತ ಕಾರ್ಯದಲ್ಲಿ ಯಶ ಸಂಪಾದಿಸುವ ಮನೋದಾರ್ಢ್ಯ ನಿಮ್ಮಲ್ಲಿದೆ. ಇದೇ ನಿಮ್ಮ ಈ ವರ್ಷದ ವೈಶಿಷ್ಟ್ಯ!

ಉದ್ಯೋಗ ಧಂದೆದವರಿಗೆ ಈ ವರ್ಷ ತೀರ ಉತ್ಸಾಹಪ್ರದವಿದ್ದು ನಿಮ್ಮ, ನಿಮ್ಮ ಹಿರಿಯರ ಕೈಗೂಡದಿದ್ದ ಆಕಾಂಕ್ಷೆಗಳೂ ಈಡೇರುವವು. ಅಗಸ್ಟ ೩೦ ರ ನಂತರ ದೇವರ ದಯದಿಂದ ನೀವು ಮುಟ್ಟದ್ದೆಲ್ಲ ಚಿನ್ನವಾಗುವದು. ಸ್ವತಂತ್ರಧಂದೆಯವರಿಗೂ ಲಾಭ ಸ್ಥಾನದಲ್ಲಿ ಹನ್ನೊಂದನೇ ಶನಿ ಇರುವದರಿಂದ ಕಲ್ಪನಾತೀತ ಲಾಭವಾಗುವದು. ಮಣ್ಣುಕೂಡ ಹೊನ್ನಾದೀತು. ಅದರಲ್ಲಿಯೂ ಡಿಸೆಂಬರ ೧೦ ರ ವರೆಗೆ, ಜಾನೇವರಿ ೨೧ ರಿಂದ ಫೆಬ್ರುವರಿ ೮, ಮಾರ್ಚ ೧೯ ರಿಂದ ಎಪ್ರಿಲ ೪, ಎಪ್ರಿಲ ೨೪ ರಿಂದ ಮೇ ೧೫, ಜೂನ ೭ ರಿಂದ ೨೬, ಜುಲೈ ೧೪ ರಿಂದ ೩೦, ಅಗಸ್ಟ ೨೦ ರಿಂದ ಸಪ್ಟೆಂಬರ ೭, ಅಕ್ಟೋಬರ ೪ ರಿಂದ ೨೪ ಈ ಕಾಲದಲ್ಲಿ ಧನಲಾಭ ವಿಶೇಷವಿದೆ. ಅಲ್ಲದೆ ಆಕಸ್ಮಿಕ ಧನ ಲಾಭದ ಸಂಶೋಧನೆಯಲ್ಲಿ ಇದ್ದವರಿಗೆ ಜೂನ ೨೬ ರಿಂದ ಜುಲೈ ೧೩, ಅಕ್ಟೋಬರ ೩ ರಿಂದ ೨೪ ರ ವರೆಗೆ ಬಯಸಿದ ದಷ್ಟಿಲ್ಲದಿದ್ದರೂ ಸಾಕಷ್ಟು ಧನಲಾಭವಾದೀತು ನೌಕರದಾರರಿಗೂ ಈ ವರ್ಷವು ಉತ್ತಮವಾಗಿದ್ದು ಮೇ ೩೦ರಿಂದ ಜುಲೈ ೩೦ರ ಒಳಗೆ ಬಢತಿ ಇಲ್ಲವೆ ಗ್ರೇಡ ಸಿಕ್ಕೀತು ಲಂಚ ಸಿಗುವ ಖಾತೆಯಲ್ಲಿಯ ನೌಕರರು ತೀರ ಜಾಗರೂಕರಾಗಿ ಮಾರ್ಚ ೨೨ ರಿಂದ ಮೇ ೩೦ ರ ವರೆಗೆ ಸಾಧುಗಳಂತೇ ನಡೆದುಕೊಳ್ಳಬೇಕು. ಅಗಸ್ಟ ೩೦ ರ ನಂತರ ಯೋಗ್ಯ ಸ್ಥಳಕ್ಕೆ ಬದಲಿ ಆಗುವ ಸಂಭವವಿದೆ. ನಿಮ್ಮ ಮೇಲಿನ ವರಿಷ್ಠನು ನಿಮ್ಮನ್ನು ಕಂಡು ಗುಡುಗು ಹಾಕಿದರೂ ಅವನ ಮೇಲಿನ ವರಿಷ್ಠನು ನಿಮ್ಮನ್ನು ಸಹಾನುಭೂತಿಯಿಂದ ಕಾಣುವನು. ಕೈಕೆಳಗಿನವರೂ ಸಮಯಸಾಧಕರಾಗುವರು.

ಈ ರಾಶಿಯ ಸ್ತ್ರೀಯರಿಗೆ ಪತಿ ಸುಖ ತೀರ ಉತ್ತಮ. ಮಕ್ಕಳ ಅನಾವಶ್ಯಕ ಅಕ್ಕರತೆಗಾಗಿ ಶಿಲ್ಕಿನಲ್ಲಿಯ ಹಣವನ್ನು ಬಹಳವಾಗಿ ವೆಚ್ಚ ಮಾಡಬೇಕಾದೀತು. ಅವರೂ ಬಹಳ ಪ್ರೀತಿಯಿಂದ ನಡೆದುಕೊಳ್ಳುವರು. ನಿಮ್ಮ ಮಕ್ಕಳ ಲಗ್ನವಾಗಿದ್ದರೆ ಅವರು ತಮ್ಮ ಅಪ್ತೇಷ್ಟರಿಗೂ ಲಾಭ ಮಾಡಿಕೊಡುವರು. ಇನ್ನೂ ಲಗ್ನವಾಗತಕ್ಕ ಮಕ್ಕಳಿದ್ದರೆ ನಿಮ್ಮ ಮನಸಿನಂತೆ ಅವರ ಲಗ್ನವಾಗಿ ದೊರೆಯತಕ್ಕ ಅಳಿಯ ಸೊಸೆಂದಿರು ಮುತ್ತಿನಂತಿರುವದರಿಂದ ನಿಮ್ಮ ಆನಂದ ಗಗನದಲ್ಲಿಯೂ ಹಿಡಿಸದಾದೀತು. ಜುಲೈ ೩೦ ರಿಂದ ಅಕ್ಟೋಬರ ೨೫ ರ ವರೆಗೆ ನಿಮಗೆ ಇಲ್ಲವೆ ನಿಮ್ಮ ಸಂತತಿಗೆ ಸ್ವಲ್ಪ ಕ್ಲೇಶ. ಕನ್ನೆಯರಿಗೆ ಮಾರ್ಚ ೧೨ ರ ವರೆಗೆ, ಆ ಮೇಲೆ ಎಪ್ರಿಲ ೨೨ ರಿಂದ ಮಾರ್ಚ ೩೦ ರ ಸುಮಾರಕ್ಕೆ ನಿರ್ವಿಘ್ನ ರೀತಿಯಿಂದ ಮದುವೆಯಾಗಿ ಮುತ್ತಿನಂಥ ಗಂಡನು ದೊರೆಯುವನು. ಗರ್ಭಿಣಿಯರಿಗೆ ಮಾರ್ಚ ೧೨ ರ ವರೆಗೆ ಹೆರಿಗೆ ಸುಖವಾಗಿ ಆಗುವದು ಆ ನಂತರ ಸ್ವಲ್ಪ ಕಷ್ಟವಿದ್ದರೂ ಹೆಚ್ಚಾಗಿ ಹೆಣ್ಣು ಹುಟ್ಟುವದರಿಂದ ಅಸಮಾಧಾನಪಟ್ಟುಕೊಳ್ಳುವರು.

ವಿದ್ಯಾರ್ಥಿಗಳಲ್ಲಿ ಅನೇಕರು ತೇರ್ಗಡೆ ಹೊಂದದೆ ಇರಲಾರರು. ಮಾರ್ಚ ೧೨ ರ ಒಳಗೆ ಪರೀಕ್ಷೆಗೆ ಕಟ್ಟುವವರಿಗೆ ಪ್ರಶ್ನೆಗಳು ಸುಲಭವಾಗಿದ್ದಷ್ಟು ಆ ನಂತರ ಪರೀಕ್ಷೆಗೆ ಕಟ್ಟುವವರಿಗೆ ಇರಲಾರವು. ಅದರಲ್ಲಿ ಕೆಲವರು ಭೂಮಿತಿ, ಗಣಿತ ವಿಷಯಗಳಲ್ಲಿ ಅಯಶಸ್ವಿಗಳಾಗುವರು. ಮೆಡಿಕಲ್ ಕಾಲೇಜದ ವಿದ್ಯಾರ್ಥಿಗಳಿಗೆ ಈ ವರ್ಷ ಉತ್ತಮ ಯಶಪ್ರದವಾಗಿದೆ.

## ಧನು

ಈ ರಾಶಿಯ ಸ್ತ್ರೀಪುರುಷರು ಆರೋಗ್ಯದ ಬಗ್ಗೆ ಚಿಂತಿಸುವ ಕಾರಣವಿಲ್ಲ; ಅದು ಉತ್ತಮ ಉಳಿಯುವದು. ಆದರೆ ಮಾರ್ಚ ೧೨ ರಿಂದ ತಾಯಿ ಇದ್ದರೆ ಅವಳಿಗೆ ಮತ್ತು ೩೦ ಅಗಸ್ಟದಿಂದ ತಂದೆ ಇದ್ದರೆ ಅವನಿಗೆ ಕಾಯಿಲೆಯಾಗಿ ಮಾತೃವಿಯೋಗವಾಗುವ ಸಂಭವವೂ ಉಂಟು. ಅದರಂತೆ ಮಕ್ಕಳಲ್ಲಿ ಕೆಲವರಿಗೆ ಮಾರ್ಚ ೨೨ ರಿಂದ ಮೇ ೩೦ರೊಳಗೆ ಕಾಯಿಲೆ ಇಲ್ಲವೆ ಅಪಘಾತವಾಗುವ ಅಂಜಿಕೆ. ಗಂಡುಮಕ್ಕಳು ನಿಮ್ಮ ಮನಸ್ಸಿನಂತೆ ನಡೆದುಕೊಂಡರೆ ಹೆಣ್ಣುಮಕ್ಕಳ ನಡೆವಳಿ ನಿಮ್ಮ ಮನಸ್ಸಿಗೆ ಬರುವದಿಲ್ಲ. ಪ್ರಾಪಂಚಿಕ ಸುಖ ಅಗಷ್ಟ ೩೦ ರಿಂದ ಮುಂದೆ ಬಹಳ ಚೆನ್ನಾಗಿ ದೊರೆಯುವದು. ಮುಖ್ಯವಾಗಿ ಹೆಂಡತಿಯೊಡನೆ ಪೂರ್ಣ ಮತ್ಯೈಕ್ಯವುಳಿಯುವದರಿಂದ ಉಳಿದುದನ್ನೆಲ್ಲ ಸಹಿಸುವ ಮನೋಧೈರ್ಯ ಬರುವದು. ಮಾರ್ಚ ೧೨ ರ ವರೆಗೆ ಮತ್ತು ಮುಂದೆ ನಿಮ್ಮ ಗುಂಪಿನಲ್ಲಿಯ ಉಭಯತರಿಗೆ ಪ್ರಿಯರಾದ ಜನರ ಸಹವಾಸ ಬಹಳ ದಿನ ಲಭಿಸುವದು. ಮಾರ್ಚ ೧ ರಿಂದ ಮಿತ್ರರಲ್ಲಿ ಅನೇಕರ ವಿವಾಹ ಇಲ್ಲವೆ ಮಕ್ಕಳು ಹುಟ್ಟುವಂಥ ಉತ್ಕರ್ಷದ ಸಂಗತಿಗಳು ಸಂಭವಿಸುವವು. ಹೆಂಡತಿಯ ಬಂಧು ವರ್ಗದಲ್ಲಿಯೂ ಹೀಗೆಯೇ ಸಂತೋಷದ ಸಂಗತಿಗಳು. ಆದರೆ ನಿಮ್ಮ ತಪ್ಪಿನಿಂದಲೆ ಕೆಲ ಮಿತ್ರರು ನವಂಬರ ವರೆಗೆ ಅನಂತರ ಜೂನ ೨೦ ರಿಂದ ಜುಲೈ ೧೫ ಮತ್ತು ೨೨, ಸಪ್ಟಂಬರ ೨೮ ರಿಂದ ಅಕ್ಟೋಬರ ೨೨ ರ ವರೆಗೆ ಸ್ವಲ್ಪ ವಿರೋಧಿಸುವ ಸಂಭವ. ಮಕ್ಕಳ ಲಗ್ನವಾಗುವದಿದ್ದರೆ ಮಾರ್ಚ ೧೨ ರಿಂದ ಮೇ ೩ ಮತ್ತು ಜೂನ ೩೦ ರಿಂದ ಅಕ್ಟೋಬರ ೨೫ ರ ವರೆಗೆ ಆಗುವ ಸಂಭವ.

ಮನೆಯಲ್ಲಿಯು ಅನೇಕರ ವರ್ತನೆ ನೆಟ್ಟಗಿದ್ದರೂ ಮೇಲಿಂದ ಮೇಲೆ ಅವರು ಕಾಯಿಲೆ ಬೀಳುವದರಿಂದ ಆಯುತ್ತ ಹೊತ್ತಿನಲ್ಲಿ ನೀವೇ ಕೆಲಸ ಮಾಡಬೇಕಾಗುವದು. ಹಳೇ ನೋಕರರು ಇದಕ್ಕಾಗಿಯೇ ಬಿಡುವದರಿಂದ ಹೊಸಬರನ್ನು ನೇಮಿಸಿಕೊಳ್ಳಬೇಕಾಗುವದು. ವಾಹನಗಳಿದ್ದರೆ ಮೇಲಿಂದ ಮೇಲೆ ಕೆಟ್ಟು ದುರಸ್ತಿಯ ವೆಚ್ಚ ಬಹಳ ಭಾರದ್ದಾಗುವದು. ದನಕರುಗಳಿಗೂ ಈ ವರ್ಷ ಬೇನೆಯ ಭೀತಿ. ಪತಿಪತ್ನಿಯರಲ್ಲಿ ಉತ್ತಮ ಪ್ರೇಮವಿದ್ದರೂ ನಿಮ್ಮ ಪತಿಮನಸ್ಸು ಪರಸ್ತ್ರೀಯ ಅಭಿಲಾಷೆಯಲ್ಲಿಯೇ ನಿರತವಾಗುವದು

ಉದ್ಯೋಗ ಧಂದೆಗಳಿಗೆ ಈ ವರ್ಷ ಬಹಳ ಅನುಕೂಲ. ಅವರಿಗೆ ವಿಶೇಷಲಾಭ ಮತ್ತು ಯಶಸ್ಸಿನಿಂದ ಮುಗಿಲುಮುಟ್ಟುವಂತೆ ಅನಿಸುವದು. ಬುದ್ಧಿ ಜೀವಿಗಳಿಗೂ ಬಹಳ ಅನುಕೂಲ. ವ್ಯಾಪಾರಿಗಳಿಗೆ ಕಡಮೆದರದಲ್ಲಿ ಸರಕು ಸಿಕ್ಕು ತೇಜಿಯಲ್ಲಿ ಮಾರಾಟವಾಗುವದರಿಂದ ಅವರ ಧೋರಣ ತಪ್ಪಿದರೂ ಲಾಭ ಯಶಸ್ಸು ಇದ್ದುದೆ. ಅದರಲ್ಲಿಯೂ ಕಬ್ಬಿಣ ಸಾಮಾನ, ಬೆಲ್ಲ, ತಂಬಾಕು ಮೊದಲಾದವುಗಳ ವ್ಯಾಪಾರ ಮಾಡುವವರಿಗೆ ಹೆಚ್ಚು ಲಾಭ.

ನೋಕರ ವರ್ಗದವರಿಗೂ ಈ ವರ್ಷ ಉತ್ತಮ. ವಶೀಲಿ ಮುಂತಾದ್ದಲ್ಲದೆ ಬಡತಿ ದೊರೆಯುವದು. ವರಿಷ್ಠರು ನಿಮ್ಮ ತಂದೆಯಂತೆ ನಿಮ್ಮ ಕಲ್ಯಾಣವನ್ನೇ ಮಾಡುವರು. ಆದರೆ ಅಗಸ್ಟ ೩೦ ಕ್ಕೆ ಇಂಥ ದಯಾಳು ವರಿಷ್ಠರು ಒಮ್ಮೆಲೆ ಬದಲಿ ಆಗಿ ಹೋಗುವದರಿಂದ ನಿಮಗದು ಬಹಳ ದುಃಸಹವಾಗುವ ಯೋಗವಿದೆ. ನೀವಾದರೂ ವರ್ಗವಾಗಿ ಹೋಗುವ ಸಂಭವ ಮಾರ್ಚ ೧೨ರ ವರೆಗೆ ವಿಶೇಷ. ಬದಲಿಯಾದರೆ ಕೆಲಸದ ದೃಷ್ಟಿಯಿಂದ ಸ್ವಲ್ಪ ತೊಂದರೆಯೆನಿಸಿದರೂ ಇತರ ಸುಖ ಸೌಕರ್ಯಗಳ ದೃಷ್ಟಿಯಿಂದ ಒಳ್ಳೆ ಅನುಕೂಲ. ಧಂದೆ ಇರಲಿ ನೋಕರಿ ಇರಲಿ ಪತ್ತು ಪ್ರತಿಷ್ಠೆ ಚೆನ್ನಾಗಿ ಉಳಿದು ಕೇವಲ ದ್ರವ್ಯಲಾಭದ ದೃಷ್ಟಿಯಿಂದ ಅಕ್ಟೋಬರ ೩೦ ರಿಂದ ನವಂಬರ ೨೮, ಡಿಸೆಂಬರ ೧೫ ರಿಂದ ಜನೇವರಿ ೧೪, ಮಾರ್ಚ ೧೨ ರಿಂದ ೨೯, ಮೇ ೨೫ ರಿಂದ ಜೂನ ೨೦. ೧೬ ಜುಲೈಯಿಂದ ಅಗಸ್ಟ ೧೦, ಸಪ್ಟೆಂಬರ ೪ ರಿಂದ ೨೮ ಸಪ್ಟಂಬರ ಮತ್ತು ಆಕ್ಟೋಬರ ೨೩ ರ ನಂತರದ ಕಾಲವು ಹೆಚ್ಚು ಉತ್ತಮ ಹೋಗುವದು. ಅಗಸ್ಟ ೩೦ ರ ನಂತರ ಶಾಶ್ವತ ಸ್ವರೂಪದ ಸ್ಥಾವರ ಜಂಗಮ ಸಂಗ್ರಹವನ್ನು ಬಹಳ ಮಾಡಲಾಗುವದು. ಒಕ್ಕಲಿಗರಿಗೆ ಈ ವರ್ಷ ಒಳ್ಳೆ ಲಾಭದ್ದಾಗಿ ಪರಿಣಮಿಸುವದು. ಅದರಂತೆ ಲೇಖಕರು ದೈನಿಕ ವೃತ್ತಪತ್ರದ ಸಂಪಾದಕ ವ್ಯಾಖ್ಯಾತರು ಧಾರ್ಮಿಕ ಪ್ರವಚನ ಕಾರರು ಈ ವರ್ಷ ಪ್ರಗತಿಹೊಂದುವರು

ಈ ರಾಶಿಯ ಸ್ತ್ರೀಯರ ಸಂಸಾರ ಬಹಳ ಸುಖದಿಂದ ಸಾಗುವದು. ಮನೆಯ ಮುಖಂಡತ್ವವು ಅವರಿಗೇ ದೊರೆಯುವದು ಗಂಡನು ನೀವು ಹೇಳಿದಂತೆಯೇ ನಡೆಯುವನು. ಕುಮಾರಿಕೆಯರ ಲಗ್ನವು ಮಾರ್ಚ ೧೨ ರ ನಂತರ ಆಗಿಯೇ ತೀರುವದು. ಮನಸ್ಸಿಗೆ ಒಗ್ಗುವಂಥ ವರನೇ ಸಿಕ್ಕುವನು. ಆದರೆ ಬಹುಶಃ ಈ ಎಲ್ಲ ಕುಮಾರಿಕೆಯರಿಗೆ ಅತ್ತೆ ಇಲ್ಲದ ಮನೆದೊರಕುವದು. ಗೆಳತಿಯರ ಸುಖ ಬಹಳ ದೊರೆತು ಪರಸ್ಪರರ ಹಿತ ಸಾಧಿಸುವದು ಪ್ರಾಪಂಚಿಕ ಸುಖಕ್ಕೆ ೨೯ ನವಂಬರದಿಂದ ೩೦ ಮಾರ್ಚ, ೧೫ ಜುಲೈಯಿಂದ ಅಗಸ್ಟ ೧೦ ರ ನಡುವಿನ ಅವಧಿಯನ್ನು ಬಹಳ ಸುಖದಿಂದ ಕಳೆಯುವಿರಿ. ಗರ್ಭಿಣಿಯರಿದ್ದವರು ಮಾರ್ಚ ೨೨ ರಿಂದ ಮೇ ೩೦ ರೊಳಗಾಗಿ ಪ್ರಸೂತರಾದರೆ ಸ್ವಲ್ಪ ತೊಂದರೆಯಾಗಬಹುದು ಆದರೆ ಉಳಿದ ಅವಧಿಯಲ್ಲಿ ಸುಖಪ್ರಸವವಾಗುವದು ಮಾರ್ಚ ೨೧ ರ ವರೆಗೆ ಕನ್ಯಾ ಮತ್ತು ಅನಂತರ ಪುತ್ರ ಪ್ರಾಪ್ತಿಯಾಗುವ ಸಂಭವವಿದೆ.

ವಿದ್ಯಾರ್ಥಿಗಳಿಗೆ ಮಾರ್ಚ ೧೨ ರ ವರೆಗೆ ಸಾಮಾನ್ಯವೆ ಆದರೆ ಅನಂತರ ಬಹುಶಃ ಯಶ ನಿಶ್ಚಿತ. ಈ ವರ್ಷ ದಿಸೆಂಬರ ೧೦ ರ ವರೆಗೆ, ಫೆಭ್ರುವರಿ ೧೩ ರಿಂದ ಮಾರ್ಚ ೨೨ ರ ವರೆಗೆ, ಎಪ್ರಿಲ ೨೨ ರಿಂದ ಮೇ ೩೦ ರ

ವರೆಗೆ, ಜೂನ ೧೫ ರಿಂದ ಜುಲೈ ೧೪ ರ ವರೆಗೆ, ಅಗಸ್ಟ ೧ ರಿಂದ ಅಕ್ಟೋಬರ ೨೫ ರ ವರೆಗೆ ಯಾರ ಪರೀಕ್ಷೆ ಆಗುವದಿದೆಯೋ ಆ ವಿದ್ಯಾರ್ಥಿಗಳಿಗೆ ಯಶಸ್ಸು ನಿಶ್ಚಿತವೆಂದು ತಿಳಿಯತಕ್ಕದ್ದು.

## ಮಕರ

ಈ ರಾಶಿಯ ಜನರು ಅಗಸ್ಟ ೩೦ ರ ವರೆಗೆ ಆರೋಗ್ಯದ ಬಗ್ಗೆ ಬಹಳ ದಕ್ಷತೆ ವಹಿಸಬೇಕಾಗುವದು. ಅದರಲ್ಲಿಯೂ ಮಾರ್ಚ ೨೨ ರಿಂದ ಎಪ್ರಿಲ ೨೨ ರ ವರೆಗೆ ಆಹಾರವಿಹಾರಗಳಲ್ಲಿ ಬಹಳ ನಿಯಮಿತರಾಗಿರಬೇಕು. ಅಲ್ಲದೆ ಅಗಸ್ಟ ೩೦ ರ ವರೆಗೆ ಇರುವ ೮ ನೇ ಶನಿ ಕ್ಷುಲ್ಲಕಕಾರಣಗಳಿಗಾಗಿ ಕೂಡ ನಿಮ್ಮನ್ನು ಬಹಳ ಉದಾಸೀನಗೊಳಿಸುವನು. ಪ್ರಾಪಂಚಿಕಸುಖ ಒಟ್ಟಾರೆ ಅನುಕೂಲ. ಮಕ್ಕಳು ಮರಿ ನಿಮ್ಮ ವಚನದಂತೆ ನಡೆಯಬಹುದು. ಮನಸ್ಸಿನಲ್ಲಿಯ ಉದ್ದೇಶ ಸಾಧನೆಗಾಗಿ ಎಷ್ಟೇ ಪ್ರಯತ್ನಪಟ್ಟರೂ ಸಕಾಲದಲ್ಲಿಯೆ ಅದು ಸಿದ್ಧವಾಗುವದು. ಬುದ್ಧಿಯ ಕೆಲಸಗಳು ಎರಡನೆಯವರ ಮೇಲೆ ವರ್ಚಸ್ಸು ಕೂಡಿಸುವವು. ಹೀಗೆಲ್ಲ ಅನುಕೂಲತೆಗಳಿದ್ದರೂ ನಿಮ್ಮ ಮನಸ್ಸು ನಿರರ್ಥಕವಾಗಿ ಅಸಂತುಷ್ಟವುಳ್ಳದ್ದು ಸಂಶಯಪಿಶಾಚಿಯು ಬಾಧಿಸಹತ್ತುವದು. ಈ ಬಗೆಯದಾದ ಸ್ವಭಾವ ಮಾರ್ಚ ೧೨ ರಿಂದ ಅಗಸ್ಟ ೩೦ ರ ಅವಧಿಯಲ್ಲಿ ಬಹಳ ಕಾಣಿಸಿಕೊಳ್ಳುವದು. ಮಕ್ಕಳು ಮರಿಗಳ ಲಗ್ನ ಆಗುವದಿದ್ದರೆ ಮಾರ್ಚ ೧೨ ರ ವರೆಗೆ, ಸ್ವತಃ ನಿಮ್ಮದೆ ಆಗುವದಿದ್ದರೆ ಎಪ್ರೀಲ ೨೨ರ ನಂತರ ಆಗುವ ಯೋಗವಿದೆ. ಆದರೆ ಪ್ರತ್ಯಕ್ಷ ಸಮಾರಂಭವು ಅನಪೇಕ್ಷಿತ ಕಾರಣದಿಂದ ಸ್ವಲ್ಪ ವಿರಸದಲ್ಲಿಯೇ ಕೊನೆಗೊಳ್ಳುವದು. ಮಾರ್ಚ ೧೨ರ ನಂತರ ಬಂಧುಗಳೊಡನೆ ಬಹಳ ಅನ್ಯೈಕ್ಯ ಆಪ್ತರು ಮತ್ತು ನೆರಿಯವರು ಕೂಡ ೨೨ ಮೇ ದಿಂದ ೩೦ ಮೇ ವರೆಗೆ ಬಹಳ ತೊಂದರೆ ಕೊಡುವರು ನೀವಾದರೂ ಉಳಿದವರ ಕೂಡ ಬಹುಶಃ ಕೊಂಕುನುಡಿಗಳಿಂದಲೆ ಮಾತಾಡುವದು, ವರ್ತನವೂ ಅದರಂತೆಯೇ. ಮಕ್ಕಳು ಮರಿಗಳ ಉತ್ಕರ್ಷಕ್ಕೆ ಈ ವರ್ಷ ಬಹಳ ಅನುಕೂಲ. ಅದರಲ್ಲಿಯೂ ನವಂಬರ ೩ ರ ವರೆಗೆ ಮತ್ತು ಅನಂತರ ನವಂಬರ ೨೯ ರಿಂದ ಮಾರ್ಚ ೩೦, ಎಪ್ರಿಲ್ ೨೯ ರಿಂದ ಮೇ ೨೫ ರ ವರೆಗೆ ಜೂನ ೨೦ ರಿಂದ ಜುಲೈ ೧೫, ಅಗಸ್ಟ ೧೦ ರಿಂದ ೩೦, ಮತ್ತು ಸಪ್ಟಂಬರ ೨೮ ರಿಂದ ಅಕ್ಟೋಬರ ೨೨ ರ ವರೆಗೆ ಒಳ್ಳೆ ಉತ್ಕರ್ಷದ ಕಾಲ. ನಿಮ್ಮ ಮಕ್ಕಳಲ್ಲಿ ಒಬ್ಬರಾದರೂ ಒಳ್ಳೆ ಪ್ರಸಿದ್ಧಿಗೆ ಬರುವದರಲ್ಲಿ ಸಂಶಯವೇ ಇಲ್ಲ.

ಉದ್ಯೋಗ ಧಂದೆಯವರಿಗೆ ಮೇ ೩೦ ರ ವರೆಗೆ ಬಹಳ ತೊಂದರೆಯಿದ್ದರೂ ಮುಂದೆ ಸುಪ್ರಭಾತವುಂಟಾಗಿ ಅಗಸ್ಟ ೩೦ ರಿಂದ ಬರುವ ೯ನೇ ಶನಿಯಿಂದ ಉತ್ಕರ್ಷ ಹೆಚ್ಚುತ್ತ ನಡೆಯುವದು. ಉದ್ಯೋಗ ಧಂದೆಯವರಿಗೆ ೩೦ ಮೇಯಿಂದ ೩೦ ಜುಲೈ ಮತ್ತು ಅಕ್ಟೋಬರ ೨೫ ರ ನಂತರದ ಕಾಲವು ದ್ರವ್ಯ ಲಾಭಕ್ಕೆ ಬಹಳ ಉತ್ತಮ ಕಾಲವು. ಎಣ್ಣೆ, ಉಪ್ಪು, ಕಟ್ಟಿಗೆ ಇದ್ದಲಿ, ಕಲ್ಲು, ಫರ್ನಿಚರ, ಔಷಧ ಮುಂತಾದವುಗಳ ಧಂದೆ ಮಾಡುವವರಿಗೆ ಹೆಚ್ಚು ಉತ್ಕರ್ಷ ಮತ್ತು ಲಾಭವಾಗುವದು. ನೋಕರವರ್ಗದವರಿಗೂ ಮಾರ್ಚ ೧೨ರಿಂದ ಬಹಳ ಸುಖಕಾರಕ- ಬದಲಿ ಆಗುವದಿದ್ದರೆ ಜುಲೈ ೩೦ ರಿಂದ ೨೫ ಆಕ್ಟೋಬರದೊಳಗಾಗಿ ಮತ್ತು ನಿಮ್ಮ ಮನಸ್ಸಿಗೆ ಒಪ್ಪುವಂಥ ಸ್ಥಾನಕ್ಕೇ ಆಗುವದು. ಮಾರ್ಚ ೨೨ ರಿಂದ ಎಪ್ರಿಲ ೨೨ ವರಿಷ್ಠರು ಮತ್ತು ಎಪ್ರೀಲ ೨೨ ರಿಂದ ಮೇ ೩೦ ರ ವರೆಗೆ ಕೆಳಗಿನ ನೋಕರರು ನಿಮ್ಮ ಮೇಲೆ ಬಹಳ ರೊಚ್ಚಿಗೇಳುವರು. ಆದರೆ ಉಳಿದ ಸಮಯದಲ್ಲಿ ಅತ್ಯಂತ ಸೌಜನ್ಯದಿಂದ ವರ್ತಿಸುವರು. ಮೇಲಿನ ಗ್ರೇಡ ಇಲ್ಲವೆ ಬಡತಿ ಸಿಕ್ಕುವದಕ್ಕಾಗಿ ಬಹಳ ತೊಂದರೆ ಮತ್ತು ವೆಚ್ಚ ಸಹಿಸಬೇಕಾಗುವದು. ಆದರೆ ಕೊನೆಯಲ್ಲಿ ಮನಸ್ಸಿನಲ್ಲಿ ಇದ್ದಂತೆಯೇ ಆಗುವದು. ಸಂಬಳವಲ್ಲದೆ ಬೇರೆ ಅವಾಂತರ ರೀತಿಯಿಂದ ಯಾರಿಗೆ ಹಣ ದೊರೆಯಲಿದೆಯೋ ಅವರು ಮಾತ್ರ ಅಗಸ್ಟ ೩೦ ರ ವರೆಗೆ ಅದನ್ನು ವಿಷಸಮಾನವೆಂದು ತಿಳಿದುಕೊಳ್ಳಬೇಕು. ನೋಕರಿ ಇಲ್ಲವೆ ಧಂದೆಯಲ್ಲಿ ಎಷ್ಟೇ

ಹಣ ದೊರೆತರೂ ಬಗೆಬಗೆಯ ವೆಚ್ಚ ಬಂದು ಅದನ್ನು ಸಹಿಸಬೇಕಾದರೆ ಸಾಕುಬೇಕಾಗಿ ಹೋಗುವದು. ಉದ್ಧರಿ ಕೊಡಲಾದ್ದು ಹೆಚ್ಚುವದು. ಈ ಪರಿಸ್ಥಿತಿಯಲ್ಲಿ ನಾಲ್ಕು ದುಡ್ಡು ಉಳಿಸುವದಂತೂ ಅಲ್ಲಿಯೇ ಉಳಿಯಿತು. ಅದರೂ ಆಗಷ್ಟ ೩೦ ರಿಂದ ಕೊಡ ತಕ್ಕೊಳ್ಳುವದನ್ನು ಹೇಗೋ ಸಾಗಿಸಬಹುದು. ವೆಚ್ಚವೂ ಕಡಿಮೆಯಾಗಬಹುದು. ಅಸ್ತಿಯಲ್ಲಿ ಮಾತ್ರ ಈ ಅವಧಿಯಲ್ಲಿ ಏನೂ ಸುಧಾರಣೆ ಮಾಡಲು ಹೋಗಬೇಡಿರಿ ಏಕೆಂದರೆ ಒಂದು ದುಡ್ಡು ವೆಚ್ಚವಾಗುವಲ್ಲಿ ನಾಲ್ಕು ದುಡ್ಡು ವೆಚ್ಚ ಮಾಡಬೇಕಾಗುವದು. ಅದರೂ ಮನಸ್ಸಿನಂತೆ ಕಾರ್ಯವಾಗದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಮಾರ್ಚ ೧೨ ರ ವರೆಗೆ ಅನಂತರ ಆಗಸ್ಟ ೩೦ ರಿಂದ ಮುಂದೆ ಬಹಳ ಅನುಕೂಲವಿದೆ. ಮಿತ್ರ ಸುಖವು ಮೇ ೩೦ ರಿಂದ ಬಹಳ ಅನುಕೂಲ. ಮಾರ್ಚ ೨೨ ರಿಂದ ಮೇ ೩೦ ರ ವರೆಗೆ ಅಪ್ತರಲ್ಲಿ ಒಬ್ಬಿಬ್ಬರ ಮೇಲೆ ಶಾರೀರಿಕ ಇಲ್ಲವೆ ಅರ್ಥಿಕ ಆಪತ್ತಿಯು ಬರುವ ಸಂಭವವಿದೆ.

ಈ ರಾಶಿಯ ಹೆಂಗಸರಿಗೆ ಪತಿ ಮತ್ತು ಮಕ್ಕಳ ಸುಖ ಚೆನ್ನಾಗಿ ದೊರೆತರೂ ಮನೆಯಲ್ಲಿಯ ಇತರ ಜನರಿಂದ ಬಹಳ ತೊಂದರೆ ಮತ್ತು ಅಪಮಾನವಾಗುವದರಿಂದ ಮನಸ್ಸು ಯಾವಾಗಲೂ ಉದ್ರಿಕ್ತವೇ ಇರುವದು. ಗಂಡನ ಏಕನಿಷ್ಠ ಪ್ರೇಮದ ಬಗ್ಗೆಯೂ ಕೆಲ ಸಲ ಸಂಶಯ ಬರುವದು. ಮಾಸಿಕ ರಜೋದರ್ಶನದಿಂದಲೂ ಸ್ವಲ್ಪ ತೊಂದರೆ. ಗರ್ಭವತಿಯರಿದ್ದರೆ ಬಯಕೆ ಬಹಳ. ಹಡೆಯುವವರಿದ್ದರೆ ಮಾರ್ಚ ೧೨ ರ ವರೆಗೆ ಇಲ್ಲವೆ ಮೇ ೩೦ ರ ನಂತರ ಹಡೆದರೆ ಬಹಳ ಸುಖದಿಂದ ಹಡೆಯುವರು. ಮಾರ್ಚ ೧೨ ರ ವರೆಗೆ ಗಂಡು ಮಗು ಮತ್ತು ಅನಂತರ ಕನ್ಯಾ ಹುಟ್ಟುವ ಯೋಗ ಬಹಳವಿದೆ. ಹುಡುಗಿಯ ಲಗ್ನವಾಗುವದಿದ್ದರೆ ಮಾರ್ಚ ೧೨ ರ ವರೆಗೆ ಇಲ್ಲದಿದ್ದರೆ ಎಪ್ರಿಲ ೨೯ ರಿಂದ ಮೇ ೨೫, ೨೦ ಜೂನದಿಂದ ೧೫ ಜುಲೈಯೊಳಗಾಗಿ ಆಗಬಹುದು. ಗಂಡ ಹದಿನಾರಾಣೆ ಮನಸ್ಸಿಗೆ ಬರದಿದ್ದರೂ ಹತ್ತು ಹನ್ನೆರಡಾಣೆ ಮಟ್ಟಿಗಾದರೂ ಮನಸ್ಸಿಗೆ ಬರುವನು.

ವಿದ್ಯಾರ್ಥಿಗಳಿಗೆ ಮಾತ್ರ ಅಭ್ಯಾಸದಲ್ಲಿ ಅನೇಕ ಅಡಚಣಿಗಳು ಬಂದರೂ ನಿಗ್ರಹದಿಂದ ಅಭ್ಯಾಸ ಮಾಡಿ ಪರೀಕ್ಷೆಗೆ ಕಟ್ಟಿದವರಿಗೆ ಸಹಸಾ ಅಪಯಶಸ್ಸು ಬರಲಾರದೆಂಬುದು ನಿಶ್ಚಿತ. ಅದರಲ್ಲಿಯೂ ಮಾರ್ಚ ೧೨ ರ ವರೆಗೆ ಮತ್ತು ಅನಂತರ ಎಪ್ರಿಲ ೨೫ ರಿಂದ ಮೇ ೧೫ ಜೂನ ೬ ರಿಂದ ೨೬ ಜೂನ, ಜುಲೈ ೧೩ ರಿಂದ ಆಗಸ್ಟ ೧ ಮತ್ತು ಅಕ್ಟೋಬರ ೩ ರಿಂದ ೨೪ ಅಕ್ಟೋಬರದೊಳಗಾಗಿ ಪರೀಕ್ಷೆ ಇದ್ದವರು ನಿಶ್ಚಯವಾಗಿ ನಿಶ್ಚಯವಾಗಿ ಯಶಸ್ವಿಯಾಗುವರು.

## ಕುಂಭ

ಈ ರಾಶಿಯ ಜನರ ಆರೋಗ್ಯವು ಆಗಷ್ಟ ೩೦ ರಿಂದ ಬರುವ ೮ ನೇ ಶನಿಯ ಮೂಲಕ ಇರಬೇಕಷ್ಟು ಅನುಕೂಲವುಳಿಯುವದಿಲ್ಲ. ಒಂದು ಕ್ಷಣ ಚೆನ್ನಾಗಿ ಇದ್ದರೆ ಮರುಕ್ಷಣದಲ್ಲಿಯೆ ಕೆಟ್ಟ ಎನಿಸುವದು. ಅದರೆ ಬೇನೆ ಇಂಥದೇ ಎಂಬುದು ಮಾತ್ರ ನಾಮಾಂಕಿತ ವೈದ್ಯ ಡಾಕ್ಟರಿಗೂ ತಿಳಿಯದು. ಈ ವರ್ಷದ ಕೊನೆಯ ವರೆಗೆ ಇರುವ ೮ ನೇ ಕೇತುವಿನಿಂದ ಕೆಲ ಕಾರಣಗಳಿಂದ ಪಿಶಾಚ ಪೀಡೆ ಇಲ್ಲವೆ ಮಾನಸಿಕ ರೋಗವೂ ಬರಬಹುದು. ಅದರೂ ಗಂಡಾಂತರದ ಅಂಜಿಕೆ ಸ್ವಲ್ಪವೂ ಇಲ್ಲ. ಏಕೆಂದರೆ ಶನಿ ಮತ್ತು ಕೇತು ದುರ್ಬಲ ಇದ್ದಾಗ ಗುರು ಬಹಳ ಅನುಕೂಲ ಇರುವನು. ೧೨ ಮಾರ್ಚದಿಂದ ಪ್ರಾಪಂಚಿಕ ಸುಖ ಬಹಳ ಉತ್ತಮ ದೊರೆಯುವದು. ಅದರೆ ಹೆಂಡತಿ ಮತ್ತು ಮಕ್ಕಳು ಸಿಟ್ಟಿನಲ್ಲಿಯೆ ಇರುವರು. ಸರಳವಾದ ಸಂಗತಿಗಳೂ ತೊಂದರೆಯೆನಿಸುವವು. ಎರಡನೆಯವರೊಡನೆ ಮಾತಾಡುವದು ಬೇಕೆನಿಸುವದಿಲ್ಲ. ಅಪ್ರಿಯ ಜನರ ಸಹವಾಸ ಮಾಡಬೇಕಾದ ಪ್ರಸಂಗ. ಡಿಸೆಂಬರ ೧೦ ರಿಂದ ಫೆಬ್ರುಅರಿ ೧೩ ಮತ್ತು ಮೇ ೩೦ ರಿಂದ ಜುಲೈ ೩೦ ರ ವರೆಗೆ ಈ ಪ್ರಸಂಗ ಮೇಲಿಂದ ಮೇಲೆ ಬರುವದು. ಮಾರ್ಚ ೧೨ ರ ವರೆಗೆಯಂತೂ ಮನೆಯಲ್ಲಿ ವಿಪರೀತ ಕಲಹ. ಅಲ್ಲಿಯ ವರೆಗೆ ಧಾರ್ಮಿಕ ಮಂಗಳ ಕಾರ್ಯಗಳಾವೂ ನಡೆಯುವುದಿಲ್ಲ. ಅವನ್ನು ಮುಂದಕ್ಕೆ ಹಾಕಬೇಕಾಗುವದು" ೨೨ಮಾರ್ಚದಿಂದ ಎಪ್ರಿಲ ೨೨ರ ವರೆಗೆ ಹೆಂಡತಿಗೂಡಮಾತೇಇಲ್ಲ. ಅವಳ ಇಲ್ಲವೆ ನಿಮ್ಮ ಪ್ರವಾಸದಮೂಲಕಪರಸ್ಪರ ಸಹವಾಸವು ತಪ್ಪುವದು. ಡಿಸೆಂಬರ ೧೦ ರ ವರೆಗೆ ಇಲ್ಲವೆ ಜನೆವರಿ ೧೮ ರಿಂದ ಫೆಬ್ರುಅರಿ ೧೨ ರ ವರೆಗೆ ಅವಳಿಗೆ ಅಲ್ಪಸ್ವಲ್ಪ ಅಪಘಾತದ ಅಂಜಿಕೆಯೂ ಇದೆ. ಮನೆಯಲ್ಲಿಯ ಯಾವದೊಂದು ವಸ್ತುವನ್ನು ನೀವು ಇಲ್ಲವೆ ಅವಳು ಅಗ್ರಹದಿಂದ ಮಾರಾಟಮಾಡುವ ಸಂಭವ. ಪರಸ್ಪರರ ಮಾತಿನಲ್ಲಿಯೂ ವಿರಸ. ಮುಂದೆಯೂ ಅಶುಭದ ಅಂಜಿಕೆ. ಮಾರ್ಚ ೧೨ ರ ನಂತರ ಮಕ್ಕಳ ಲಗ್ನಕ್ಕೆ ತೊಂದರೆಯೆನಿಸದು. ಅದರೆ ನಿಮಗೆ ಅನುಕೂಲವೆನಿಸಿದ ಸ್ಥಳವು ಹೆಂಡತಿಯ ಮನಸ್ಸಿಗೆ ಬಾರದು. ಅವಳ ಮನಸ್ಸಿಗೆ ಬಂದ ಮನೆ ನಿಮಗೆ ತ್ಯಾಜ್ಯವೆನಿಸುವದು ಹೀಗಾಗಿ ಪ್ರತ್ಯಕ್ಷ ಕಾರ್ಯದಲ್ಲಿ ವ್ಯತ್ಯಯ. ಒಟ್ಟಾರೆ ಗೃಹಸುಖ ಕ್ಷೋಭಕಾರಕವೆಂದು ಕಷ್ಟದಿಂದ ಬರೆಯಬೇಕಾಗುವದು ಮನೆಯವರಿಗಿಂತ ಅಪ್ತರ ಸುಖವೆ ಸ್ವಲ್ಪ ಹೆಚ್ಚು ಅದಕ್ಕಿಂತಲೂ ಹೊರಗಿನವರ ಸುಖ ಮತ್ತಷ್ಟು ಹೆಚ್ಚು ನೋಕರರ ಮತ್ತು ವಾಹನ ಮತ್ತು ದನಗಳ ಸೌಖ್ಯ ಅನುಕೂಲ. ಮಕ್ಕಳ ಉನ್ನತಿಗೆ ಮಾರ್ಚ ೧೨ ರ ನಂತರ ಬಹಳ ಉತ್ತಮ. ಅದರೂ ನಿಮಗೂ ಅವರಿಗೂ ಬಹಳ ಮಟ್ಟಿಗೆ ಕೂಡಿ ನಡೆಯಲಾರದು. ಧಂದೆ, ಕೂಲಿಕಾರರಿಗೆ ಮಾರ್ಚ ೧೨ ರ ವರೆಗೆ ಬಹಳ ತೊಂದರೆ. ಅನಂತರ ಮಾತ್ರ ಬಹಳ ಸುಖ ಮತ್ತು ಕೀರ್ತಿ. ಇದರಲ್ಲಿ ಸಂಶಯವೇ ಇಲ್ಲ. ಅಲ್ಲದೆ ಅನೇಕರಿಗೆ ಗು[illegible] ಇಲ್ಲವೆ ಆಕಸ್ಮಿಕ ಲಾಭವೂ ದೊರೆಯುವದು ಕೆಲವರಿಗಂತೂ ಸಾಯುವ ವರೆಗೆ ಸಾಲುವಷ್ಟು ಲಾಭವಾಗಬಹುದು. ಈ ಯೋಗವು ಅಕ್ಟೋಬರ ೩೦ ರ ವರೆಗೆ, ಅನಂತರ ಡಿಸೆಂಬರ ೮ ರಿಂದ ೨೬, ಎಪ್ರಿಲ ೨೪ ರಿಂದ ಮೇ ೧೫ ಜೂನ ೬ ರಿಂದ ಜುಲೈ ೧೩ ಮತ್ತು ಅಕ್ಟೋಬರ ೩ ರಿಂದ ೨೪ ಈ ಅವಧಿಯಲ್ಲಿ ಬಹಳುಂಟು ಧಂದೆಯವರಿಗೆ ಜುಲೈ ೩೦ ರಿಂದ ಮುಂದೆ ದೊಡ್ಡ ಪ್ರಮಾಣದಲ್ಲಿ ಲಾಭ. ಅರಿವೆ ಬೆಳ್ಳಿ ಬಂಗಾರ ಮತ್ತು ರತ್ನಗಳು ಎಣ್ಣೆ ಕಮೀಶನ್ ಎಜನ್ಸಿ, ಮಾಡುವವರಿಗೆ ಸ್ತ್ರೀಯರ ಬಟ್ಟೆ ಸಿದ್ಧಮಾಡಿ ಮಾರುವವರಿಗೆ ವೈದ್ಯ ಡಾಕ್ಟರರ ಶಿಕ್ಷಣ ಕೊಡುವವರಿಗೆ, ಸ್ಪೆಶಲ್ ಕ್ಲಾಸ ತೆಗೆಯುವವರಿಗೆ ಗಾಯಕರಿಗೆ ಒಟ್ಟಾರೆ ಇಂಥ ಬುದ್ಧಿಜೀವಿಗಳಿಗೆ ಈ ವರ್ಷ ಮಾರ್ಚ ೧೨ ರಿಂದ ವಿಪುಲ ಲಾಭ. ವಿಶೇಷವಾಗಿ ಮಾರ್ಚ ೩೧ ರಿಂದ ಎಪ್ರಿಲ ೨೯, ಮೇ ೨೬ ರಿಂದ ಜೂನ ೩೦, ಜುಲೈ ೧೬ ರಿಂದ ಆಗಸ್ಟ ೧೦, ಸಪ್ಟಂಬರ ೪ ರಿಂದ ೨೮ ಮತ್ತು ಅಕ್ಟೋಬರ ೨೨ ರ ನಂತರದ ಕಾಲವು ತುಂಬಾ ಲಾಭದ್ದೆನಿಸುವದು. ನೋಕರರಿಗೂ ಮೇ ೩೦ ರ ವರೆಗೆ ಬಹಳ ಕಷ್ಟ. ವರಿಷ್ಠ ಕನಿಷ್ಠರೂ ತೊಂದರೆ ಕೊಟ್ಟು ಅವಮಾನಗೊಳಿಸುವರು. ಅದರೆ ಜೂನ ೧ ರಿಂದ ಎಲ್ಲವೂ ಅವರ ಮೇಲೆಯೇ ಬೀಳುವದು ಮತ್ತು ನಿಮ್ಮ ದೈವವು ತೆರೆಯುವದು. ಮೇಲಿನ ಗ್ರೇಡು ನಗನಗುತ್ತಲೆ ಸಿಕ್ಕುವದು. ಬದಲಿಆಗುವದಿದ್ದರೆ ಸುಖಸೌಕರ್ಯಗಳಿದ್ದ ಸ್ಥಳಗಳಿಗೆ ಬದಲಿಯಾಗುವದು. ಅಲ್ಪ ಸ್ವಲ್ಪ ಸ್ಥಾವರ ಸಂಗ್ರಹವೂ ಆಗುವದು. ಅದರೆ ರೊಕ್ಕವಿದ್ದರೂ ಇತರವಸ್ತುಗಳ ಸಂಗ್ರಹ ಮಾಡಬೇಕೆಂದೆನಿಸುವದಿಲ್ಲ. ದೂರಿನ ಪ್ರವಾಸ ಜುಲೈ ೧೫ ರಿಂದ ಆಗಸ್ಟ ೧೦ ಅಕ್ಟೋಬರ ೨೩ ರಿಂದ ಮುಂದೆ ಪುಣ್ಯ ಸ್ಥಳಗಳಿಗೆ ಯಾತ್ರೆ ಹೋಗುವಿರಿ. ೨೨ ಮಾರ್ಚ ವರೆಗೆ ವಾದಸ್ಪರ್ಧೆಗಳಲ್ಲಿ ಬೀಳಬೇಡಿರಿ. ನಿಮಗೆ ಅದರಲ್ಲಿ ಅಂಜಿಕೆ. ಅನಂತರ ಮಾತ್ರ ಒಡಂಬಡಿಕೆಯಿಂದ ಉದ್ದಿಷ್ಟ ಸಾಧ್ಯವಾಗಬಹುದು. ನ್ಯಾಯಾಧೀಶರ ನಿರ್ಣಯಗಳಿಂದಲೆ ಇವೆಲ್ಲ ಪೂರ್ಣಯಶಸ್ವಿಯಾಗುವವು. ಪತ್ರವ್ಯವಹಾರವೂ ಅಷ್ಟೊಂದು ಸಮಾಧಾನಕರವಿಲ್ಲ; ಪ್ರತ್ಯಕ್ಷಭೆಟ್ಟಿಯ ಕೆಲಸ ಮಾತ್ರ ಜುಲೈ ೩೦ ರಿಂದ ಮನಸ್ಸಿನಂತೆ ಸಂಭವಿಸುವದು. ಮಾರ್ಚ ೧೨ ರ ವರೆಗೆ ಮಿತ್ರರು ಬಹಳ ಅನಾದರದಿಂದ ವರ್ತಿಸುವರು ಅನಂತರ ಮಾತ್ರ ಅದರದ ವರ್ತನೆ. ಪಾತಾಳದಲ್ಲಿ ಇಲ್ಲವೆ

ಸ್ವರ್ಗದಲ್ಲಿ ಸಂಚರಿಸುವೆವೊ ಎಂಬ ಸ್ವಪ್ನಗಳೂ ಅನೇಕ ಸಲ ಬೀಳುವವು.

ಹೆಂಗಸರಿಗೆ ಪತಿಸುಖ ಮಾರ್ಚ ೧೨ ರಿಂದ ಮೊದಲಿಗಿಂತ ಹೆಚ್ಚು ದೊರೆಯುತ್ತಿದ್ದರೂ ಅವರ ನಿಃಸೀಮ ಪ್ರೇಮದ ಬಗ್ಗೆ ಸಂಶಯವುಳಿದೇ ಉಳಿಯುವದು ಮನೆಯಲ್ಲಿಯ ಇತರ ಜನರ ಕೂಡ ಮೇಲಿಂದ ಮೇಲೆ ರಸಕಸಿಯುದ್ದುದೇ. ಮನಸ್ಸಿಗೆ ಬಾರದಿದ್ದ ಕೆಲಸವನ್ನೂ ಕರ್ತವ್ಯಬುದ್ಧಿಯಿಂದ ಮಾಡಬೇಕಾದ ಪ್ರಸಂಗ. ಅದರಲ್ಲಿಯೂ ಮಕ್ಕಳು ಸರಳರೀತಿಯಿಂದ ನಡೆಯುವರು. ಎಷ್ಟೋ ಕುಟುಂಬಗಳು ವಿಭಕ್ತವಾಗುವ ಅಂಜಿಕೆ. ನೀರಸ ಮತ್ತು ಕಾಯದೆಯ ದೃಷ್ಟಿಯಿಂದ ಅನನುಕೂಲವಿರುವ ಆಸ್ತಿಯನ್ನು ತೆಗೆದುಕೊಳ್ಳಬೇಕಾದ ಪ್ರಸಂಗ. ಹೊಟ್ಟೆಕಡಿತ, ಕೆಮ್ಮು, ಕಣ್ಣುರಿ ಮೊದಲಾದ ಕಿರಕಳ ಕಾಯಿಲೆಗಳಿಂದಲೂ ತೊಂದರೆ. ಇವೆಲ್ಲ ಕಷ್ಟಗಳ ನಿವಾರಣೆಗಾಗಿ ಶನಿವಾರ ರಾತ್ರಿ ಉಪವಾಸಮಾಡಿರಿ. ಮತ್ತು ಶನಿಯ ಇಲ್ಲವೆ ಹನುಮಪ್ಪನ ಉಪಾಸನೆಯನ್ನು ಶಕ್ಯವಿದ್ದಷ್ಟು ಮಾಡಿರಿ. ಲಗ್ನವಾಗಲಿದ್ದ ಹುಡಿಗೆಯರು ದಿನವೂ ಈ ದೇವತೆಗಳಿಗೆ ೧೧ ಪ್ರದಕ್ಷಿಣ ನಮಸ್ಕಾರಗಳನ್ನಾದರೂ ಹಾಕಬೇಕು. ಪ್ರತಿಶನಿವಾರ ಅಭ್ಯಂಗ ಸ್ನಾನಮಾಡಿ ಸಾಯಂಕಾಲ ಶನಿಮಹಾತ್ಮ್ಯವನ್ನು ಪಡಿಸಬೇಕು ಅಂದರೆ ಮಾರ್ಚ ೧೨ ನೇ ತಾರೀಕಿನ ನಂತರ ಲಗ್ನವಾಗಿ ಮನಸಿನಂತೆ ಗಂಡ ಸಿಗುವನು ೧೨ ಮಾರ್ಚ ನಂತರ ಏನೂ ತೊಂದರೆಯಿಲ್ಲದೆ, ಪ್ರಸೂತಿಯಾಗುವದು ಅದರೆ ಗಂಡುಮಗುವಿಗಿಂತ ಹೆಣ್ಣುಮಗು ಹುಟ್ಟುವ ಯೋಗವೇ ಇದೆ.

ಕೇವಲ ಬುದ್ಧಿವಂತರೆಂಬ ಹೆಮ್ಮೆಯಲ್ಲಿರದೆ ಒಳ್ಳೆ ಜೋರಿನಿಂದ ಅಭ್ಯಾಸ ಮಾಡಿದರೇ ಮಾರ್ಚ ೧೨ ರ ನಂತರ ಪಾಸಾಗುವಷ್ಟಾದರೂ ಗುಣಗಳು ವಿದ್ಯಾರ್ಥಿಗಳಿಗೆ ಬೀಳುವವು. ವಿಶೇಷವಾಗಿ ಅಕ್ಟೋಬರ ೩೦ ರಿಂದ ನವಂಬರ ೧೬, ಮಾರ್ಚ ೩ ರಿಂದ ೨೦, ಮೇ ೧೬ ರಿಂದ ಜೂನ ೬, ಜೂನ ೨೭ ರಿಂದ ಜುಲೈ ೧೨, ಜುಲೈ ೩೧ ರಿಂದ ಅಗಸ್ಟ ೨೦, ಸಪ್ಟಂಬರ ೧೦ ರಿಂದ ಅಕ್ಟೋಬರ ೨ ಮತ್ತು ಅಕ್ಟೋಬರ ೨೫ ರಿಂದ ಮುಂದೆ ಪರೀಕ್ಷೆಯಿದ್ದ ವಿದ್ಯಾರ್ಥಿಗಳು ಸಹಸಾ ನಪಾಸಾಗುವದಿಲ್ಲ ಇದುಮಾತ್ರ ನಿಶ್ಚಿತ.

## ಮೀನ

ಆರೋಗ್ಯ ಚೆನ್ನಾಗಿ ಇದ್ದರೂ ಜನ್ಮಸ್ಥ ರಾಹು ಇದ್ದ ಮೂಲಕ ಪಿತ್ತ ಮುಂತಾದ ಕಿರಕಳ ವಿಕಾರ ಆಗಾಗ ಎನಿಸುವವು. ಮಾರ್ಚ ೧೨ ರಿಂದ ಬರುವ ೧೨ ನೇ ಗುರುವಿನಿಂದ ಅಧೈರ್ಯ ಹೆಚ್ಚುವದು ಸ್ವತಃ ವೆಚ್ಚವನ್ನೂ ಮಾಡಹತ್ತುವಿರಿ. ಆಧ್ಯಾತ್ಮಿಕ ಇಲ್ಲವೆ ಪಾರಮಾರ್ಥಿಕ ಕಾರ್ಯಗಳತ್ತ ಮನಸ್ಸು ಹರಿಯುವದು. ಅದರೆ ಕೂಡಲೆ ಪ್ರಾಪಂಚಿಕ ವ್ಯವಹಾರದ ಕಡೆಗೆ ಲಕ್ಷ್ಯವನ್ನುವೇಧಿಸುವಿರಿ. ಸ್ತ್ರೀ ಸುಖ ಅನುಕೂಲ. ಅದರೆ ಮಾರ್ಚ ೪ ರಿಂದ ಎಪ್ರಿಲ ೪, ಜುಲೈ ೩೧ ರಿಂದ ಅಗಸ್ಟ ೨೦, ಸಪ್ಟಂಬರ ರಿಂದ ಅಕ್ಟೋಬರ ೩ ಈ ಕಾಲ ಅವಳಿಗೆ ಸ್ವಲ್ಪ ಕ್ಲೇಶದ್ದು. ಇಲ್ಲವೆ ಇಬ್ಬರಲ್ಲಿ ಒಬ್ಬರು ಸ್ಥಳಾಂತರವಾಗುವದರಿಂದ ಅನ್ಯೋನ್ಯಸುಖಕ್ಕೆರವಾಗುವಿರಿ. ಮಕ್ಕಳುನ್ನತಿಯು ಮನಸ್ಸಿನಂತೆ. ಅದರಲ್ಲಿಯೂ ಅಗಸ್ಟ ೩೦ ರ ನಂತರ ಅವರಲ್ಲಿ ಒಬ್ಬಿಬ್ಬರು ವೈಭವ ಶಿಖರವನ್ನೇರುವ ಸಂಭವ. ಒಟ್ಟಾರೆ ಮಾರ್ಚ ೨೨ ರಿಂದ ಮೇ ೩೦ ರ ವರೆಗೆ ಗೃಹ ಸುಖ ಸ್ವಲ್ಪ ತೊಂದರೆಯದೆನಿಸಿದರೂ ಉಳಿದ ಸಮಯದಲ್ಲಿ ಅದು ಮನಸ್ಸಿನಂತೆ ದೊರೆಯುವದು. ಆಪ್ತರು ನೆರೆಯವರು ಬಹಳ ಆದರದಿಂದ ನಡೆಯುವರು. ಸ್ಥಾವರದಲ್ಲಿ ಸ್ವಲ್ಪ ಹೊಸ ಸಂಗ್ರಹ. ಬರಬೇಕಾದ ಉತ್ಪನ್ನವೂ ವ್ಯವಸ್ಥಿತವಾಗಿ ಬರುವದು. ನಿಮ್ಮ ಯೋಗ್ಯತೆಗೆ ತಕ್ಕಂತೆ ವಾಹನವನ್ನು ಕೊಳ್ಳುವ ಸಂಭವ. ವಿವಾಹವಾಗುವ ಮಕ್ಕಳ ವಿವಾಹವು ಮಾರ್ಚ ೧೨ ರ ವರೆಗೆ ಅನಾಯಾಸವಾಗಿ ಅಗುವದು. ಮುಂದೆ ಅದರೆ ಸ್ವಲ್ಪ ತೊಂದರೆ ಮತ್ತು ಹೆಚ್ಚು ವೆಚ್ಚ ಅದರೂ ಸೊಸೆ ಇಲ್ಲವೆ ಅಳಿಯ ಎಲ್ಲರ ಮನಸ್ಸಿಗೂ ಬರುವರು. ಮಿತ್ರರಲ್ಲಿ ಕೆಲವರು ಆಗಸ್ಟ ೩೦ ರ ವರೆಗೆ ಅಲ್ಪ ಸ್ವಲ್ಪ ತುಚ್ಛತೆಯಿಂದ ಇಲ್ಲವೆ ಅನಾದರದಿಂದ ವರ್ತಿಸುವರು ಆದರಂತೆ ದಿಸೆಂಬರ ೧೦ ರ ವರೆಗೆ ಮತ್ತು ಅನಂತರ ಎಪ್ರಿಲ ೨೨ ರಿಂದ ಮೇ ೩೦ ರ ನಡುವೆ ಅವರಲ್ಲಿ ಒಬ್ಬನು ಬಹಳ ಅವನತಸ್ಥಿತಿಗಿಳಿದು ನಾಮಶೇಷ ಹೊಂದುವ ಸಂಭವವೂ ಉಂಟು. ೩೦ ಅಗಸ್ಟದ ನಂತರ ಮಾತ್ರ ಎಲ್ಲರೂ ಸುಖದಲ್ಲಿ ನಲಿದಾಡಹತ್ತುವರು ಮತ್ತು ನಿಮ್ಮನ್ನಾದರೂ ಪ್ರೇಮದಿಂದ ಕಾಣಹತ್ತುವರು. ಬಂಧುವರ್ಗದವರಿಗೆ ಇದೊಳ್ಳೆ ಉತ್ಕರ್ಷದ ವರ್ಷ. ನಿಮ್ಮೊಡನೆ ಅವರು ಮಮತೆಯಿಂದ ವರ್ತಿಸುವರು. ಈರ್ಷೆಯಿಂದ ಇಲ್ಲವೆ ವಿಪರೀತ ಮೋಹದಿಂದ ಹೆಚ್ಚುವೆಚ್ಚ ಮಾಡುವಿರಿ. ಮಾರ್ಚ ೨೨ ರಿಂದ ಮೇ ೩೦ ರ ನಡುವೆ ಬಹಳ ವೆಚ್ಚ. ಅದರೂ ಕೊನೆಗೆ ಉದ್ದೇಶ ಮಾತ್ರ ಸ್ವಲ್ಪವೂ ಸಾಧ್ಯವಾಗುವದಿಲ್ಲ. ಇದೇ ಅವಧಿಯಲ್ಲಿ ನಿಮ್ಮ ಸದ್ವರ್ತನೆಯ ಬಗ್ಗೆ ಅನೇಕರಲ್ಲಿ ಇಮ್ಮತ. ವಾದ ವಿವಾದಗಳಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಸ್ಪರ್ಧಿಗಳ ಸದ್ದು ಅಡಗಿದ್ದರೂ ನಿಮಗೆ ಮಾತ್ರ ಯಶಸ್ಸು ಅಷ್ಟಕ್ಕಷ್ಟೇ. ನಿಮಗೇನಾದರೂ ವ್ಯಸನವಿದ್ದರೆ ಅದು ಬಹಿರಂಗವಾಗಿ ಇಲ್ಲವೆ ಗುಪ್ತರೀತಿಯಿಂದ ಸತತವಾಗಿ ಉಳಿಯುವದು. ಒಟ್ಟಾರೆ ಮಾತು ಮತ್ತು ಕೃತಿಗಳಲ್ಲಿ ಈ ವರ್ಷ ಸ್ವಲ್ಪವೂ ಹೊಂದಿಕೆ ಇಲ್ಲ.

ಧಂದೆ ಮತ್ತು ಕೂಲಿಯವರಿಗೆ ಮಾರ್ಚ ೧೨ ರ ವರೆಗೆ ಮತ್ತು ಅನಂತರ ಅಗಸ್ಟ ೩೦ ರ ನಂತರ ಬಹಳ ಲಾಭ ಅದರೆ ಈ ಮಧ್ಯದ ಅವಧಿಯಲ್ಲಿ ಸ್ವಲ್ಪ ಹಾನಿ ಮತ್ತು ಹತ್ತು ಕಳೆದುಕೊಳ್ಳುವ ಸಂಭವವೂ ಉಂಟು. ಕಿರಕಳ ಮಾರಾಟಗಾರರಿಗೇ ಹೆಚ್ಚು ಲಾಭ. ಜುಲೈ ೩೧ ರಿಂದ ಅಕ್ಟೋಬರ ೨೫ ರ ವರೆಗೆ ಗುಪ್ತ ಇಲ್ಲವೆ ಅಕಸ್ಮಿಕ ಲಾಭ ಬಹಳ ಅಗುವ ಸಂಭವ. ಬಗೆಬಗೆಯ ಯಂತ್ರಗಳ ವ್ಯಾಪಾರಿಗಳಿಗೆ ಪರರಾಷ್ಟ್ರಗಳ ನಾಣ್ಯವಿನಿಮಯದ ವ್ಯವಹಾರಸ್ಥರಿಗೆ ಯಾಂತ್ರಿಕ ಸಹಾಯದಿಂದ ಧಂದೆ ಇಲ್ಲವೆ ಕಾರಖಾನೆ ನಡೆಸುವವರಿಗೆ, ತೊಗಲು, ಸ್ಟೇಶನರಿ, ಹೆಣಿಗೆ ಮುಂತಾದ ಧಂದೆ ಮಾಡುವವರಿಗೆ ಅದರಂತೆ ಸಣ್ಣ ದೊಡ್ಡ ಹಡಗುಗಳನ್ನು ಕಟ್ಟಿ ವ್ಯವಹಾರ ಮಾಡುವವರಿಗೆ ಹೆಚ್ಚು ಲಾಭ. ವೈದ್ಯ, ಡಾಕ್ಟರ, ಡ್ರಾಯವರ ಫಿಟರ, ಮೋಟರ, ಟಾಂಗಾ, ಗಾಡಿಗಳ ಧಂದೆ ಮಾಡುವವರಿಗೆ, ಹರಿದಾಸರು, ಪುರಾಣಿಕರು, ಉಪನ್ಯಾಸಕರು, ಜ್ಯೋತಿಷಿಗಳು, ನಾಟಕಕಾರರು ಮೊದಲಾದ ಬುದ್ಧಿಜೀವಿ ಮತ್ತು ಕಲಾಕುಶಲರಿಗೂ ಈ ವರ್ಷ ಹಣ ಹೆಚ್ಚು ದೊರೆಯುವದು ಶ್ರಮಜೀವಿಗಳಿಗೆ ಮಾರ್ಚ ೧೨ ರ ವರೆಗೆ ಅದರೆ ಕಲಾಕುಶಲರಿಗೆ ಅನಂತರ ಅದರಲ್ಲಿಯೂ ಹೆಚ್ಚು ಲಾಭ. ಪುಣ್ಯಸ್ಥಳ ಯಾತ್ರೆ ಸಂಭವಿಸುವದು. ಈ ವರ್ಷ ನಾಲ್ಕು ದುಡ್ಡು ಕೂಡಿಬೀಳುವದಿದ್ದರೂ ಹಳೆಯ ಕೊಡತಕ್ಕೊಳುವದಲ್ಲ ಮುಟ್ಟುವದು. ಹೊಸ ಸಾಲಶೂಲಗಳೇನೂ ಆಗುವದಿಲ್ಲ ನೋಕರರಿಗೆ ಮಾರ್ಚ ೧೨ ರ ವರೆಗೆ ಮೇಲಿನ ಬಡತಿ ದೊರೆಯುವದು ಅದರೆ ಅಲ್ಲಿಂದ ೩೦ ಅಗಸ್ಟ ವರೆಗೆ ಭಾರ ಬಹಳ ಹೆಚ್ಚುವದು ಮಾರ್ಚ ೧೨ ರಿಂದ ಮೇ ೩೦ ರ ವರೆಗೆ ವರಿಷ್ಠರೂ ಮೇಲಿಂದ ಮೇಲೆ ಮನಸ್ಸನ್ನು ಖಿನ್ನಗೊಳಿಸುವರು. ಕನಿಷ್ಠರಾದರೂ ಹೇಳಿದಂತೆ ಕೆಲಸ ಮಾಡದೆ ಮನಸ್ತಾಪವನ್ನು ಹೆಚ್ಚಿಸುವರು. ಈ ಅವಧಿಯಲ್ಲಿ ನಿಮ್ಮ ಬದಲಿಯಾದರೆ ಅನನುಕೂಲ ಸ್ಥಳಕ್ಕೆ ಅಗುವದು. ಆದರೆ ಉಳಿದ ಅವಧಿಯಲ್ಲಿ ಅನುಕೂಲ ಸ್ಥಳಕ್ಕೆ ಆಗುವದು ಭೆಟ್ಟಿಯ ಕೆಲಸಕ್ಕಿಂತ ಪತ್ರವ್ಯವಹಾರ ಮತ್ತು ಲೇಖೀ ಕೆಲಸ ಬಹಳ ಸರಸ.

ಸ್ತ್ರೀಯರಿಗೆ ಸಿಟ್ಟಿನ ಹಲವು ಪ್ರಸಂಗಗಳನ್ನು ಅನುಭವಿಸಬೇಕಾದರೂ ಪತಿಸುಖ ಉತ್ಕೃಷ್ಟ. ಮಕ್ಕಳುಮರಿಗಳೂ ನಿಮ್ಮ ಮಾತು ಮೀರಿ ನಡೆಯರು. ಅದರೆ ಉಳಿದ ಕೆಲ ಅಗಂತುಕ ಅಡಚಣಿಗಳಿಂದ ತೊಂದರೆ ಮಾರ್ಚ ೨೨ ರಿಂದ ಮೇ ೩೦ ರ ವರೆಗೆ ಸಹಿಸಬೇಕಾಗುವದು. ಪ್ರೀತಿಯ ಗೆಳತಿಯೂ ದ್ವೇಷ ಮಾಡಹತ್ತುವಳು ಮತ್ತು ಮನಸ್ಸಿಗೆ ಹತ್ತುವಂತೆ ಮಾತಾಡುವಳು. ಲಗ್ನವಾಗತಕ್ಕ ಹುಡುಗೆಯರ ಲಗ್ನ ಮಾರ್ಚ ೧೨ ರ ವರೆಗೆ ಅನಾಯಾಸವಾಗಿ ಅಗುವದು. ಅನಂತರ ಬಹಳ ತೊಂದರೆಯಿಂದ ಅಗುವ ಯೋಗವಿದ್ದರೂ

ಅತ್ಯಂತ ಅನುಕೂಲ ಗಂಡ ಸಿಕ್ಕುವನು. ಗರ್ಭವತಿ ಸ್ತ್ರೀಯರು ೧೨ ಮಾರ್ಚದೊಳಗಾಗಿ ಹಡೆದರೆ ಸುಖರೂಪ ಹಡೆದರೂ ಬಹುಶಃ ಹೆಣ್ಣು ಹುಟ್ಟುವದರಿಂದ ಸ್ವಲ್ಪ ಅಸಮಾಧಾನಗೊಳ್ಳುವಳು. ಅನಂತರ ಹಡೆಯುವವರು ಸ್ವಲ್ಪ ಕಷ್ಟಕ್ಕೊಳಗಾಗುವರು. ಆದರೆ ಬಹುಶಃ ಗಂಡು ಹುಟ್ಟುವದರಿಂದ ಹೆಚ್ಚು ಸಂತೋಷ ಹೊಂದಿ ಆದ ಕಷ್ಟಗಳನ್ನೆಲ್ಲ ಬೇಗ ಮರೆಯುವರು.

ಮಾರ್ಚ ೧೨ ರೊಳಗಾಗಿ ಪರೀಕ್ಷೆಯಿದ್ದ ವಿದ್ಯಾರ್ಥಿಗಳ ಅಭ್ಯಾಸ ನೆಟ್ಟಗೆ ಆಗಿರದಿದ್ದರೂ ನೂರಕ್ಕೆ ೯೦ ರಷ್ಟು ವಿದ್ಯಾರ್ಥಿಗಳು ಯಶಸ್ವಿಯಾಗುವರು. ಹೆಚ್ಚು ಅಭ್ಯಾಸ ಮಾಡಿದವರಂತೂ ಒಳ್ಳೆ ಗುಣಗಳನ್ನು ದೊರಕಿಸಿ ಶಿಷ್ಯವೃತ್ತಿ ಮುಂತಾದ್ದನ್ನು ಸಂಪಾದಿಸುವರೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಆದರೆ ಮಾರ್ಚ ೧೨ ನಂತರ ಪರೀಕ್ಷೆ ಇದ್ದರೆ ಒಳ್ಳೆ ವಿದ್ಯಾರ್ಥಿಗಳು ಕೂಡ ಅಯಶಸ್ವಿಯಾಗುವ ಸಂಭವವಿದೆ; ಸಾಮಾನ್ಯ ವಿದ್ಯಾರ್ಥಿಗಳು ಯಶಸ್ವಿಯಾಗುವದು ತುಂಬ ಕಠಿನ. ಅದರಲ್ಲಿಯೂ ಮೇ ೩೦ ರಿಂದ ಜುಲೈ ೩೦ ಮತ್ತು ಅಕ್ಟೋಬರ ೨೫ ರ ನಂತರ ಯಾರ ಪರೀಕ್ಷೆ ಆಗುವದೋ ಅವರು ಬಹುಶಃ ಉತ್ತೀರ್ಣರಾಗಿ ಮುಂದಿನ ಯೋಜನೆಯಲ್ಲಿ ತೊಡಗುವರೆಂಬುದು ನಿಶ್ಚಿತ.

ಶುಭಂ ಭವತು

## ಸೂಚನೆ

ಆಯಾ ಜನರ ಜನ್ಮರಾಶಿಯ ಮೇಲೆ ಸಾಕಲ್ಯವಾಗಿ ಎಲ್ಲ ಗ್ರಹಗಳ ವಿಚಾರಮಾಡಿ ಪ್ರತಿಯೊಂದರ ಶುಭಾಶುಭ ಫಲಗಳ ಪರಿಣಾಮವೆಂತಾಗುವದೆಂಬುದರ ಸ್ಥೂಲ ಅನುಮಾನ ಇದರಿಂದ ಬಹಳ ಮಟ್ಟಿಗೆ ಆಗುವದು.

ವಾಸ್ತವವಾಗಿ ಆಯಾ ವ್ಯಕ್ತಿಗಳ ಜನ್ಮಕುಂಡಲಿಯ ಮೇಲಿಂದ ಭವಿಷ್ಯವನ್ನು ತೆಗೆದಿದ್ದಾದರೆ ಅದು ಬಹಳ ಮಟ್ಟಿಗೆ ನಿಜವಾಗಿ ಪರಿಣಮಿಸುವದೆಂಬುದು ನಿಶ್ಚಿತವೆ,

ಆದರೂ ಈ ವರ್ಷಭವಿಷ್ಯವು ಸಾಮಾನ್ಯವಾಗಿ ಪ್ರತಿಯೊಂದು ರಾಶಿಯ ಜನರು ಯಾವ ಬಗೆಯ ಸುಖದುಃಖಗಳ ವಾತಾವರಣದಲ್ಲಿ ಕಾಲ ಕಳೆಯಬೇಕಾಗುವದೆಂಬುದನ್ನು ತಿಳಿದುಕೊಳ್ಳುವಲ್ಲಿ ಬಹಳ ಮಟ್ಟಿಗೆ ಸಹಾಯಮಾಡುವದೆಂಬಲ್ಲಿ ಸಂಶಯವಿಲ್ಲ. ಅದೇ ರೀತಿ ಜನ್ಮಲಗ್ನ ಮತ್ತು ಜನ್ಮರಾಶಿ ಇವೆರಡರ ಭವಿಷ್ಯವನ್ನೋದಿ ಆ ತಾರತಮ್ಯಕ್ಕನುಸಾರವಾಗಿ ಹೆಜ್ಜೆಇಡುತ್ತ ನಡೆದರೆ ಅಶುಭಫಲಗಳ ಬಗ್ಗೆ ಜಾಗೃತರಾಗಿ ಉಳಿದು ಶುಭಫಲಗಳ ಸಂಬಂಧದಲ್ಲಿ ನಿಮ್ಮ ಪ್ರಯತ್ನವನ್ನು ಜೋರಿನಿಂದ ಸಾಗಿಸಿ ಈ ವರ್ಷದ ಭವಿಷ್ಯಪಥವನ್ನು ಹೆಚ್ಚು ಸುಕರಮಾಡಿಕೊಳ್ಳಲು ಬರುವದೆಂಬುದು ನಿಃಸಂಶಯವಾಗಿದೆ.

ನಮಸ್ತೇ



# ಭಾರತೀಯನ ಕರಭಾರ ★

ಲೇಖಕರು
ಶ್ರೀ. ಎಚ್. ಎಸ್. ಪಾಟೀಲ
ಎಂ. ಎ., ಬಿ. ಕಾಮ್.

**ರಾಜ್ಯದ ವೆಚ್ಚಕ್ಕಾಗಿ ಕರ ಹೇರುವದು ರಾಜ್ಯ ರಚನೆಯಷ್ಟೇ ಪ್ರಾಚೀನವಾದರೂ ಕಾಲಕಾಲಕ್ಕೆ ಬದಲಾಗುವ ಆರ್ಥಿಕ ಸ್ಥಿತಿಗಳನ್ನನುಸರಿಸಿ ಕರ ಗ್ರಹಣಪದ್ಧತಿಯೂ ಬದಲಾಗುತ್ತಿದೆ. ಭಾರತದಲ್ಲಿ ಮುಖ್ಯವಾಗಿ, ೧೯೩೭ರಲ್ಲಿ ಪ್ರಾಂತಿಕ ಸ್ವಾಯತ್ತತೆ ಜಾರಿಯಲ್ಲಿ ಬಂದಂದಿನಿಂದ ನಮ್ಮ ಕರಭಾರದ ಸ್ವರೂಪ ಹೇಗೆ ಬದಲಾಗುತ್ತ ಬಂದಿದೆಯೆಂಬುದನ್ನೂ ಅದರ ಔಚಿತ್ಯಾನೌಚಿತ್ಯವನ್ನೂ ಇಲ್ಲಿ ಚರ್ಚಿಸಲಾಗಿದೆ**

ಭಾರತದಲ್ಲಿ ಮೊದಲಿನಿಂದಲೂ ಕರಗಳನ್ನು ಸಂಗ್ರಹಿಸುವ ಪದ್ಧತಿಯು ಆಧಿಪತ್ಯದ ರೂಢಿಯಾಗಿದ್ದರೂ ಈಗ ಹೊಸದಾಗಿ ಕರ ಮಾಲಿಕೆಯಲ್ಲಿ ಸೇರಿದ ವೃತ್ತಪತ್ರಗಳ ಜಾಹೀರಾತುಗಳ ಮೇಲಿನ ಕರವು, ಇಡಿಯ ಜನತೆಯ ಲಕ್ಷ್ಯವನ್ನೆಳೆದು, ಈ ಕರಗಳು, ಕರಗಳನ್ನು ಹೇರುವ ಅವಶ್ಯಕತೆ ಮತ್ತು ಅನುಕೂಲ, ಇವು ಮಾತ್ರ ಅಲ್ಲದೆ ಕರಭಾರದ ವಿಷಯವನ್ನೇ ಪುನರ್ವಿಚಾರಿಸಹಚ್ಚಿದೆ. ವೃತ್ತಪತ್ರಗಳ ಜಾಹೀರಾತುಗಳ ಮೇಲೆ ಕರವನ್ನು ಹೇರುವದರಿಂದ ಆಯವು ಕಡಿಮೆಯಾಗುವದರಿಂದ, ಅವರು ಪತ್ರಿಕೆಗಳ ಬೆಲೆಯನ್ನೇ ಏರಿಸಬೇಕಾಗುವದು, ಅದರ ಪರಿಣಾಮವಾಗಿ ಜನತೆಗೇ ಅದರ ಆಘಾತವು ತಗಲುವದು ಎಂದು ವೃತ್ತಪತ್ರಿಕಾಕರ್ತರು ವಾದಿಸುತ್ತ, ತಮ್ಮ ಕೂಗನ್ನು ಕೇಂದ್ರ ಆಧಿಪತ್ಯದ ವರೆಗೆ ತಂದು ತಲುಪಿಸಿದರು. ಕೊನೆಗೆ ಮೊನ್ನಿನ ಘಟನಾಸಮಿತಿಯ ಸಭೆಯೊಂದರಲ್ಲಿ ಈ ಬಗೆಯ ಕರವನ್ನು ಹಾಕುವ ನಿರ್ಣಯವನ್ನು ಕೇಂದ್ರ ಆಧಿಪತ್ಯವು ಮಾತ್ರ ತೆಗೆದುಕೊಳ್ಳಬಹುದು ಎಂಬ ನಿಬಂಧನೆಯನ್ನು ಸ್ವೀಕರಿಸಿದ ಸಂಗತಿಯು ಎಲ್ಲರಿಗೂ ಗೊತ್ತಿದ್ದುದೆ ಆಗಿದೆ.

ಇದೊಂದು ದೃಷ್ಟಾಂತದಿಂದ ಕರಗಳ ವಿಷಯದಲ್ಲಿ ಅಡಕವಾದ ಅನೇಕ ಸಮಸ್ಯೆಗಳು ವಿಶದವಾಗಿ ನಮ್ಮೆದುರು ಬಂದು ನಿಲ್ಲುತ್ತವೆ. ಮೊದಲನೆಯದಾಗಿ ಇಷ್ಟೊಂದು ತೀವ್ರವಾಗಿ ಜನತೆಯ ಹಿತಕ್ಕೆ ವಿರೋಧವಾಗುವಂತಹ ಕರವು ಇದಾಗಿದ್ದರೆ ಅಂತಹ ಕರವನ್ನು ಹಾಕುವದಕ್ಕೆ ಉದ್ದೇಶವಾದರೂ ಏನು? ಒಂದು ಮಹತ್ವದ ಕಾರಣಕ್ಕಾಗಿ ಈ ಬಗೆಯ ಕರವನ್ನು ಎತ್ತುವ ಪ್ರಸಂಗ ಬಂದರೂ ಕರರಚನೆಯ ನಾಲ್ಕು ಮೂಲತತ್ವಗಳಿಗನುಸರಿಸಿ, ಇದನ್ನು ಸಹಜವೆನಿಸುವಂತೆಯೆ, ಸಲೀಲವಾಗಿ ಗಳಿಸುವಂತೆಯೂ ಯೋಜಿಸಲಿಕ್ಕೆ ಬರುವದಿಲ್ಲವೆ? ಅಂದರೆ ಅದರ ಪರಿಣಾಮವು ಜನಸಾಮಾನ್ಯರ ಮೇಲೆ ಆಗದಂತೆ, ಅಥವಾ ಜನಸಾಮಾನ್ಯರಿಗೆ ಸಂಬಂಧಿಸದಂತಹ ಕರವನ್ನು, ಹಾಕಲಿಕ್ಕೆ ಬರುತ್ತಿರಲಿಲ್ಲವೆ? ಆಮೇಲೆ ಈ ಎಲ್ಲ ವಿಚಾರವನ್ನು ಬದಿಗಿರಿಸಿ, ಪ್ರಾಂತದ ಆಧಿಪತ್ಯವೊಂದು ಜಾಹೀರಾತುಗಳ ಮೇಲೆ ಕರವನ್ನು ಸ್ವೀಕರಿಸುವ ನಿರ್ಧಾರವನ್ನು ಮಾಡಿತೆಂದೇ ತಿಳಿಯೋಣ. ಆಗ್ಗೆ ಅಂತಹ ಪರಿಸ್ಥಿತಿಯಲ್ಲಿ ಕೇಂದ್ರ ಆಧಿಪತ್ಯವು ನಡುವೆ ಬಂದು ಅದನ್ನು ತಡೆಯುವಂತಹ ತೀಕ್ಷ್ಣತೆಯು ಅದರಲ್ಲೇನಿದೆ? ಇವೆ ಮೊದಲಾದ ಮೂಲಭೂತ ತತ್ವಗಳ ವಿಚಾರ ಮಾಡುವದೆಂದರೆ, ಒಟ್ಟು ಕರರಚನೆಯ ಸಂಬಂಧವಾಗಿ ಕೂಲಂಕಷವಾಗಿ ಯೋಚಿಸಿ, ಅದು ಈಗಿನ ಪರಿಸರದಲ್ಲಿ ಭಾರತೀಯನ ಹಿತವನ್ನು ಎಷ್ಟು ಸಾಧಿಸುತ್ತದೆ, ಭಾರತೀಯನ ಅಲ್ಪವಾದ ಉತ್ಪನ್ನದಲ್ಲಿ ಅವನಿಂದ ಎಷ್ಟು ತ್ಯಾಗವನ್ನು ನಿರೀಕ್ಷಿಸುತ್ತದೆ, ಇಲ್ಲವೆ ಈ ಕರಭಾರವು ಭಾರತೀಯನ ಮೇಲೆ ಎಷ್ಟಾಗಿದೆ ಎಂಬ ವಿವರಗಳನ್ನು ತಿಳಿಯಪಡಿಸುವದೆ ಆಗಿದೆ.

ಭಾರತದಲ್ಲಿ ಹಿಂದೊಂದು ಕಾಲವಿತ್ತು. ಅಂದರೆ ಮೌರ್ಯರ, ಮೊಗಲರ ಮಾತುಗಳಿಂದ ಈ ಕಾಲದ ಕತೆಯನ್ನು ಹೇಳುವ ಅವಶ್ಯಕತೆಯಿಲ್ಲ. ಬ್ರಿಟಿಶರ ಕಾಲದ ವಿಷಯವಾಗಿಯೆ, ಅಂದರೆ ಆಧುನಿಕವಾಗಿಯೆ ಇಂದು ನಾವು ವಿಚಾರಮಾಡಬಹುದು. ಈಸ್ಟ ಇಂಡಿಯ ಸರಕಾರದಿಂದ ಅರಸನ ಕೈಯಲ್ಲಿ ಆಧಿಪತ್ಯವು ಹೋದಕೂಡಲೆ ಮೊದಲು ಆಗಿನ ಆಡಳಿತೆಗಾರರು ಮಾಡಬೇಕಾದ ಯೋಚನೆಯೆಂದರೆ ವೆಚ್ಚದ ಹಣವನ್ನು ದೊರಕಿಸುವದು ಹೇಗೆ ಮತ್ತು ಎಲ್ಲಿಂದ ಎಂಬದು. ಅಂತೆಯೆ ಆಗಿನಿಂದಲೇ ಆಚರಣೆಯಲ್ಲಿ ಬಂದಿರುತ್ತವೆ ಈಗಿನ ಅನೇಕ ಕರಗಳು. ಬೇರೊಂದು ರೂಪದಲ್ಲಿಯಾದರೂ ಈಗಿನ ಉತ್ಪನ್ನ ಕರವು 'ಬಂಡಾಯ' ದ ವೆಚ್ಚವನ್ನು ವಸೂಲಮಾಡುವ ಉದ್ದೇಶದಿಂದ ರೂಢವಾಗಿತ್ತು. ಅನಂತರ ಅರ್ಥಶಾಸ್ತ್ರದಲ್ಲಿ ಕರಗಳನ್ನು ಹೇರುವ ಧ್ಯೇಯ ಮತ್ತು ತತ್ವಗಳು ಸಾಮಾನ್ಯವಾಗಿ ಪರಿವರ್ತನೆಯನ್ನು ಹೊಂದಿದರೂ ಭಾರತದಲ್ಲಿ ಅವುಗಳ ನಿಜರೂಪವು ಬೇರೆಯಾಗಿಯೆ ಉಳಿದಿತ್ತು.

### ಉತ್ಪನ್ನದ ಮೂಲ

ಆಡಳಿತದ ವೆಚ್ಚ ಎಂಬ ಒಂದು ಕಾರಣಕ್ಕಾಗಿ ಕೆಲವು ಕರಗಳನ್ನು ಹೇರಿದ್ದರೆ, ಆಗಿನ ಕಾಲದಲ್ಲಿ ಮ್ಯಾಂಚೆಸ್ಟರದ ವಸ್ತ್ರದ ವ್ಯವಸಾಯವನ್ನು ಮೊದಲುಮಾಡಿಕೊಂಡು ಬ್ರಿಟನ್ನಿನ ಬೇರೆ ಉದ್ಯಮಗಳನ್ನು ಸಂರಕ್ಷಿಸಿಕೊಂಡು ಬೆಳೆಯಿಸುವದಕ್ಕಾಗಿ ನಿರ್ಯಾತ ಕರಗಳು ಕೂಡ ಆಗ್ಗೆ ನಮ್ಮ ಆಧಿಪತ್ಯದವರಿಗೆ ಅನುಕೂಲವಾಗಿ ಕೈಸೇರಿದವು. ಈ ಬಗೆಯ ಕರಗಳು ಹಿಂದುಸ್ತಾನದಲ್ಲಿ ಮಾತ್ರ ವಿಶಿಷ್ಟವಾಗಿರದೆ, ತಮ್ಮ ಉದ್ಯಮಗಳನ್ನು ಊರ್ಜಿತಗೊಳಿಸಬೇಕೆಂದು ಮಾಡಿದ ಯಾವುದೆ ರಾಷ್ಟ್ರೀಯ ಸರಕಾರವೆ ಆಗಲಿ, ಇಲ್ಲವೆ ತನ್ನ ಅಧೀನದಲ್ಲಿರುವ ಮಿಕ್ಕ ದೇಶಗಳಿಂದ ಲಾಭವನ್ನು ಪಡೆಯಬೇಕೆಂದು ಹವಣಿಸುವ ಸಾಮ್ರಾಜ್ಯಗಳೇ ಆಗಲಿ ಯೋಜಿಸತಕ್ಕಂತಹ ಕರಗಳೆ ಆಗಿವೆ. ಪರರಾಷ್ಟ್ರದ ಒಂದು ಉದ್ಯಮದಿಂದ ನಮ್ಮ ದೇಶೀಯ ಉದ್ಯಮವು ಹಣ್ಣಾಗುತ್ತಿದ್ದರೆ ಇಲ್ಲವೆ ಹಾನಿಗೊಳಗಾಗುತ್ತಿದ್ದರೆ, ಆದರ ಸರಕಿನ ಮೇಲೆ ಆಯಾತಕರವನ್ನು ಹೇರಿ, ಅದನ್ನು ನಿರ್ಬಂಧಿಸಿ, ನಮ್ಮ ಪೇಟೆಯಲ್ಲಿ ಆ ಸರಕುಗಳ ಬೆಲೆಯೂ ಏರುವಂತೆ ಮಾಡಬಹುದು. ಇಂತಹ ಉಪಾಯದಿಂದ ನಮ್ಮ ಉದ್ಯಮದ

ಸಂರಕ್ಷಣೆ ಯೂ ಆಗುವದು. ಇತ್ತ ನಮ್ಮ ಆಧಿಪತ್ಯಕ್ಕೆ ಆದಾಯವೂ ಬರುವದು. ಇದೇ ಬಗೆಯ ಸಂರಕ್ಷಣೆಯ ಕರದ ಸಹಾಯದಿಂದ ನಮ್ಮ ಈಗಿನ ಕಬ್ಬಿಣ ಮತ್ತು ಉಕ್ಕಿನ ಉದ್ಯಮಗಳೂ ಸಕ್ಕರೆಯ ಉತ್ಪತ್ತಿಯೂ ಪ್ರೋತ್ಸಾಹವನ್ನು ಪಡೆದು ಈಗ ಸ್ವಯಂಪೂರ್ಣವಾಗಿ ನಿಂತಿವೆ.

ಇತ್ತ ರಾಷ್ಟ್ರೀಯ ದೃಷ್ಟಿಯಿಂದ ಪ್ರಚೋದಿತವಾದುದೊಂದು ಈ ಧೋರಣೆಯಾದರೆ ಕರಗಳನ್ನು ಹಾಕುವದಕ್ಕೆ ಇದು ಅನ್ಯ ರಾಷ್ಟ್ರಗಳ ದೃಷ್ಟಿಯಿಂದ ಅನಿತೊಂದು ಸಮಂಜಸವಾದ ತತ್ವವೆನಿಸಲಿಕ್ಕಿಲ್ಲ. ಅಂತರರಾಷ್ಟ್ರೀಯ ದೃಷ್ಟಿಯು ಮಹತ್ವವನ್ನು ಪಡೆಯುತ್ತಿರುವ ಈ ದಿನಗಳಲ್ಲಿ, ಇಂತಹ ಕರಗಳನ್ನು ಹಾಕುವಾಗ್ಗೆ ಪೂರ್ಣ ವಿಚಾರ ಮಾಡಿ ಮತ್ತು ಅವುಗಳ ಸಂಬಂಧವು ಬರಬಹುದಾದ ಬೇರೆ ರಾಷ್ಟ್ರಗಳ ಸಂಗಡ ವಿಚಾರವಿನಿಮಯ ಮಾಡಿ ಅವುಗಳನ್ನು ಗೊತ್ತುಪಡಿಸಬೇಕಾಗುತ್ತದೆ. ಇದರ ಜೊತೆಯಲ್ಲಿಯೆ ಇನ್ನೊಂದು ಬಗೆಯ ಕರದ ವಿಚಾರವನ್ನು ಇಲ್ಲಿ ನಾವು ಮಾಡಬಹುದು. ಅದೆಂದರೆ ಭೂಮಿಯ ಮೇಲಿನ ತೆರಿಗೆ. ಎಲ್ಲ ರಾಷ್ಟ್ರದೊಳಗಿನ ಭೂಮಿಯು ರಾಷ್ಟ್ರದ ಸೊತ್ತು. ಅದನ್ನು ಈಗ ಸ್ವಾಧೀನದಲ್ಲಿರಿಸಿಕೊಂಡ ವ್ಯಕ್ತಿಯು ಅದಕ್ಕಾಗಿ ಆಧಿಪತ್ಯಕ್ಕೆ ತೆರಿಗೆಯನ್ನು ಕೊಡುವದೆಂದರೆ ಅದೊಂದು ಬಾಡಿಗೆಯನ್ನು ತೆತ್ತಂತೆ ಎಂದು ಹೇಳಬಹುದು. ಈ ತೆರಿಗೆಯು ಕರವೋ ಬಾಡಿಗೆಯೊ ಎಂಬ ವಾದದಲ್ಲಿ ನಾವು ಸೇರದೆ ಭೂಮಿಯನ್ನು ಸಾಗುಮಾಡುವದಕ್ಕೆಂದು ಕೊಟ್ಟ ಕಾರಣಕ್ಕಾಗಿ ಆಧಿಪತ್ಯವು ತೆಗೆದುಕೊಳ್ಳುವ ಒಂದು ಕ್ರಯ ಈ ತೆರಿಗೆ ಎಂದುಕೊಂಡು ಮುಂದೆ ಸಾಗಬಹುದು. ಆಧಿಪತ್ಯದ ಒಡೆತನದಲ್ಲಿದ್ದ ವಸ್ತುವಿನ ಉಪಯೋಗಕ್ಕಾಗಿ ತೆರುವ ಒಂದು ಮೌಲ್ಯ ಈ ಹಣ ಎಂಬ ಅರ್ಥವನ್ನು ತೆರಿಗೆಯ ವಿಷಯವಾಗಿ ಮಾಡಿಕೊಂಡರೆ ಇಂದಿನ ಸನ್ನಿವೇಶದಲ್ಲಿ ಅದು ಹೆಚ್ಚು ಸಹಾಯಕವಾಗಬಹುದು.

**ಕಲ್ಯಾಣಾಧಿಪತ್ಯ**

ಆಧಿಪತ್ಯದ ಸಂಬಂಧ ಬಂದ ಕೂಡಲೆ ಇನ್ನೊಂದು ತತ್ವದ ಪ್ರಸ್ತಾವವನ್ನು ಇಲ್ಲಿ ಎತ್ತಬೇಕಾಗುತ್ತದೆ. ಅದೆಂದರೆ, ಇಂದಿನ ಆಧಿಪತ್ಯಗಳು ಹೆಚ್ಚಾಗಿ ಕಲ್ಯಾಣಾಧಿಪತ್ಯಗಳು ಅಂದರೆ ಬಲಿಷ್ಠರಿಂದ ಅವರ ಆಸ್ತಿಯ ಉತ್ಪನ್ನದ, ಲಾಭದ, ಶಕ್ತಿಯ ಒಂದು ಪಾಲನ್ನು ತೆಗೆದುಕೊಂಡು ಅದನ್ನ, ಅಲ್ಪಬಲದವರಿಗೆ, ಬಡವರಿಗೆ, ಜನಸಾಮಾನ್ಯರಿಗೆ ಕಲ್ಯಾಣಕಾರಕ ಮಾರ್ಗಗಳಿಂದ ಹಂಚುವ ಕರ್ತವ್ಯವನ್ನು ಈಗಿನ ಕಾಲದ ಸರಕಾರಗಳು ಮಾಡುತ್ತಲಿವೆ. ಅದರಲ್ಲಿಯೂ ವಿಶೇಷವಾಗಿ ನಮ್ಮ ದೇಶದ ಉದಾಹರಣೆಯನ್ನು ತೆಗೆದುಕೊಂಡು ವಿಚಾರ ಮಾಡಿದರೆ ಈ ತತ್ವಪ್ರಣಾಲಿಯು ಸ್ಪಷ್ಟವಾಗಿ ತಿಳಿಯುವದು. ನಮ್ಮ ದೇಶದಲ್ಲಿ ನೂರಕ್ಕೆ ತೊಂಭತ್ತು ಜನರು ನಿರಕ್ಷರಿಗಳಾಗಿದ್ದಾರೆ. ಬಹುಸಂಖ್ಯ ಜನರು ಅರೆಹೊಟ್ಟೆ ಬರಿಮೈಗಳಿಂದ ತಿರುಗುತ್ತಾರೆ. ರೋಗರುಜಿಗಳ ಕಾರಣದಿಂದ ನಮ್ಮ ಜನಸಂಖ್ಯೆಯ ಮರಣ-ಅನಾರೋಗ್ಯಗಳ ಪ್ರಮಾಣವು ಮಿತಿಮೀರಿದ್ದಾಗಿದೆ. ನಗರಗಳಲ್ಲಿಯ ಎಲ್ಲ ಜನರಿಗೆ ಇರಲಿಕ್ಕೆ ಸಾಕಷ್ಟು ಮನೆಗಳಿಲ್ಲ; ಹಳ್ಳಿಗಳಲ್ಲಿಯ ಹೆಚ್ಚು ಜನರಿಗೆ ಯೋಗ್ಯವಾದ ವಾಸಸ್ಥಳವಿಲ್ಲ. ಈ ಶತಮಾನದಲ್ಲಿಯೆ ನಮ್ಮ ನಿರುದ್ಯೋಗವು ಎಲ್ಲೆಯನ್ನು ದಾಟಿಹೋಗಿದೆ. ಹೀಗಿದ್ದ ಪರಿಸ್ಥಿತಿಯಲ್ಲಿ ಜನರಿಗೆ ಒಂದು ಸಾಮಾನ್ಯವಾದ ಪ್ರಮಾಣದಲ್ಲಿಯೆ ಆಗಲಿ, ಅನ್ನ, ವಸ್ತ್ರ, ವಸತಿ, ವೈದ್ಯಕ ಸಹಾಯ, ವಿದ್ಯಾಭ್ಯಾಸಗಳ ಸೌಕರ್ಯವನ್ನು ಕಲ್ಪಿಸಿಕೊಡುವ ಹೊಣೆಯನ್ನು ಆಧಿಪತ್ಯವಲ್ಲದೆ ಬೇರೆ ಯಾವ ಜನ ಇಲ್ಲವೆ ಸಂಸ್ಥೆಯು ವಹಿಸಬಹುದು? ಈ ಹೊಣೆಯನ್ನು ನಿರ್ವಹಿಸಬೇಕಾದ ಸರಕಾರವೇನು ತನ್ನ ಮನೆಯಿಂದ ಅದಕ್ಕೆ ಬೇಕಾಗುವ ವಸ್ತುಗಳನ್ನು ಒದಗಿಸಲಾರದು. ಅಂತೆಯೇ ತಾವು ಮಾಡಬೇಕಾದ ತ್ಯಾಗ, ಪ್ರಯತ್ನ, ಯೋಜನೆ, ಸಹಕಾರ, ಇವುಗಳ ಹೊರತಾಗಿ ಈ ವೆಚ್ಚದ ಹಣವನ್ನು ದೊರಕಿಸಬೇಕಾದರೆ, ಕರಗಳ ಮುಖಾಂತರವಾಗಿಯೆ ದೊರಕಿಸಬಹುದು. ಇನ್ನು ಈ ಕರಗಳನ್ನು ಸಂಗ್ರಹಿಸಬೇಕಾದರೆ, ಅದರ ಭಾರವನ್ನು ಹೊರಲಿಕ್ಕೆ ಯೋಗ್ಯತೆಯಿದ್ದವರಿಂದ ಮಾತ್ರ ಅಲ್ಲವೆ? ಅಂತೆಯೆ ಶ್ರೀಮಂತರಿಂದ, ಉದ್ಯಮಿಗಳಿಂದ, ಇದ್ದವರಿಂದ, ಈ ಕರಗಳ ಮುಖಾಂತರ ಹಣವನ್ನು ಸೇರಿಸಿ, ಅದರ ಉಪಯೋಗವನ್ನು ಜನಸಾಮಾನ್ಯರಿಗಾಗಿ ಮಾಡಬೇಕಾಗುತ್ತದೆ. ಇದರಿಂದ ಒಂದು ಕಡೆ ಬಲಿಷ್ಠರ ಸಹಾಯ ಸಹಕಾರವನ್ನು ಪಡೆದು ಆಧಿಪತ್ಯವು ಸಾಮಾನ್ಯರ ಸೇವೆಯನ್ನು ಮಾಡಲೆಳಸಿದರೆ ಇನ್ನೊಂದು ಕಡೆಯಿಂದ ಆರ್ಥಿಕ ವಿಷಮತೆಯನ್ನು ಹೋಗಲಾಡಿಸುವದಕ್ಕೆ ಕೂಡ ಇದೊಂದು ಒಳ್ಳೆಯ ಉಪಾಯವಾಗಿದೆ. ಇದೊಂದು ಸಮಾಜಹಿತದ ರೀತಿಯೆಂದು ಇಂದಿನ ಸಮಾಜವಾದಿಗಳು ಹೇಳಿದರೆ, ಅದು ಮೊದಲಿನಿಂದಲೂ ನಡೆದು ಬಂದ ರೂಢಿಯೆ ಆಗಿದೆ ಎಂದು ಪರಂಪರಾಪ್ರಿಯರು ಹೇಳುತ್ತಾರೆ.

ಕಲ್ಯಾಣದ ವಿಷಯವಾಗಿ ವಿಚಾರ ಮಾಡುತ್ತ ಇನ್ನೊಂದು ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಅದೆಂದರೆ ಇಂದಿನ ರಾಷ್ಟ್ರಗಳಲ್ಲಿ ಕಂಡುಬರುವ ಲೋಕೋಪಯೋಗಿ ಸಂಸ್ಥೆಗಳು. ಇವುಗಳನ್ನು ಅನೇಕ ಕಡೆಗಳಲ್ಲಿ ಆಧಿಪತ್ಯವೆ ನಡೆಯಿಸಿಕೊಂಡು ಬಂದುದರಿಂದ ಅವುಗಳ ಸೇವೆಯನ್ನು ಪುಕ್ಕಟೆಯಾಗಿ ಸರ್ವರಿಗೂ ಸಲ್ಲಿಸುವದು ಸಾಧ್ಯವೆ, ಮತ್ತು ಯೋಗ್ಯವೆ ಎಂಬುದೊಂದು ಪ್ರಶ್ನೆಯು ಉದ್ಭವಿಸುತ್ತದೆ. ಈಗ ಅಂಚೆ ಮತ್ತು ತಂತಿಯದೆ ಆಗಲಿ, ನೋಟುನಾಣ್ಯಗಳ ವ್ಯವಹಾರ ನಡೆಸುವ ಟಂಕಸಾಲೆಗಳದೇ ಆಗಲಿ ಇಲ್ಲವೆ ವಾಹಕಗಳಾದ ಲೋಹಮಾರ್ಗ ವಿಮಾನಗಳದೆ ಆಗಲಿ, ಸೌಕರ್ಯವನ್ನು ಸರಕಾರವು ಸಾಮಾನ್ಯರಿಗೆ ದೊರಕಿಸಿಕೊಟ್ಟರೆ, ಅದನ್ನು ಬಡವರು ಎಂಬ ಕಾರಣದಿಂದಾಗಲಿ, ಕಲ್ಯಾಣ ಕಾರ್ಯ ಎಂಬ ಧ್ಯೇಯದಿಂದಾಗಲಿ ಹಾಗೆಯೆ ದೊರಕಿಸಿಕೊಡಲು ಸಾಧ್ಯವೆ? ಅಂತೆಯೆ ಸಕಲರೂ ಸಹಜವಾಗಿ ಪಡೆಯಬಹುದಾದ ಈ ಆಡಳಿತದ ಅನುಕೂಲತೆಗಾಗಿ ಅವರೂ ವೆಚ್ಚವನ್ನು ಪಾಲುಗೊಡುವದು ವಿಹಿತ ಎಂಬುದು

ಒಂದು ಸರ್ವಸಮ್ಮತವಾದ ಮಾತು. ಅಂಚೆಯ ಮತ್ತು ತಂತಿಯ ಸಲುವಾಗಿಯೆ ಆಗಲಿ, ಪ್ರಯಾಣದ ಸಲುವಾಗಿಯೆ ಆಗಲಿ ನಾವು ಕೊಡುತ್ತಿರುವ ಹಣವು ಒಂದು ಬಗೆಯಿಂದ ಕರವೆ ಆದರೂ, ಅದು ಕ್ರಯವೆಂದು ಹೇಳಬಹುದು; ಸಾಮಾನ್ಯವಾದ ವಂತಿಗೆಯೆಂದು ತಿಳಿಯಬಹುದು. ಎಲ್ಲರೂ ಪಡೆಯಬಹುದಾದ ಸೌಕರ್ಯಕ್ಕೂ ಎಲ್ಲರೂ ವೆಚ್ಚವನ್ನು ವಹಿಸಿಕೊಳ್ಳಬೇಕು ಎಂಬುದೇ ಈ ಬಗೆಯ ಕರಗಳನ್ನು ಹಾಕುವ ವಿಚಾರಕ್ಕೆ ಮೂಲತತ್ವವಾಗಿದೆ. ಅದರಂತೆಯೆ ಇವು. ಆಧಿಪತ್ಯದ ವೆಚ್ಚ ಮತ್ತು ಸಂರಕ್ಷಣೆಯ ವೆಚ್ಚ ಇವುಗಳನ್ನು ನಾವು ಪರೋಕ್ಷವಾಗಿ ತುಂಬಿ ಕೊಡುತ್ತಿದ್ದೇವೆ; ಅವುಗಳ ಲಾಭವನ್ನು ಪ್ರತ್ಯಕ್ಷವಾಗಿ ಪಡೆಯುತ್ತಿರುವದರಿಂದ.

ಇದಿಷ್ಟು ಸಾಮಾನ್ಯವಾದ ತತ್ವವಿವೇಚನೆಯನ್ನು ಮಾಡಿದ ಮೇಲೆ ಇನ್ನು ಭಾರತದೊಳಗಿನ ಇಂದಿನ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬ ನಾಗರಿಕನು ಎಷ್ಟು ಪ್ರಮಾಣದವರೆಗೆ ಕರವನ್ನು ಸಹಿಸಲಿಕ್ಕೆ ಶಕ್ತಿಯುಳ್ಳವನಾಗಿದ್ದಾನೆ ಮತ್ತು ಅವರವರ ಆ ಯೋಗ್ಯತೆಗನುಸಾರವಾಗಿ ಯಾವ ಯಾವ ವರ್ಗದ ಜನರು ಎಂತಹ ರೀತಿಯಿಂದ ಕರಗಳನ್ನು ಕೊಡುತ್ತಿದ್ದಾರೆ ಎಂಬುದನ್ನು ನೋಡಬಹುದು. ಇಂದು ದೇಶವು ಸ್ವತಂತ್ರವಿದ್ದರೂ ಕರಗಳೇನು ಕಡಿಮೆಯಾಗಲೊಲ್ಲವು ಎಂದು ಅರಿತ ಜನರು ಮಾತ್ರ ಯಾರೂ ಗೊಣಗಲಾರರು. ಇಂದಿನ ನಮ್ಮ ಸ್ವತಂತ್ರವಾದ ಪರಿಸ್ಥಿತಿಯಲ್ಲಿ ನಾವು ಹೆಚ್ಚಿನ ಪ್ರಮಾಣದಲ್ಲಿ ಕರಗಳನ್ನು ಕೊಡಬೇಕಾಗಬಹುದು— ರಕ್ಷಣೆ, ಆಡಳಿತ, ಆಹಾರ ಮುಂತಾದವುಗಳ ವೆಚ್ಚವು ಹೆಚ್ಚಾದುದರಿಂದ ಎಂಬುದನ್ನರಿತು, ಆ ಬಗೆಯ ಹೆಚ್ಚಿನ ಕರಗಳನ್ನು ಕೊಡಬೇಕಾದ ನಮ್ಮ ಯೋಗ್ಯತೆಯನ್ನು ಬೆಳೆಯಿಸಿಕೊಳ್ಳಲು ನಾವು ಗಳಿಸಿದ ಸ್ವಾತಂತ್ರ್ಯವು ಸಹಾಯಕವಾಗುವದೆಂಬ ಮಾತನ್ನು ನಾವೆಲ್ಲರೂ ಮೊದಲು ತಿಳಿದುಕೊಳ್ಳಬೇಕಾಗಿದೆ.

**ಏರಿದ ಕರಭಾರ**

ಭಾರತೀಯನ ಸರಾಸರಿ ಉತ್ಪನ್ನವು, ಮಿಕ್ಕ ರಾಷ್ಟ್ರಗಳೊಡನೆ ಹೋಲಿಸಿ ನೋಡಲಾಗಿ, ತೀರ ಸಣ್ಣದೆಂಬ ಮಾತು ನಿಜ. ಯುದ್ಧಪೂರ್ವದಲ್ಲಿ ಅರವತ್ತೈದು ರೂಪಾಯಿಗಳಾಗಿದ್ದುದು, ಇಂದಿನ ಧಾರಣೆಗಳ ಪ್ರಮಾಣದಲ್ಲಿ ಮತ್ತು ಏರಿದ ಯೋಗ್ಯತೆಗನುಸರಿಸಿ, ಅದು ಹೆಚ್ಚೇನೂ ಬೆಳೆದಿಲ್ಲ ಎಂಬ ಮಾತೂ ಅಷ್ಟೆ ನಿಜವಾದುದು. ಆದರೆ ಅದೇ ಲೆಕ್ಕವನ್ನನುಸರಿಸಿ ನೋಡಲಾಗಿ ಇಂದು ಮೂರುಪಟ್ಟು ಏರಿದ ನಮ್ಮ ಕರಭಾರವೂ ನಮ್ಮ ಶಕ್ತಿಯನ್ನು ಲಕ್ಷಿಸಿಯೆ ಏರಿದೆ ಎಂದೆನ್ನಬಹುದು. ದೃಷ್ಟಾಂತಕ್ಕಾಗಿ ಇಲ್ಲಿ ಕೆಲವು ಸಂಖ್ಯೆಗಳನ್ನು ನೋಡಬಹುದು. ಎಲ್ಲ ಪ್ರಾಂತಗಳಲ್ಲಿ ಕೂಡಿ ೧೯೩೮—೩೯ ರಲ್ಲಿ ಉತ್ಪನ್ನ ಕರ ಮತ್ತು ವಿದೇಶ ಸುಂಕಗಳನ್ನು ಸೇರಿಸಿ ೪ ಕೋಟಿ ರೂಪಾಯಿಗಳ ಸಂಗ್ರಹವಾಗಿದ್ದರೆ ಅದು ೧೯೪೮-೪೯ ರಲ್ಲಿ ೫೦ ಕೋಟಿಯ ಸಮೀಪಕ್ಕೆ ಬಂದು ಈ ವರ್ಷ ಅಂದರೆ ೧೯೪೯—೫೦ ರಲ್ಲಿ ಮತ್ತೆ ೪೮ ಕೋಟಿಗೇರಿದಿದೆ. ಆದರೆ ಭೂಮಿಯ ಮೇಲಿನ ಕರವು (ತೆರಿಗೆಯು) ಮಾತ್ರ ಅದೇ ಅವಧಿಯಲ್ಲಿ ೨೫ ಕೋಟಿಯಿಂದ ೨೬ ಕೋಟಿಗೆ ಮಾತ್ರ ಏರಿದೆ. ಇತ್ತ ಅಬಕಾರಿಯು ಕರವು ಪಾನಪ್ರತಿಬಂಧದ ಯೋಜನೆಯನ್ನು ಆಧಿಪತ್ಯಗಳು ಸ್ವೀಕರಿಸಿದುದರಿಂದ, ೧೩ ಕೋಟಿಯಿಂದ, ೧೯೪೭—೪೮ರಲ್ಲಿ ೪೦ ಕೋಟಿಗೆ ಏರಿದ್ದರೂ ಈಗ ೧೯೪೯—೫೦ ರಲ್ಲಿ ೨೭ ಕೋಟಿಗೆ ಬಂದು ತಲುಪಿದೆ. ಈ ಮೂರು ಉದಾಹರಣೆಗಳನ್ನು ಪರಿಶೀಲಿಸಿ ನೋಡಲಾಗಿ ನಮಗೆ ಒಂದು ಸಂಗತಿಯು ಗೊತ್ತಾಗುವದು. ಇಂದಿನ ನಮ್ಮ ಸರಕಾರವು ಎತ್ತ ಸಾಗಿದೆ? ಅದರ ಅಂತಿಮ ಆದರ್ಶವೇನು ಎಂಬುದು ಈ ಕರಯೋಜನೆಯ ಮೇಲಿಂದ ತಿಳಿಯಬಹುದು. ಆಯಾತ ನಿರ್ಯಾತ ಕರವು ಅಪ್ರತ್ಯಕ್ಷ ಕರವಾಗಿದ್ದು ಅದರ ಪರಿಣಾಮವು ಎಲ್ಲ ನಾಗರಿಕರ ಮೇಲೆ ಆಗುತ್ತದೆ. ಆದರೆ ಆಧಿಪತ್ಯವು ಈ ಪರೋಕ್ಷ ಕರವನ್ನು ಹೇರುವಾಗ್ಗೆ ಕೇವಲ ಸುಖದ ವಸ್ತು (Luxury goods) ಗಳ ಮೇಲೆ ಮಾತ್ರ ಅದು ಬೀಳುವಂತೆ ಎಚ್ಚರಿಕೆಯನ್ನು ತೆಗೆದುಕೊಂಡಿರುತ್ತದೆ. ಇತ್ತ ಪ್ರತ್ಯಕ್ಷ ಕರವಾಗಿದ್ದರೂ ಭೂತೆರಿಗೆಯ ಪ್ರಮಾಣವು ಮಾತ್ರ ಬದಲಾಗುವಂತಹದಿಲ್ಲ ಎಂಬುದು ಸ್ಪಷ್ಟವಾದ ಮಾತು. ಆದರೆ ಈ ವಿಷಯದಲ್ಲಿ ಪ್ರಾಂತಿಕ ಮತ್ತು ಕೇಂದ್ರ ಆಧಿಪತ್ಯಗಳು ಒಕ್ಕಲಿಗರಿಗೂ, ಕುಳಗಳಿಗೂ ಅನುಕೂಲವಾಗುವಂತಹ ಬೇರೆ ಶಾಸನಗಳನ್ನು ಆಚರಣೆಯಲ್ಲಿ ತಂದಿವೆ. ಇಂದಿನ ನಮ್ಮ ಆಧಿಪತ್ಯಗಳು ಜನರ ಹಿತವನ್ನೆ ತಮ್ಮ ದೃಷ್ಟಿಯಲ್ಲಿ ಮುಖ್ಯವಾಗಿಟ್ಟುಕೊಂಡಿರುವವು ಎಂಬುದಕ್ಕೆ ಅಬಕಾರಿಯ ಕರವು ಕಡಿಮೆಯಾದರೂ

ಚಿಂತೆಯಿಲ್ಲ—ಪಾನಪ್ರತಿಬಂಧಕ ಕಾರ್ಯಕ್ರಮವನ್ನು ಮುಂದುವರಿಸುವೆವು ಎಂದು ಮಾಡಿದ ನಿರ್ಧಾರವು ಸಾಕ್ಷಿಯಾಗಿರುವದು.

ಹೀಗೆ ಕರಗಳನ್ನು ಹೇರುವಾಗ್ಗೆ ಜನಸಾಮಾನ್ಯರ ದೃಷ್ಟಿಯನ್ನು ಎದುರಿಗಿಟ್ಟುಕೊಂಡಿದ್ದರೂ ಉತ್ಪನ್ನಕರ, ಕಂಪನಿಕರ ಮೊದಲಾದವುಗಳನ್ನು ಹೇರುವಾಗ್ಗೆ ಅವುಗಳನ್ನು ತೆರುವವನ ಯೋಗ್ಯತೆ, ಅದರಿಂದ ಅವನ ಅಸ್ತಿತ್ವ ಮತ್ತು ಅವನ ಕಂಪನಿಯ ಭವಿತವ್ಯಗಳ ಮೇಲೆ ಆಗುವ ಪರಿಣಾಮ ಇವುಗಳನ್ನು ನೋಡುವದೂ ಉಚಿತವಾಗಿದೆ. ಯುದ್ಧ ಸಮಯದಲ್ಲಿ ಎಲ್ಲ ವ್ಯಾಪಾರಿಗಳು ಮತ್ತು ಉದ್ಯಮ ಸಂಘ-ಸಂಸ್ಥೆಗಳು ಲಾಭವನ್ನು ಮಾಡಿಕೊಳ್ಳುತ್ತಿದ್ದುದರಿಂದ ಆಗಿನ ಕಾಲಕ್ಕೆ ಹೆಚ್ಚಿನ ಉತ್ಪನ್ನಕರವನ್ನು, ವಿಶೇಷ ಲಾಭದ ಕರವನ್ನು, ಕಂಪನಿಕರವನ್ನು ಹಾಕುತ್ತಿರುವದು ಉಚಿತವಾಗಿ ಕಂಡಿತು. ಆದರೆ ಇಂದಿನ ಮಿತಿಯಲ್ಲಿ ಆರ್ಥಿಕ ಆಗಸದಲ್ಲಿ ಕಾರ್ಮೋಡಗಳು ಮತ್ತೆ ಕಾಣುತ್ತಿರುವ ಸಮಯದಲ್ಲಿ ಆ ಪ್ರಮಾಣದ ಕರಗಳನ್ನು ಬೇಡುವದೆಂದರೆ ಉದ್ಯಮಕ್ಕೆ ಮತ್ತು ವೈಯಕ್ತಿಕ ಉತ್ಸಾಹಕ್ಕೆ ಭಂಗವನ್ನು ಬಯಸಿದಂತೆಯೆ ಸೈ. ಇಂದು ರಕ್ಷಣೆ, ಆಧಿಪತ್ಯ ಮತ್ತು ಆಹಾರಗಳ ಸಲುವಾಗಿ ನಾವು ಹೆಚ್ಚು ಹಣವನ್ನು ವೆಚ್ಚಮಾಡಬೇಕೆಂಬುದು ನಿಜ. ಆದರೆ ಇವು ಎಲ್ಲ ನಾಗರಿಕರಿಗೂ ಸಾಮಾನ್ಯವಾಗಿ ಸಂಬಂಧಿಸುವ ವಿಷಯಗಳಾಗಿರುವದರಿಂದ ಅವುಗಳ ಸಲುವಾಗಿ ಸಂಗ್ರಹಿಸಬೇಕಾದ ಹಣವನ್ನೆಲ್ಲ ಉದ್ಯಮಗಳಿಂದಲೇ ಆಗಲಿ ಉತ್ಪನ್ನಗಳಿಂದಲೇ ಆಗಲಿ ಪಡೆಯುವದೇನೂ ಅಗತ್ಯವಿಲ್ಲ. ಅಂತೆಯೆ ಪ್ರತ್ಯಕ್ಷ ಮತ್ತು ಪರೋಕ್ಷ ಕರಗಳ ಸುವರ್ಣ ಮಧ್ಯಮವನ್ನು ಹುಡುಕಿ ತೆಗೆಯುವದೊಂದು ಅರ್ಥಮಂತ್ರಿಯ ಕುಶಲಕರ್ಮವೆಂದೇ ಹೇಳಬಹುದು.

**ಹೊಸ ಕರಗಳು**

ಇತ್ತೀಚಿಗೆ ಎರಡುಮೂರು ಕರಗಳು ಜನರಲ್ಲಿ ಹೆಚ್ಚು ವಿವಾದವಾಗುವಂತೆ ಅಸ್ತಿತ್ವದಲ್ಲಿ ಬಂದಿವೆ. ಒಂದು ಮಾರಾಟಕರ, ಇನ್ನೊಂದು ಮನೋರಂಜನಕರ ಮತ್ತು ಮೂರನೆಯದು ಉದ್ಯೋಗ ಕರ (Employment tax). ಇವು ಮೂರು ಅಪ್ರತ್ಯಕ್ಷ ಕರಗಳಾಗಿದ್ದು, ಆಧಿಪತ್ಯಕ್ಕೆ ಸಾಕಷ್ಟು ಆದಾಯವನ್ನು ತಂದು ಕೊಡುತ್ತಲಿವೆ. ಆದರೆ ಸಾಮಾನ್ಯರ ಮೇಲೆ ಅದರ ಆಘಾತವು ವಿಪರೀತವಾಗುವದರಿಂದ ಕೇಂದ್ರ ಆಧಿಪತ್ಯವು ಇವುಗಳ ವಿಷಯವಾಗಿ ವಿಚಾರ ಮಾಡುತ್ತಿರುವದು ಸ್ವಾಭಾವಿಕವಾಗಿದೆ. ಈಗಿನ ಪ್ರಾಂತಗಳಲ್ಲಿ ಮದರಾಸು, ಮಧ್ಯಪ್ರಾಂತ ಮತ್ತು ಯುಕ್ತಪ್ರಾಂತಗಳು, ಅನುಕ್ರಮವಾಗಿ ಈ ಕರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಎತ್ತುತ್ತಿವೆ. ಇತ್ತ ಜಾಹೀರಾತುಗಳ ಕರ, ನಗರದಲ್ಲಿಯ ಸ್ಥಾವರ ಆಸ್ತಿಯ ಮೇಲಿನ ಕರ ಮತ್ತು ಪಿತ್ರಾರ್ಜಿತ ಆಸ್ತಿಯ ಮೇಲಿನ ಕರ ಇವು ಭಾರತದಲ್ಲಿ ಹೊಸದಾಗಿ ತಲೆಯೆತ್ತುತ್ತಿರುವ ಕರಗಳಾಗಿವೆ. ಕೊನೆಯ ಎರಡು ಕರಗಳು ಶ್ರೀಮಂತರಿಗೆ ಸಂಬಂಧಿಸುವಂತಹವಾಗಿದ್ದು, ಮೊದಲಿನದು ಮಾತ್ರ ಜ್ಞಾನಪಿಪಾಸೆಯು ಹೆಚ್ಚುತ್ತಿರುವ ಈ ಕಾಲದಲ್ಲಿ ಸಕಲ ನಾಗರಿಕರಿಗೂ ಅದರ ಪೆಟ್ಟು ತಗಲುವಂತಹದಾಗಿದೆ. ಚಿಕ್ಕಪುಟ್ಟ ಪತ್ರಿಕೆಗಳು ಮತ್ತು ಪತ್ರಿಕಾ ಸಂಘಗಳು ಈ ಬಗೆಯ ಕರದಿಂದ ಹೊರಗಾಗುವಂತೆಯೂ, ದೊಡ್ಡ ಪತ್ರಿಕಾ ಸಂಘಗಳೂ ವಿಶೇಷ ಲಾಭದಲ್ಲಿರುವಂತಹ ಪತ್ರಿಕೆಗಳೂ ಕೊಡುವಂತೆಯೂ ಈ ಕರವನ್ನು ಯೋಜಿಸಲು ಬರಬಹುದು. ಕೇಂದ್ರ ಆಧಿಪತ್ಯವು ಈ ವಿಷಯದಲ್ಲಿ ಕೈಕೊಳ್ಳಬಹುದಾದ ಕಾರ್ಯವು ವಿಚಾರಾರ್ಹವಾಗುವದರಲ್ಲಿ ಸಂದೇಹವಿಲ್ಲ.

ಈಗ ಕೇಂದ್ರ ಆಧಿಪತ್ಯಕ್ಕೆ ನಾವು ಕೊಡುವ ಕರಗಳ ಪ್ರತಿಯೊಂದು ರೂಪಾಯಿಯಲ್ಲಿ ಮೂರೂವರೆ ಆಣೆಗಳು ಉತ್ಪನ್ನಕರದಿಂದಲೂ ಎರಡಾಣೆಗಳು ಕಂಪನಿ ಕರದಿಂದಲೂ, ಮೂರಾಣೆ ಕೇಂದ್ರ ಅಬಕಾರಿಯಿಂದಲೂ ಸಂಗ್ರಹವಾಗುತ್ತಿದ್ದರೆ ಆಯ್ದೂಕಾಲಾಣೆಗಳು ವಿದೇಶಕರ (customs)ದಿಂದ ಮತ್ತು ಮಿಕ್ಕದ್ದು ಅನ್ಯಕರಗಳಿಂದ ದೊರೆಯುತ್ತದೆ. ಇತ್ತ ಕಳೆದ ಹತ್ತುವರ್ಷಗಳಲ್ಲಿ ಪ್ರಾಂತಿಕ ಆಧಿಪತ್ಯಗಳ ಕರ ಸಂಗ್ರಹದಲ್ಲಿ ಒಂದೂವರೆ ಆಣೆ ತೆರಿಗೆ, ಒಂದೂವರೆ ಆಣೆ ಅಬಕಾರಿಯಿಂದ ಎರಡೂಮುಕ್ಕಾಲಾಣೆ ವಿದೇಶ ಮತ್ತು ಉತ್ಪನ್ನ ಕರಗಳಿಂದ ಬರುತ್ತಿದ್ದರೆ ಹತ್ತಾಣೆಗಳು ಅನ್ಯ ಕರಗಳಿಂದ ದೊರೆಯುತ್ತವೆ. ಇವುಗಳಲ್ಲಿ ಮಾರಾಟ ಕರ, ಮನೋರಂಜನ ಕರ ಉದ್ಯೋಗ ಕರ ಮತ್ತು ಸ್ಥಾವರ ಆಸ್ತಿಯ ಮೇಲಿನ ಕರಗಳಿರುತ್ತವೆ. ಇದರಿಂದ ಪ್ರತಿಯೊಂದು ಕರದ ಸ್ಥಾನ ಮತ್ತು ಭಾರವು ಎಷ್ಟು ಎಂಬುದು ಸ್ಪಷ್ಟವಾಗುತ್ತದೆ.

ಮೊನ್ನೆ ಮೊನ್ನೆ ಸ್ಪಷ್ಟಮಾಡಿದ ಆರ್ಥಿಕ ಸಮೀಕರಣದ ವಿಚಾರಗಳು ಇಂದು ಪ್ರಾಂತ ಮತ್ತು ಸಂಸ್ಥಾನಗಳಲ್ಲಿರುವ ಕರ ಪ್ರಮಾಣದ ವಿಷಮತೆಯನ್ನು ಹೋಗಲಾಡಿಸುವಂತೆ ಅನ್ಯಥಾ ಭಾರವೆನಿಸಬಹುದಾದ ಕರಗಳ ವಿಷಯವಾಗಿ ಕೂಲಂಕುಷವಾದ ಯೋಚನೆಯನ್ನು ಮಾಡುವ ಹೊಣೆಯನ್ನು ಕೇಂದ್ರಕ್ಕೆ ಕೊಡುತ್ತವೆ. ಅಂತೆಯೇ ಪ್ರಾಂತ ಪ್ರಾಂತಗಳಲ್ಲಿಯೂ, ಪ್ರಾಂತ ಸಂಸ್ಥಾನಗಳಲ್ಲಿಯೂ ಎದ್ದು ಕಾಣುವ ಕೆಲವು ಕರಗಳ ಭೇದವು ಇನ್ನು ಮುಂದೆ ಮಾಯವಾಗುತ್ತದೆ. ಇಂದಿನ ಮಾರಾಟ ಕರ ಪ್ರಮಾಣದ ವೈವಿಧ್ಯ ಮತ್ತು ತೊಂದರೆ, ನಾಳಿನ ಜಾಹೀರಾತಿನ ಕರದ ಭವಿತವ್ಯ ಮತ್ತು ಮಿಕ್ಕ ಕರಗಳ ಅಂದಾಜನ್ನು ಕೇಂದ್ರವು ಗೊತ್ತುಮಾಡಿಕೊಂಡು ಮಾರ್ಗದರ್ಶನ ಮಾಡಬಹುದಾಗಿದೆ. ಮಿಕ್ಕ ರಾಷ್ಟ್ರಗಳಲ್ಲಿರುವ ಕರಭಾರಕ್ಕಿಂತ ಭಾರತೀಯನ ಕರಭಾರವು ಅದೆಷ್ಟೋ ಕಡಿಮೆಯಾಗಿದ್ದರೂ ಆತನ ಆದಾಯ, ಆತನ ವೆಚ್ಚ ಇವುಗಳನ್ನು ನೋಡಲಾಗಿ ಅದು ಸಾಕಷ್ಟು ಜಡವಾದುದೆ ಆಗಿದೆ. ಆದರೂ ಸ್ವಾತಂತ್ರ್ಯವನ್ನು ಸ್ಥಿರಗೊಳಿಸಿಕೊಂಡು ನಮ್ಮ ರಾಷ್ಟ್ರವನ್ನು ಬಲಿಷ್ಠ ಮತ್ತು ಸಂಪನ್ನವಾಗುವಂತೆ ಮಾಡಬೇಕಾದರೆ ನಾವು ನಮ್ಮ ಹೊಣೆಯನ್ನು ಚೆನ್ನಾಗಿ ಅರಿತುಕೊಳ್ಳಬೇಕಾಗುವುದು. ಹೆಚ್ಚಿನ ಉತ್ಪಾದನೆ, ಹೆಚ್ಚಿನ ಉತ್ಪನ್ನ, ಹೆಚ್ಚಿನ ಕರಭಾರ, ಹೆಚ್ಚಿನ ಸಂರಕ್ಷಣೆ, ಹೆಚ್ಚಿನ ಸಾಮಾಜಿಕ ಸುಖ ಇವು ಇಂದು ನಮ್ಮ ಧ್ಯೇಯವಾಗಬೇಕು.

---

## ವಿನೋದದಲ್ಲಿ

# ಭೀಮಸ್ಮೃತಿ ಅಭಿವಂದನೋತ್ಸವ

ಲೇಖಕರು:
ಶ್ರೀ. ನಾ. ಕಸ್ತೂರಿ
ಎಂ. ಎ., ಬಿ. ಎಲ್.

( ನಮ್ಮ ಸ್ವಂತ ಸುದ್ದಿಗಾರರಿಂದ )

### ಪೀಠಿಕೆ

೧೯೪೯ರಲ್ಲಿ ದಿಲ್ಲಿ ಕೇಂದ್ರ ಸಭೆಯಲ್ಲಿ ಚರ್ಚೆ ನಡೆದ ನಂತರ, ಅಂಗೀಕಾರಪಡೆದ ಭೀಮಸ್ಮೃತಿಯ ೬ನೆಯ ವಾರ್ಷಿಕ ಅಭಿವಂದನೋತ್ಸವವನ್ನು ಈ ಊರಿನ ಮಹಿಳಾಮಣಿಯರೂ ಗಂಡುರನ್ನಗಳೂ ಬೇರೆ ಬೇರೆ ಸಮ್ಮೇಲನಗಳಲ್ಲಿ ನಿನ್ನೆ ದಿನ ಕರತಾಡನ ಭುಜತಾಡನಗಳಿಂದ ಕೊಂಡಾಡಿದರು. ವರ್ಷವರ್ಷ ಭಾರತಾದ್ಯಂತವೂ ಈ ಸ್ಮೃತಿಯ ಪಂಕ್ತಿಪಂಕ್ತಿಯೂ ಜನಮನದಲ್ಲಿ ಹೆಚ್ಚು ಹೆಚ್ಚು ಆಳವಾಗಿ ಕೆತ್ತಲ್ಪಡುತ್ತಿರುವುದು ಗಮನಾರ್ಹವಾದ ವಿಚಾರ. ಸಂಸ್ಕೃತವನ್ನೇ ಭಾರತದ ರಾಷ್ಟ್ರಭಾಷೆಯಾಗಿ ಅಭಿಷೇಷ ಮಾಡಬೇಕೆಂದು ಕಂಕಣಕಟ್ಟಿಕೊಂಡಿದ್ದ ಡಾ. ಅಂಬೇಡ್ಕರವರ, ಹಾಗೂ ತಾರಕೇಶ್ವರ ಪಂಡಿತ ಮಂಡಲಿಯವರಿಂದ ನ್ಯಾಯವೀರ ಎಂಬ ಬಿರುದನ್ನು ಪಡೆದ ಜನಾಬ್ ನಜಿರುದ್ದೀನ್ ಅಹಮ್ಮದವರ, ಸಾಕ್ಷಾತ್, ಸ್ವಲ್ಪವೂ ತಿದ್ದದ, ಭಾವಚಿತ್ರಗಳನ್ನು ಉಭಯ ಸಮ್ಮೇಲನಗಳಲ್ಲೂ ಅನಾವರಣ ಮಾಡಲಾಯಿತು. ಹೀಗೆ ಸ್ತ್ರೀ ಪುರುಷರು ಪೃಥಕ್ಕಾಗಿ ಒಮ್ಮೆಲೆ ನಡೆಸಿದ ಸಮಾರಂಭಗಳಿಗೆ ನಮ್ಮ ಬಾತ್ಮೀದಾರರು ಭೇಟಿ ಇತ್ತು, ಆಯಾ ಸಭೆಯ ಅಧ್ಯಕ್ಷ ಭಾಷಣವನ್ನು ಮಾತ್ರ ನಮಗೆ ಒದಗಿಸಿಕೊಟ್ಟಿದ್ದಾರೆ. ಅವುಗಳನ್ನು ನಮ್ಮ ವಾಚಕವೃಂದದ ಮುಂದೆ, ಸಂತೋಷದಿಂದ ಅರ್ಪಿಸುತ್ತೇವೆ.

### ಮಹಿಳಾಸಭೆಯ ಸನ್ಮಾನ್ಯ ಅಧ್ಯಕ್ಷಿಣಿಯ ಭಾಷಣ

ಸೋದರಿಯರೆ! ಭಾರತದ ಸ್ವಾತಂತ್ರ್ಯ ಸಂಗ್ರಾಮದ ಮಹಾಯಜ್ಞಕ್ಕೆ, ನಾವು ಅಂದರೆ, ನಮ್ಮ ತಾಯಂದಿರು, ತಮ್ಮ ಪತಿ ಪುತ್ರರನ್ನು ಆಶೀರ್ವದಿಸಿ ಕಳುಹಿಸಿದೆವು, ಅಂದರೆ, ದರು. ಅಲ್ಲದೆ, ಗಂಡಸರ ವರ್ಚಸ್ಸು ಕಡಿಮೆಯಾದಾಗ, ನಾವೇ ಮುನ್ನುಗ್ಗಿ ಸತ್ಯಾಗ್ರಹ ಹೂಡಿ, ಕಾರಾಗೃಹವಾಸವನ್ನೂ ಬೆಳಗಿಸಿ ಮೆರವಣಿಗೆಗಳ ಮುಂಚೂಣಿಯಲ್ಲಿ ಮಿಂಚಿ, ಕಳೆಗೂಡಿಸಿ ಲಾಠಿ ಪ್ರಹಾರವನ್ನೂ ಶಿರಸಾ ವಹಿಸಿದೆವು. ಇದನ್ನರಿತ ಕಾಂಗ್ರೆಸ್ ವಿರೋಧಿಗಳು ಕೂಡ, ಬಾಪೂಜಿಯ ಹರಿಜನೋತ್ಸಾಹದ ವಿದ್ವೇಷಿಗಳು ಕೂಡ, ಕೈಎತ್ತಿ ಮೂಗಿನ ಮೇಲಿರಿಸಿ, ಮೂಕರಾದರು. ಡಾ|| ಪಟ್ಟಾಭಿಯವರ ಆಂಗ್ಲ ಗ್ರಂಥದಲ್ಲಿ ನೀವು ಇದನ್ನೆಲ್ಲ (ಓದಿದೇವೆ! ಓದಿದೇವೆ!). ಬೌದ್ಧ ಮತದತ್ತ ಬುದ್ಧಿ ತಿರುಗಿಸುವುದೆ? ಇಸ್ಲಾಂ ಧರ್ಮಕ್ಕೆ ಸಲಾಮು ಹೊಡೆಯುವುದೆ?— ಎಂಬ ಡೋಲಾಯಮಾನದಲ್ಲಿದ್ದ ಶ್ರೀ ಭೀಮರಾವ ಅಂಬೇಡ್ಕರರು ಕೂಡ, ಹಿಂದೂ ಮಹಿಳೆಯರ ವೀರ ವೈರಾಗ್ಯವನ್ನು ಮೆಚ್ಚಿ, ಇಂಥವರ ಸಮುದಾಯದಲ್ಲಿರುವುದೇ ಹೆಮ್ಮೆ ಎಂದು ಮನಗಂಡು ತಾಯಂದಿರ ಅಡಿದಾವರೆಯಲ್ಲಿ ತಮ್ಮ ಸ್ಮೃತಿಯನ್ನು ಕಾಣಿಕೆಯನ್ನಾಗಿ ಅರ್ಪಿಸಿದರು. (ಜೈ, ಹಿಂದು ಕೋಡ್!)

ಆಗ ಮೊಳೆತ ಕೋಡಿಂದಲೇ ಅಲ್ಲವೆ ನಾವು ಈಗ ಮೆರೆಯುತ್ತಿರುವುದು? ನಮಗೆ ದೊರೆತ ಮೊದಲನೆಯ ಭಾಗ್ಯವೆಂದರೆ, ಆರ್ಥಿಕ ಸ್ವಾತಂತ್ರ್ಯ, ನಾವು ದುಡಿದುತಂದ ಹಣ ನಮ್ಮದು; ನಮ್ಮ ವಿವಾಹ ಕಾಲದಲ್ಲಿ ನಮಗೆ ದೊರೆತ ಶುಲ್ಕ ನಮ್ಮದು; ಗಂಡುಮಕ್ಕಳಿಗೆ ಸರಿಸಮಾನವಾಗಿ ನಾವೂ ಮನೆ ಆಸ್ತಿಯನ್ನು ಪಾಲುಮಾಡಬಹುದು; ನನ್ನಪ್ಪ ಅಪ್ಪಕೊಟ್ಟ ಎಮ್ಮೆಯ ಹಾಲಿನಿಂದ ಬಂದ ಬೆಣ್ಣೆಯನ್ನು ಕಾಯಿಸಿದ ತುಪ್ಪದಲ್ಲಿ ನಮ್ಮ ಅಪ್ಪಣೆ ಇಲ್ಲದೆ ಒಂದು ಚಮಚ ಕೂಡ ಒಬ್ಬರೂ ಬಡಿಸಿಕೊಳ್ಳುವಂತಿಲ್ಲ; ಗಂಡ ಬಿಟ್ಟುಹೋದ ಹಣವನ್ನು ಕೂಡ ನಾವು ಬಾಧೆ ಇಲ್ಲದೆ ಬಳಸಿಕೊಳ್ಳಬಹುದು. ನಮಗೆ ತೋರಿದವರಿಗೆ, ನಮ್ಮ ತವರುಮನೆಯ ಬೆಕ್ಕಿನ ಮರಿಗೆ ನಾವು ಈ ಎಲ್ಲ ಆಸ್ತಿಗಳನ್ನೂ ಬರೆದಿಡಬಹುದು. (ಮ್ಯಾವ್! ಮ್ಯಾವ್!). ಸರ್ಕಾರಿ ಚಾಕರಿಗಳೆಲ್ಲದರಲ್ಲೂ ನಾವು ಸ್ಥಾನ ಗಳಿಸಿದ್ದೇವೆ. ನಾವು ಪುರುಷರಿಗಿಂತ ಚೆನ್ನಾಗಿ ಡಿಗ್ರಿಗಳನ್ನು ಗಳಿಸಬಲ್ಲೆವು; ಪರೀಕ್ಷೆಗಳೆಂದರೆ, ನಾವು ಸೀತಾದೇವಿಯಂತೆ ಅಗ್ನಿಯೊಳಗೂ ಹಂಸದಂತೆ ಇಳಿದೇವು. ಅಂದಮೇಲೆ, ಐ. ಎ. ಎಸ್, ಐ. ಪಿ. ಎಸ್, ಐ. ಡಿ, ಎಸ್, ಐ. ಸಿ. ಎಸ್. ಗಳಲ್ಲಿನ ಹುದ್ದೆಗಳೆಲ್ಲ ನಮ್ಮವೇ. ಕಂಟ್ರೋಲ್ ಇಲಾಖೆಗೆ ನಮ್ಮಂಥ ಕಂಟ್ರೋಲ್‌ನವರು ಎಲ್ಲಿಂದ ಸಿಗುತ್ತಾರೆ? ಗಂಡನ ವರಮಾನವನ್ನು ಪೋಲುಮಾಡುವ ಅವಿಚಾರಿ ಜನವೆಂದು ನಮ್ಮನ್ನು ಇನ್ನು ಯಾರೂ ದೂರುವಂತಿಲ್ಲ. ನಮಗೆ ಹೆದರಿಕೊಂಡು ಬೇರೊಂದೆಡೆ ಈ ದಿನವೇ ಸಮ್ಮೇಲನ ಹೂಡಿರುವ ಪುರುಷಾಮೃಗಗಳನ್ನು ಇನ್ನು ಹೆಣ್ಣಿನ ಹಣವನ್ನು ದುಂದುಮಾಡುವವರೆಂದು ಜಗ ಹೀಯಾಳಿಸಲಿ. ನಮ್ಮ ಅನುಗ್ರಹಕ್ಕಾಗಿ ಕಾದು, ನಾವು ಚೆಲ್ಲುವ ಚಿಲ್ಲರೆಗಾಗಿ ಗಂಡಸರು ಕೈನೀಡುವ ಕಾಲವನ್ನು ಒದಗಿಸಿಕೊಟ್ಟವರು (ಭೀಮ ಸ್ಮೃತಿಕಾರರು !)

ಹಿಂದೆಲ್ಲ, ನಾವು ಆರ್ಥಿಕ ಸ್ವಾತಂತ್ರ್ಯವಿಲ್ಲದೆ, ದುಡಿದು ತರುವ ಪುರುಷನ ಪ್ರೀತಿಯನ್ನುಳಿಸಿಕೊಳ್ಳಲೋಸುಗ ಅವನ ಕಣ್ಣಿಗೆ ಹಿತವೆನಿಸುವ ಒಡವೆಗಳನ್ನೇ ತೊಟ್ಟೆವು, ಅವನ ಮನಕ್ಕೊಪ್ಪುವಂಥ ಉಡಿಗೆಗಳನ್ನೇ ಉಟ್ಟೆವು. ಅವನ ಆಟದ ಗೊಂಬೆಯಾಗಿ ಕೆಟ್ಟೆವು; ಅವನು ಬಯಿಸಿದಂತೆ ಅತ್ತೆವು, ನಕ್ಕೆವು; ಬಂಡವಾಳಶಾಹಿ ಯಜಮಾನನ ಬಂಡವಾಳನ್ನೇ ಹೊಗಳುತ್ತ, ಅವನ ತಾಳಕ್ಕೆ ತಕ್ಕಂತೆ ಕುಣಿದೆವು. ಆದರೆ, ಇಂದು (ಜೈ! ಹಿಂದೂ ಕೋಡ್ ! )

ಇನ್ನು ಒಂದೇ ಒಂದು ಮಾತು. ವಿವಾಹದ ಗಡಿಬಿಡಿಯಲ್ಲಿ ಹೊಗೆಯಾಡುತ್ತಿದ್ದಾಗ, ಕೇವಲ ಕಾಳಿದಾಸನ ಕಾಲದಿಂದಲೂ ನಮ್ಮ ಕಣ್ಣು ಕೆಂಪುಗಾಗುತ್ತಿತ್ತಲ್ಲವೆ? ಶ್ರೀ ಭೀಮರಾವ ಅಂಬೇಡಕರರು ಇದನ್ನು ತಪ್ಪಿಸಿ, ಸಬ್‌ರಜಿಸ್ಟ್ರಾರರೆಂಬ ಹೊಸ ಪುರೋಹಿತನನ್ನೂ ಹೊಸ ಋತ್ವಿಕ್ ಹೋತಾರ ಮುಂತಾದವುಗಳಿಗೆ ಮೂರು ಸಾಕ್ಷಿಗಳನ್ನೂ ಒದಗಿಸಿದರು. ಮಸಿಯೇ ಹೋಮದ ತುಪ್ಪ; ಕಡ್ಡಿಯೇ ಸ್ವಾಹಾಪಾತ್ರೆ; ಆಫೀಸೇ ಯಾಗಕುಂಡ. ಲಗ್ನಕಾಲದಲ್ಲಿ ಇನ್ನು ಅಕ್ಕಿಕಾಳೇ ಬೇಕಿಲ್ಲವೆನಿಸಿದರು. ಸೋಡಾಯುಗವನ್ನೇ ಸ್ವರ್ಗದಿಂದ ಭೂಮಿಗೆ ಇಳಿಸಿದರು.

ಚಂಚಲರಾದ ಪುರುಷರು ವಂಚಕರಂತೆ ಬೇರೊಬ್ಬಳೊಂದಿಗೆ ಸರಸವಾಡಿದರೆ ನಾವು ವಕೀಲರ ಮೂಲಕ ಅವರನ್ನು ಕೋರ್ಟಿಗೆಳೆದು ಬೋನೊಳಗೆ ನಿಲ್ಲಿಸಿ, ಬುದ್ಧಿ ಕಲಿಸಬಹುದಾಗಿದೆ. ಜಿಂಕೆಯನ್ನು ಕೊಲ್ಲಲು ಹೋಗಿ, ಶಕುಂತಲೆಯನ್ನು ಕಂಡು ಮೋಹಿಸಿ, ಮದುವೆಯಾಗಿ, ಮನೆಗೆ ತಂದ, ದುಷ್ಯಂತನ ಕಥೆ ಇನ್ನು ಈ ಭರತಖಂಡದಲ್ಲಿ ನಡೆಯುವಂತೆಯೇ ಇಲ್ಲ—ಮತ್ತೊಬ್ಬ ಭರತ ಇನ್ನು ಈ ದೇಶದಲ್ಲಿ ಹುಟ್ಟಲಾರ. ಬಹುಪತ್ನೀಲೋಲರಾದ ರಾವಣ, ಏಕೆ, ದಶರಥನ ಲೀಲಾವಿನೋದ ಇನ್ನು ಅಡಗಿತು- ನಿಜಕ್ಕೂ ರಾಮರಾಜ್ಯವನ್ನು ಬಲವಾದ ಬುನಾದಿಯ ಮೇಲೆ ನಿಲ್ಲಿಸಿದವರು ಡಾ|| ಅಂ|| ಪ್ರಭೃತಿಗಳು. ಅನಸೂಯೆಗೂ ಅಸೂಯೆ ಬರುವಂಥ ಭಾಗ್ಯ ನಮ್ಮದು. ತಾರಾ, ಮಂಡೋದರೀ, ದ್ರುಪದರಾಜ ಕುಮಾರಿ,—ಇಂಡಿಯಾದ ನಾರೀಮಣಿಯರು ಎಂಥ ನೊಂದ ಜೀವಿಗಳಾಗಿದ್ದರು. (ಪಾಪ, ಪಾಪ!) ನಾನು ಸುಮ್ಮನೆ "ಗವಿತಗರ್ವಣ" ಮಾಡುತ್ತಿದೇನೆ, ಎಂದು ಆಕ್ಷೇಪಿಸಬೇಡಿ. ದಯವಿಟ್ಟು ಗದ್ದಲ ನಿಲ್ಲಿಸಿ. ಗದ್ದಲ ಮಾಡುವದಕ್ಕಾದರೂ ನಮಗೆ ಧೈರ್ಯ ತಂದದ್ದು ಈ ಸ್ಮೃತಿಯಲ್ಲವೇ ? ನಾವೇ ಸ್ವತಃ ಜುಡೀಷಿಯಲ್ ಸೆಪರೇಶನ್ ಎಂಬ ಗದ್ದಲಾಸ್ತ್ರವನ್ನು ಈ ಭೀಮಬಿಲ್ಲಲ್ಲಿ ಹೂಡಿ, ಪುರುಷಪಾಶವನ್ನು ಧ್ವಂಸ ಮಾಡಬಹುದು. ಇನ್ನು ನ್ಯಾಯಸ್ಥಾನಗಳೇ ನಮ್ಮ ತಪೋವನಗಳು; ಅಡುಗೆ ಮನೆಗಳಲ್ಲ—ವಕೀಲರೇ ನಮ್ಮ ಗುರುಗಳು; ಅತ್ತೆಯರಲ್ಲ. ಇನ್ನು ಮೇಲೆ ನಮ್ಮ ಪಾಲಿನ ಮೇಲೆ ನಾವು ನಿಂತುಕೊಳ್ಳಬಹುದಾಗಿದೆ; ಬೊಲೋ.... (ಭೀಮಸ್ಮೃತಿಕೀ ಜೈ)!

### ಪುರುಷ ಪರಿಷತ್ತಿನ ಅಧ್ಯಕ್ಷರ ಭಾಷಣ

ಗೆಳೆಯರೇ! ನಿಮಗೆ ನೆನಪಿದೆಯೇ? ಎಂಟು ವರುಷಗಳ ಹಿಂದೆ ಪರಂಗಿಯವರ ದಬ್ಬು ಆಳ್ವಿಕೆಯಿಂದ ನಮಗೆಲ್ಲ ಸ್ವಾತಂತ್ರ್ಯ ದೊರೆತದ್ದು ? ಆರು ವರುಷಗಳ ಹಿಂದೆ ಸ್ತ್ರೀ ಸಮುದಾಯದಿಂದ ನಮಗೆಲ್ಲ ಬಿಡುಗಡೆ ದೊರೆತದ್ದು ? ಮದುವೆ ಎಂಬುದು ಮಧು ಎಂಬ ಸವಿಮಾತಿನಿಂದಲೂ 'ವೆ' ಎಂಬ ವಾಕರಿಕೆ ಸೂಚಕ ಶಬ್ದದಿಂದಲೂ ಉತ್ಪತ್ತಿಯಾಯಿತೆಂದು ಶಬ್ದಶಾಸ್ತ್ರಪ್ರವೀಣರು ಹೇಳುತ್ತಾರೆ. ಆದರೆ, ಆ ಮಧು 'ವೆ' ಆಗುವದರೊಳಗೆ ನಮಗೆ ವಿಚ್ಛೇದನಾ ಸೌಲಭ್ಯವನ್ನೊದಗಿಸಿದ್ದು ಯಾವುದೆಂದರೆ, (ಭೀಮಸ್ಮೃತಿ! ಭೀಮಸ್ಮೃತಿ!). ವಿಚ್ಛೇದಕ್ಕೆ ಸರ್ವತೋಮುಖವಾದ ಅನುಕೂಲಗಳನ್ನು ನಮಗೆ ಕಲ್ಪಿಸಿ ಕೊಟ್ಟ ಶ್ರೀ ಭೀಮರಾವ ಅವರಿಗೆ ನಾವು ಎಷ್ಟು ಋಣಿಗಳಾಗಿದ್ದರೂ ಸಾಲದಲ್ಲವೇ ? (ಅಲ್ಲ! ಅಲ್ಲ!). ಆಗಿನ ಕಾಲದ ರಾಜ್ಯಾಂಗ ರಚನಾ ಸಭೆಯ ಅಧ್ಯಕ್ಷರಾಗಿದ್ದ ಡಾ|| ರಾ|| ಪ್ರಸಾದರವರು ಸದರಿ ಸ್ಮೃತಿಯನ್ನಾಕ್ಷೇಪಿಸುತ್ತ, ತಮ್ಮ ಪತ್ನಿಯವರಂಥ ಲಕ್ಷೋಪಲಕ್ಷ ಮಹಿಳೆಯರನ್ನು ಕೇಳದೆ ಈ ಸ್ಮೃತಿಯನ್ನು ಜಾರಿ ಮಾಡಲಾಗದೆಂದರು. ಆದರೆ, ಮಹಿಳೆಯರು ಎಂದಿಗೂ ಇದಕ್ಕೆ ಒಪ್ಪಿಗೆ ಕೊಡುತ್ತಿರಲಿಲ್ಲ. ಇದು ಪುರುಷರ ಕಲ್ಪತರು; ನಮ್ಮ ಚಿಂತೆಯನ್ನು ಕೊನೆಗಾಣಿಸುವ ಚಿಂತಾಮಣಿ.

ನಮ್ಮ ಕೈಹಿಡಿದವಳ ಅನುಮತಿಯನ್ನು ಪಡೆಯದೆ, ಅವಳನ್ನು ಎರಡು ಸಂವತ್ಸರಗಳಿಗೆ ಮೀರಿದ ಕಾಲ ಅಗಲಿದ್ದರೆ ಸಾಕು. ನಮಗೆ ಕೋರ್ಟು ಆಜ್ಞೆಯಂತೆ ಜುಡೀಷಿಯಲ್ ಸೆಪರೇಷನ್ ದೊರೆಯುವದು ! ರೇಷನಿಲ್ಲದಿದ್ದರೂ ಸೆಪರೇಷನನ್ನಾದರೂ ಒದಗಿಸಿದ ಕೀರ್ತಿ ಶ್ರೀ ಭೀಮ ನರಸಿಂಹೇತ್ಯಾದಿ ಅಭಿನವ ಪರಾಶರರದ್ದೇ ಆಗಿದೆ. (ಜೈ!) ಇದು ನಮಗೆ ಎಂದೆಂದಿಗೂ ಅನುಕೂಲಿಸುವ ಏಣಿ. ಲಗ್ನದ ದಿನದಿಂದ ಉದ್ದಕ್ಕೂ ಹುಚ್ಚನಂತೆ ವರ್ತಿಸಿದರೆ (ಅದೇನು ಅಷ್ಟು ಶ್ರಮಸಾಧ್ಯವೇ ? ಹುಚ್ಚು ತಾನಾಗಿಯೇ ಮೆಟ್ಟಿಕೊಳ್ಳುವಾಗ) ಸಾಕು, ವಿಚ್ಛೇದನಾ ಸೌಲಭ್ಯ ! (ಜೈ!) ಮದುವೆಯಾಗಿ, ಗೃಹಸ್ಥಾಶ್ರಮದಿಂದ ಶ್ರಮಪಡುವ ನಮಗೆಲ್ಲ ಇದು, ಮುಳುಗುವವರಿಗೆ ಜೊಂಡು ಸಿಕ್ಕಿದ ಹಾಗೆಯೆ.

ಅಲ್ಲದೆ, ಸ್ತ್ರೀಗಳಿಗೆ ಸಂಪೂರ್ಣವಾಗಿ ಸ್ವತ್ತು ಸ್ವಾಮ್ಯಗಳ ಹಕ್ಕನ್ನು ನೀಡಿರುವದೂ ನಮ್ಮ ದೃಷ್ಟಿಯಿಂದ ನಮ್ಮ ಭಾಗ್ಯೋದಯ. ಅವರಂತೂ ಈಚೆಗೆ, ನಮ್ಮನ್ನು ಮೂದಲಿಸುವದಕ್ಕಾಗಿ ಕಾಲೇಜು ಸೇರಿ ಕನ್ನಡಕ ಸಿಕ್ಕಿಸಿಕೊಂಡು ಕಾಗದ ತಿಂದು ನಂಬರ ಗಳಿಸಿ ಹುದ್ದೆ ಸಂಪಾದಿಸುತ್ತಿದ್ದಾರೆ. ಕಾರಕೂನಿಯಿಂದ ಹಿಡಿದು ಮ್ಯಾಜಿಸ್ಟ್ರೀ ಸಬ್‌ರೆಜಿಸ್ಟ್ರೀ ಎಂಜಿನೀರೆ ಗವರ್ನೆಸ್ಸು ದಂಡನಾಯಕಿಯಾದಿಯಾಗಿ ಅಧಿಕಾರ ವಹಿಸಿ ಗಂಟು ಮಾಡುತ್ತಿರುವರು. ಅವರಿಗೆ ಹಿತವೆನಿಸುವ ಉಡಿಗೆ ತೊಡಿಗೆಗಳನ್ನು ನಮಗೆ ಹೇರಿ, ಅವರು ನಮ್ಮನ್ನು ಕಾರಲ್ಲಿ ಕೂರಿಸಿ ಡ್ರೈವ್ ಹೋಗುತ್ತಿದಾರೆ; ಅವರು ಚಾ ಎಂದಾಗ ಚೂ ಎನ್ನದೆ ನಾವು ನಡೆದರೆ ಸಾಕು. ನಮಗೆ ನೆಮ್ಮದಿ ದೊರೆಯುವದು. ಇದು ನಮ್ಮ ಭಾಗ್ಯೋದಯವಲ್ಲದಿದ್ದರೆ, ಮತ್ತೇನು ?

# ಮಲೆನಾಡಿನ ಅಭಿವೃದ್ಧಿಯೆಂತು?

ಸೊಗಯಿಸಿ ಬಂದ ಮಾಮರನೆ ತಳ್ತಲವಳ್ಳಿಯೆ ಪೂತ ಜಾತಿ ಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ
ನಗೆನೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಳ್ಪೊಡಾವ ಬೆ
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್ ॥

ಲೇಖಕರು: ಸಂ. ವಾ. ಕೃಷ್ಣಮೂರ್ತಿರಾವ್,
( ಭಾರತ ಘಟನಾ ಸಮಿತಿಯ ಸದಸ್ಯರು )

ಬನವಾಸಿಯು ಮಲೆನಾಡಿನ ಮಧ್ಯದಲ್ಲಿದೆ. ಸಾವಿರ ವರ್ಷಗಳ ಹಿಂದೆ ಕವಿಸಾರ್ವಭೌಮ ಪಂಪನು ಮುಕ್ತಕಂಠದಿಂದ ಹೊಗಳಿದ ಬನವಾಸಿ, ರಾಜಾಧಿರಾಜರ ರಾಜಧಾನಿಯಾಗಿದ್ದು, ಧರ್ಮ ಮತ್ತು ಸಂಸ್ಕೃತಿಗಳ ಕೇಂದ್ರವಾಗಿದ್ದ ಬನವಾಸಿ ಇಂದು ಒಂದು ಮಲೆನಾಡಿನ ಹಾಳು ಕೊಂಪೆಯಾಗಿದೆ. 'ಚಾಗದ, ಭೋಗದಕ್ಕರದ ಗೇಯದ ಗೊಟ್ಟಿಯಲಿಂಪಿನಿಂಪುಗಳ್ಗಾಗರಮಾದ' ಬನವಾಸಿಯ ಅವಸ್ಥೆಯೇ ಇಂತಾದ ಮೇಲೆ ಮಲೆನಾಡಿನ ಎಲ್ಲ ಪಟ್ಟಣಗಳ, ಹಳ್ಳಿಗಳ ಅವಸ್ಥೆಯನ್ನು ಹೇಳಬೇಕಾಗಿಲ್ಲ. ಎರಡುನೂರ ಐವತ್ತು ವರ್ಷಗಳ ಹಿಂದೆ ಸಹ ನಾಡಕವಿಯಾದ ಸರ್ವಜ್ಞ ಹೀಗೆಂದಿದ್ದ:

ಕಿಚ್ಚುಂಟು ಕೆಸರುಂಟು ಬೆಚ್ಚನಾ ಮನೆಯುಂಟು
ಇಚ್ಛೆಗೆ ಬರುವ ಸತಿಯುಂಟು ಮಲೆನಾಡ
ಮೆಚ್ಚು ನೋಡೆಂದ ಸರ್ವಜ್ಞ ॥

ಮದಕರಿಯನ್ನು ಮೆಟ್ಟಿ ಮಲೆನಾಡಿನಲ್ಲಿ ಮನೆಮಾಡಿ ನೆಲೆಸಿದ ಮಾನವನಿಂದು ಮಲೇರಿಯಾ ಮಾರಿಗೆ ಯಜ್ಞಪಶುವಾಗಿದ್ದಾನೆ. ಎಲ್ಲಿ ನೋಡಿದರೂ ಹಾಳು ಹಳ್ಳಿಗಳು, ಬೀಳು ತೋಟಗದ್ದೆಗಳು, ಮುರುಕು ಮನೆಗಳು. ಎಣ್ಣೆಗರೆದ ಜೋಲುಮುಖದ, ಸೆಣಸಿದ ಕೈಕಾಲಿನ, ಉಬ್ಬಿ ಬಿರಿಯುವಂತಿರುವ ಹೊಟ್ಟೆಯ, ಹಸುರುಗರೆದ ಹೂಳುಕಣ್ಣಿನ ಮಕ್ಕಳು. ಕಾಡುಮೇಡನ್ನು ಗೆದ್ದು ನಾಡನ್ನು ಕಟ್ಟಿದ ನಾಡವರಿಂದು ನರಪ್ರೇತಗಳಾಗಿದಾರೆ. ಅಡಕೆಯ ಗರಿಯೊ, ಹುಲ್ಲೊ, ಸೊಪ್ಪೊ ಅವನ ಮನೆಯ ಮೇಲ್ಛಾವಣೆ, ಮಳೆಗಾಳಿಯಿಂದ ಮುಚ್ಚಲು ಮನೆಯ ನೆರಕೆ, ಅಡಕೆಯ ಹೂವಿನ ಕೊಟ್ಟೆಯು ಅವನ ತಲೆಯ ಟೋಪಿ, ಮಾರುದ್ದದ ಲಂಗೋಟಿ ಮತ್ತು ದಾವಣಗೆರೆಯ ಹಂಡಕಂಬಳಿ ಅವನ ವೇಷಭೂಷಣ. ಮಳೆಗಾಲದಲ್ಲಿ ಮೊಣಕಾಲುದ್ದದ ನೀರಿನಲ್ಲಿ ಅವನ ಜೀತವಾದರೆ ಬೇಸಗೆಯಲ್ಲಿ ಕುಡಿಯಲು ಕೆಸರಿನ ಕೊಚ್ಚೆಯ ನೀರು. ಅವನ ಪಾಡೇ ಹೀಗಾದರೆ ಅವನ ದನಕರುಗಳ ಪಾಡು ಹೇಳಬೇಕಾದ್ದೇ ಇಲ್ಲ. ವಂಶಪಾರಂಪರ್ಯವಾಗಿ ಬಂದ ಸಾಲದ ಹೊರೆ. ಜೀತದಲ್ಲಿ ಹುಟ್ಟಿ ಜೀತದಲ್ಲಿಯೇ ಸಾವು. ಮಲೆನಾಡಿನ ಶ್ರೀಮಂತನಿಂದು ಬಡವನಾಗಿದಾನೆ, ಬಡವನಿಂದು ಜೀವಚ್ಛವವಾಗಿದಾನೆ. ಇದನ್ನು ನೋಡಿಯೇ ಆಧುನಿಕ ಕವಿಯೊಬ್ಬ

'ಹುಲುಸಾದ ಬೆಳೆ ಹೋಗಿ ಹುಲ್ಲು ಕೊಳೆ ತುಂಬಿಹುದೊ'

ಎಂದು ಮರುಕಗೊಂಡಿದ್ದಾನೆ. ಮಲೆನಾಡಿನ ಇಂದಿನ ಕಷ್ಟತನು ಜೀವನದ ನೈಜಚಿತ್ರದ ಪರಿಚಯ ಬೇಕಾದವರು ಕೆ. ವಿ. ಪುಟ್ಟಪ್ಪನವರ "ಕಾನೂರು ಸುಬ್ಬಮ್ಮ ಹೆಗ್ಗಡಿತಿ"ಯನ್ನು ಓದಬೇಕು.

ಈ ದುರಂತ ಬಾಳಿನ ಕಾರಣವನ್ನರಿಯುವುದು ಕಷ್ಟವಲ್ಲ. ಹಿಂದೆ ಪರಿಸ್ಥಿತಿಯು ಇಷ್ಟು ಉಲ್ಬಣಿಸಿತ್ತೊ ಇಲ್ಲವೊ ಹೇಳಲು ಸಾಧ್ಯವಿಲ್ಲ. ಆದರೆ ಇಂದು ಮಲೆನಾಡಿನ ಮಹಾಮಾರಿ ಎಂದರೆ ಮಲೇರಿಯಾ ರೋಗ. ಪಶ್ಚಿಮಘಟ್ಟದ ಇಕ್ಕೆಲಗಳಲ್ಲಿ ಬೆಳಗಾವಿಯಿಂದ ಮಡಿಕೇರಿಯ ವರೆಗೆ ಹಬ್ಬಿರುವ ಐದು ನೂರು ಮೈಲಿ ಉದ್ದದ ಅರವತ್ತರಿಂದ ನೂರಿಪ್ಪತ್ತು ಮೈಲಿ ಅಗಲದ ಈ ಪ್ರದೇಶದಲ್ಲಿ ಎಲ್ಲಿ ಹೋದರೂ ಇದೇ ಗೋಳಿನ ಬಾಳು. ಕಳೆದ ಐವತ್ತು ವರುಷಗಳಲ್ಲಿ ಜನಸಂಖ್ಯೆಯು ಕ್ರಮೇಣ ಕ್ಷೀಣಿಸಿದೆ. ಭಾಗ್ಯಲಕ್ಷ್ಮಿಯು ನಾಟ್ಯವಾಡುತ್ತಿದ್ದ ತೋಟಗದ್ದೆಗಳು ಪಾಳು ಬಿದ್ದು ಅನೇಕ ಹಳ್ಳಿಗಳು ನಿರ್ನಾಮವಾಗಿವೆ. ಇರುವ ಹಳ್ಳಿಗಳು ಪಟ್ಟಣಗಳು ಸಹ ದಕ್ಷಿಣದೆಸೆಗೆ ಬರುತ್ತಿವೆ. ಜನ ಜಾನುವಾರುಗಳ ದೇಹದಾರ್ಢ್ಯವೂ ರೋಗವನ್ನು ಎದುರಿಸುವ ಶಕ್ತಿಯೂ ಕುಗ್ಗಿವೆ. ವಿದ್ಯಾವಂತರು, ಸ್ವಲ್ಪ ಅನುಕೂಲವಿರುವವರ ಸುಲಭ ಜೀವನೋಪಾಯ ಹುಡುಕಲು ಮಲೆನಾಡಿನ ಊರು ಕೇರಿಗಳನ್ನು ಬಿಟ್ಟು ಪಟ್ಟಣಗಳಿಗೆ ಸೇರಿ ಸರಕಾರಿ ನೌಕರಿಯನ್ನೊ ಸಣ್ಣಪುಟ್ಟ ವ್ಯಾಪಾರವನ್ನೋ ನಂಬಿ, ಮಲೆನಾಡನ್ನು ಮರೆತಿದ್ದಾರೆ. ಇದರಿಂದ ಮಲೆನಾಡಿನ ಸಾಮಾನ್ಯ ಜನತೆಗೆ ಬೇಕಾದ ಮಾರ್ಗದರ್ಶಿತ್ವ ಮತ್ತು ನಾಯಕತ್ವ ದೊರೆಯದಾಗಿದೆ. ಒಟ್ಟಿನಲ್ಲಿ ಮಲೆನಾಡು ಕ್ರಮೇಣ ಕ್ಷಯಿಸಹತ್ತಿದರೂ ಈಗಲೂ ಬತ್ತ ಬೆಳೆಯ ಒಟ್ಟು ಭೂಮಿಯ ೪೬·೪% ಅಡಕೆಯ ೫೮·೬% ಕಬ್ಬಿನ ೧೫·೭% ಕಾಫೀ, ಟೀ, ಏಲಕ್ಕಿ, ಮೆಣಸು ಹೆಳೆಯುವ ಅಷ್ಟೂ ಭೂಮಿಯು ಮಲೆನಾಡಿನಲ್ಲಿ. ಮರದ ದಿಮ್ಮಿ ಶ್ರೀಗಂಧ ದೊರೆಯುವುದು ಮಲೆನಾಡು ಅಥವಾ ಅರೆಮಲೆನಾಡಿನಲ್ಲಿ.

ಮಲೆನಾಡು ಇಂದು ಮದರಾಸು, ಕೊಡಗು, ಮೈಸೂರು ಮತ್ತು ಮುಂಬೈ ಪ್ರಾಂತಗಳಲ್ಲಿ ಹರಿದುಹಂಚಿದೆ. ಆದರೆ ಎಲ್ಲ ಭಾಗಗಳೂ ಕನ್ನಡನಾಡಿನ ಭಾಗಗಳು. ಇವುಗಳ ಉದ್ಧಾರ, ಪುನರುಜ್ಜೀವನ ಕನ್ನಡ ನಾಡಿನ ಏಕೈಕತೆಯನ್ನೇ ಅವಲಂಬಿಸಿದೆ. ಬೇರೆ ಬೇರೆ ಸರಕಾರಗಳು ಅಲ್ಪಸ್ವಲ್ಪ ಪ್ರಮಾಣದಲ್ಲಿ ಪುನರುದ್ಧಾರ ಕಾರ್ಯವನ್ನು ಕೈಕೊಂಡಿವೆ. ಆದರೆ ಸಮಗ್ರ ದೃಷ್ಟಿಯಿಂದ ಯಾವ ಯಶಸ್ವಿಯಾದ ಕಾರ್ಯಕ್ರಮವನ್ನೂ ಕೈಗೊಳ್ಳಲು ಸಾಧ್ಯವಾಗಿಲ್ಲ. ಈಚೆಗೆ ಕೇಂದ್ರ ಸರಕಾರದವರು ಕಳೆದ ಜುಲೈ ಹತ್ತನೆಯ ದಿನ ಒಂದು ಮಲೆನಾಡು ಅಭಿವೃದ್ಧಿ ಸಮ್ಮೇಳನವನ್ನು ದೆಹಲಿಯಲ್ಲಿ ಸೇರಿಸಿದರು. ಅಲ್ಲಿ ನಾನೊಂದು ಯೋಜನೆಯನ್ನು ಕೊಟ್ಟೆ. ಅದು ಪತ್ರಿಕೆಗಳಲ್ಲೂ ಪ್ರಕಟವಾಗಿದೆ. ಕೆಲವು ಟೀಕೆಗಳು ಬಂದಿದ್ದರೂ ಒಟ್ಟಿನಲ್ಲಿ ಅದಕ್ಕೆ ಸ್ವಾಗತ ದೊರೆತಿರುವುದು ಒಂದು ಸಂತೋಷ. ಅದು ಸರ್ವಾಂಗ ಪರಿಪೂರ್ಣದೆಂದು ನನ್ನ ಅಭಿಮತವಲ್ಲ. ನಾನೊಬ್ಬ ಶಾಸ್ತ್ರನಿಪುಣನೂ ಅಲ್ಲ, ವಸ್ತುಶಾಸ್ತ್ರಜ್ಞನೂ ಅಲ್ಲ. ಆದರೆ ಆ ಯೋಜನೆಯನ್ನು ತಳಹದಿಯನ್ನಾಗಿಟ್ಟುಕೊಂಡು ಮುಂದುವರಿಯಲು ಸಾಕಷ್ಟು ಅವಕಾಶವಿದೆ.

ಆದರೆ ಮಲೆನಾಡಿನಲ್ಲಿ ಯಾವ ಯೋಜನೆಯು ಯಶಸ್ವಿಯಾಗಬೇಕಾದರೂ ಜನರಲ್ಲಿ ಇಂದಿನ ನಿರುತ್ಸಾಹ ಮಾಯವಾಗಿ ಹೊಸ

ದೊಂದು ಜೀವಶಕ್ತಿ ಹುಟ್ಟಬೇಕು. ಮಲೇರಿಯಾ ಮಾರಿಯ ಉಪದ್ರವ ನಿವಾರಣೆಯಾಗದೆ ಈ ಉತ್ಸಾಹವು ಹುಟ್ಟುವುದು ಶಕ್ಯವಿಲ್ಲ. ಮೊನ್ನೆ ತಾನೆ ನಾನು ಕೊಚ್ಚಿ ಮತ್ತು ತಿರುವಾಂಕೂರಿಗೆ ಹೋಗಿದ್ದೆ. ನಮ್ಮ ಮಲೆನಾಡಿನಂತೆಯೇ ದಟ್ಟವಾದ ವನಶ್ರೀ. ಎಲ್ಲಿ ನೋಡಿದರೂ ನೀರಿನ ಕಾಲುವೆ, ಸರೋವರ, ಸಮುದ್ರವಿದ್ದರೂ ಮಲೇರಿಯಾ ಸೊಳ್ಳೆ ಒಂದಾದರೂ ಇಲ್ಲದಿರುವುದನ್ನು ಕಂಡು ಆಶ್ಚರ್ಯವಾಯಿತು. ಕಳೆದ ಮೂರು ವರ್ಷಗಳಿಂದ ಮುಂಬೈ ಸರಕಾರದವರು ಕೈಗೊಂಡಿರುವ ಮಲೇರಿಯಾ ನಿವಾರಣ ಕಾರ್ಯಕ್ರಮದ ಕಥೆಯನ್ನು ಓದಿದರೆ ಒಂದು ಯಕ್ಷಿಣಿಯ ಕಥೆಯನ್ನು ಕೇಳಿದಂತಾಗುತ್ತದೆ.

### ಧಾರವಾಡ ಕಾರವಾರಗಳಲ್ಲಿ ಡಿ ಡಿ ಟಿ ಪ್ರಯೋಗ

ಐದು ಲಕ್ಷ ರೂಪಾಯಿಗಳ ವೆಚ್ಚದಿಂದ ೧೧೩೧ ಮಲೆನಾಡಿನ ಹಳ್ಳಿಗಳ ೯,೧೩,೨೯೮ ಜನರಿಗೆ ೯೪,೧೩೧ ಪೌಂಡು ಡಿ. ಡಿ. ಟಿ. ಯನ್ನು ಉಪಯೋಗಿಸಿ ಈ ಮಲೇರಿಯಾ ನಿವಾರಣ ಸೌಕರ್ಯವನ್ನು ಒದಗಿಸಲಾಗಿದೆ. ಸಾವಿನ ಸಂಖ್ಯೆಯು ಉತ್ತರ ಕನ್ನಡ ಜಿಲ್ಹೆಯಲ್ಲಿ ೧೦೦೦ ಕ್ಕೆ ೨೬.೨ ರಿಂದ ೧೬.೩ ಕ್ಕೆ ಇಳಿದಿದೆ. ಧಾರವಾಡ ಜಿಲ್ಹೆಯಲ್ಲಿ ೨೭.೪ ರಿಂದ ೧೯.೬ ಕ್ಕೆ ಇಳಿದಿದೆ. ಮಲೇರಿಯಾ ಒಂದರಿಂದಲೇ ಆಗುತ್ತಿದ್ದ ಸಾವಿನ ಸಂಖ್ಯೆ ೩.೧ ಮತ್ತು ೨.೬ ರಿಂದ ೦.೮ ಕ್ಕೆ ಇಳಿದಿದೆ- ಜನನ ಸಂಖ್ಯೆಯು ಉತ್ತರ ಕನ್ನಡ ಜಿಲ್ಹೆಯಲ್ಲಿ ೩೧.೧ ರಿಂದ ೩೪.೭ ಕ್ಕೆ ಏರಿದೆ. ಧಾರವಾಡ ಜಿಲ್ಹೆಯಲ್ಲಿ ೩೬.೨ ರಿಂದ ೩೮.೪ ಕ್ಕೆ ಏರಿದೆ. ಗುಲ್ಮ ರೋಗಿಗಳ ಸಂಖ್ಯೆ ಉತ್ತರ ಕನ್ನಡ ಜಿಲ್ಹೆಯಲ್ಲಿ ಶೇಕಡ ೧೧.೬ ರಿಂದ ೭ ಕ್ಕೂ ಧಾರವಾಡದಲ್ಲಿ ಶೇಕಡ ೧೦.೬ ರಿಂದ ೭ ಕ್ಕೂ ಇಳಿದಿದೆ. ಡಿ ಡಿ. ಟಿ ಉಪಯೋಗಿಸದ ಕಡೆಗಳಲ್ಲಿ ಈಗಲೂ ಶೇಕಡ ೫೨.೮ ಮತ್ತು ೧೮ ಇದೆ. ಮಕ್ಕಳ ರೋಗವು ಧಾರವಾಡದಲ್ಲಿ ೨.೬ % ಮತ್ತು ಉತ್ತರ ಕನ್ನಡ ಜಿಲ್ಹೆಗಳಲ್ಲಿ ೨೭.೭ ಇದ್ದುದು ಈಗ ಡಿ. ಡಿ. ಟಿ. ಚಿಮುಕಿಸಿದ ಹಳ್ಳಿಗಳಲ್ಲಿ ಪೂರ್ಣ ನಿರ್ನಾಮವಾಗಿದೆ. ತಾಯಂದಿರ ಸಾವು ಕಡಿಮೆಯಾಗಿದೆ. ಆಸ್ಪತ್ರೆಗಳ ಲೆಕ್ಕದಿಂದಲೇ ಮಲೇರಿಯಾ ರೋಗಿಗಳ ಸಂಖ್ಯೆ ೧೩,೭೦೦ ಕ್ಕೆ ಇಳಿದಿದೆ. ಅಂದರೆ ಮೂರನೆಯ ವರ್ಷದಲ್ಲಿ ೬೦,೦೦೦ ಕಡಿಮೆಯಾಯಿತು. ಮಲೇರಿಯಾ ನಿವಾರಣಾ ಯೋಜನೆಯು ಆಚರಣೆಯಲ್ಲಿರುವ ಪ್ರದೇಶದಲ್ಲಿ ೩,೬೦,೦೦೦ಕಡಿಮೆಯಾಗಿದೆ. ಸಾವಿನ ಸಂಖ್ಯೆ ಕಡಿಮೆಯಾಗಿ, ರೋಗರುಜಿಗಳ ಸಂಖ್ಯೆ ಕಡಿಮೆಯಾಗಿ, ಜನನ ಸಂಖ್ಯೆ ಮತ್ತು ದೃಢಾಂಗಿಗಳ ಸಂಖ್ಯೆ ಉತ್ತಮಗೊಂಡಿರುವುದರ ಫಲವಾಗಿ ಹೆಚ್ಚಿನ ಭೂಮಿಯು ಸಾಗುವಳಿಗೆ ಬಂದಿದೆ. ಜನರ ವಸ್ತುನಿರ್ಣಯ ಶಕ್ತಿಯು ಹೆಚ್ಚಾಗಿದೆ. ಒಬ್ಬ ಮನುಷ್ಯನ ದಿನದ ಸಾಮಾನ್ಯ ಕೂಲಿ ೨—೦—೦ ಎಂದರೆ ಮತ್ತು ಒಬ್ಬ ಮನುಷ್ಯನು ವಾರಕ್ಕೆ ಆರು ದಿನಗಳು ಕೆಲಸ ಮಾಡುತ್ತಾನೆಂದರೆ ಮಲೇರಿಯಾದಿಂದ ನರುಳುತ್ತಿದ್ದ ಜನರಲ್ಲಿ ೧।೩ ನೇ ಭಾಗದ ರೋಗಿಗಳು ವಯಸ್ಕರೆಂದು ಗಮನಿಸಿದರೆ ಐದು ಲಕ್ಷ ರೂಪಾಯಿಗಳ ವೆಚ್ಚದಿಂದ ೧೫ ಲಕ್ಷ ರೂಪಾಯಿಗಳ ಉಳಿತಾಯ ದೊರೆಯುತ್ತಿದೆ. ಈ ಯೋಜನೆಯ ವೆಚ್ಚ ತಲೆಗೆ ೦—೬—೦ ಮಾತ್ರ. ಈಚೆಗೆ ಈ ಯೋಜನೆಯ ಉಪಯೋಗವನ್ನರಿತು ಜನರೇ ಸ್ವಯಂಸೇವಕರಾಗಿ ಮುಂದೆ ಬಂದು ಡಿ. ಡಿ. ಟಿ. ಯನ್ನು ಚಿಮುಕಿಸುತ್ತಾರೆ. ಈಗಿನ ಹಣಕಾಸಿನ ಪರಿಸ್ಥಿತಿಯಲ್ಲಿ ಈ ಯೋಜನೆಯನ್ನು ಸರಕಾರವು ನಿಲ್ಲಿಸುವ ಸಂದರ್ಭ ಒದಗಿದರೂ ಜನರೇ ಆ ವೆಚ್ಚವನ್ನು ವಹಿಸಿಕೊಳ್ಳಲು ಮುಂದೆ ಬರಲು ನಿರ್ಧರಿಸಿದ್ದಾರೆ. ಚಿಮುಕಿಸುವುದು ವರ್ಷಕ್ಕೆ ಮೂರುಬಾರಿ ಮಾತ್ರ. ಕಳೆದ ಮೂರು ವರ್ಷಗಳಲ್ಲಿ ಈ ಜಿಲ್ಹೆಗಳಲ್ಲಿ ಪ್ಲೇಗಿನಿಂದ ಸತ್ತವನು ಒಬ್ಬನೂ ಇಲ್ಲ. ಭೇದಿ ಮತ್ತು ಆಮಶಂಕೆಯ ರೋಗದಿಂದ ಸಾಯುತ್ತಿದ್ದ ಜನರ ಸಂಖ್ಯೆಯು ಬಹಳ ಕಡಿಮೆಯಾಗಿದೆ. ಧಾರವಾಡ ಜಿಲ್ಹೆಯಲ್ಲಿ ದನಗಳ ಕೊಟ್ಟಿಗೆಗೂ ಡಿ. ಡಿ. ಟಿ. ಚಿಮುಕಿಸುತ್ತಿರುವುದರಿಂದ ಉತ್ತರ ಕನ್ನಡ ಜಿಲ್ಹೆಗಿಂತ ಧಾರವಾಡ ಜಿಲ್ಹೆಯಲ್ಲಿ ಎಲ್ಲ ರೀತಿಯಿಂದ ಉತ್ತಮ ಫಲ ದೊರೆತಿದೆ.

ಈ ರೀತಿ ಡಿ. ಡಿ. ಟಿ. ಉಪಯೋಗದಿಂದ ಮಂತ್ರವಾದಿಯ ಮೋಡಿಯ ಆಟದಂತೆ ಈ ಎರಡು ಜಿಲ್ಹೆಗಳಲ್ಲಿ ಒಂದು ಹೊಸ ಜೀವನವು ಆರಂಭವಾಗಿದೆ- ಜನರಲ್ಲಿ ನೆಲಸಿದ್ದ ಭಯ ಮತ್ತು ನಿರಾಶೆಗಳು ಮಾಯವಾಗಿ ಒಂದು ಹೊಸ ಚೈತನ್ಯವು ಮೂಡಿ, ಹೊಸ ಬಾಳಿಗೆ ಮಾರ್ಗ ತೋರಿಸಿದೆ. ಮತ್ತೊಮ್ಮೆ ಮಲೆನಾಡು "ನಂದನವನ" ಆಗಬಾರದೇಕೆ ಎಂಬ ಹೆಬ್ಬಯಕೆಯು ಹೊರಹೊಮ್ಮುತ್ತಿದೆ. ಈ ಉತ್ಸಾಹ ಒಂದಿದ್ದರೆ ಯಾವ ಯೋಜನೆಯಾದರೂ ಯಶಸ್ವಿಯಾದೀತು. ಮುಂಬಯಿ ಸರಕಾರವು ಧಾರವಾಡ—ಕಾರವಾರ ಜಿಲ್ಹೆಗಳಲ್ಲಿಯೂ ಮೈಸೂರ ಸರಕಾರವು ಜೋಗ ಮತ್ತು ಲಕ್ಕುವಳ್ಳಿಗಳಲ್ಲಿಯೂ ಕೇಂದ್ರ ಸರಕಾರವು ಕೊಡಗಿನಲ್ಲಿಯೂ ಯಶಸ್ವಿಯಾಗಿ ಕಾರ್ಯಕ್ರಮ ಕೈಕೊಂಡು ಮಲೇರಿಯಾ ಮಾರಿಯನ್ನು ತಡೆಗಟ್ಟಲು ಸಾಧ್ಯವಾಗಿದ್ದರೆ ಇಡೀ ಮಲೆನಾಡಿನಲ್ಲಿ ಈ ಕಾರ್ಯಕ್ರಮವನ್ನು ಕೈಕೊಂಡು ಮಲೇರಿಯಾ ನಿವಾರಣೆ ಮಾಡಲು ಪೂರ್ಣ ಶಕ್ಯವಿದೆ. ಅದು ಎಲ್ಲ ಯೋಜನೆಗಳಿಗೂ ಮೊದಲು ಆಗಬೇಕಾದ ತಳಹದಿ. ಈ ತಳಹದಿಯಿಲ್ಲದೆ ಉಳಿದ ಎಲ್ಲ ಯೋಜನೆಗಳೂ ವ್ಯರ್ಥ. ಮಲೇರಿಯಾ ಒಂದನ್ನು ತಡೆಗಟ್ಟಿದರೆ ಕೇವಲ ೧೫ ವರ್ಷಗಳಲ್ಲಿ

ಮಲೆನಾಡಿನ ಜನಸಂಖ್ಯೆಯು ತಾನಾಗಿಯೇ ಅಭಿವೃದ್ಧಿಯಾಗುತ್ತದೆ. ಹೊರಗಿನಿಂದ ಜನರೂ ಬಂದು ನೆಲಸಲು ಮುಂದುವರಿಯುತ್ತಾರೆ. ಪಾಳು ಬಿದ್ದ ತೋಟ ಗದ್ದೆಗಳು ಮರಳಿ ನಲಿಯುವುದರ ಜೊತೆಗೆ ಹೆಚ್ಚು ಭೂಮಿಯೂ ಸಾಗುವಳಿಗೆ ಬರುತ್ತದೆ. ಭತ್ತ, ಅಡಕೆ, ಮೆಣಸು, ಏಲಕ್ಕಿ, ಕಾಫಿ, ಟೀ ಬೆಳೆಗಳು ಅಭಿವೃದ್ಧಿಗೊಂಡು ಗೋಳಿನ ಬಾಳಿನ ಮಲೆನಾಡು ಮತ್ತೊಮ್ಮೆ ಕಾಳಿನ ಕಣಜವಾಗಿ ಹೊನ್ನಿನ ಹೊಗೆಯಾಡುವಂತಾಗುತ್ತದೆ.

ಮುಂಬಯಿ, ಮೈಸೂರು, ಕೊಡಗು, ಮದರಾಸು ಸರಕಾರಗಳೂ ಕೇಂದ್ರ ಸರಕಾರವೂ ಮನಸ್ಸು ಮಾಡಬೇಕು. ಕರ್ನಾಟಕ ಏಕೀಕರಣವಾದರಂತೂ ಮಲೆನಾಡಿನ ಅಭಿವೃದ್ಧಿಯು ಅದರ ಪ್ರಥಮ ಕರ್ತವ್ಯವಾಗುತ್ತದೆ. ಕೆಲಸವೂ ಸುಲಭವಾಗುತ್ತದೆ. ಒಂದೇ ಕೆಲಸವನ್ನು ಎರಡು ಮೂರು ಸರಕಾರಗಳು ಮಾಡಬೇಕಾದ ಪ್ರಮೇಯವೂ ಆಡಳಿತ ವೆಚ್ಚವೂ ಕಡಿಮೆಯಾಗುತ್ತದೆ. ಏಕೀಕರಣವು ರಾಜಕೀಯ ಪ್ರಶ್ನೆ. ಅದು ಸಾಧಿಸುವ ವರೆಗೆ ಮಲೆನಾಡಿನ ಪ್ರಶ್ನೆಯನ್ನು ಮುಂದುವರಿಸುವದು ಉಚಿತವೂ ಅಲ್ಲ, ವಿವೇಕಯುತವೂ ಅಲ್ಲ.

## ಪ್ರಜೆಗಳ ಮತ್ತು ಸರಕಾರದ ಕರ್ತವ್ಯ

ಈ ಸಮಸ್ಯೆಯ ಪರಿಹಾರದಲ್ಲಿ ಪ್ರಜೆಗಳ ಕರ್ತವ್ಯವೂ ಒಂದಿದೆ. ಆಹಾರ ವಿಷಯದಲ್ಲಿ ದೇಶವು ಸ್ವಾವಲಂಬಿಯಾಗಬೇಕಾದರೆ ವಿದ್ಯಾವಂತ ಯುವಕರು ಮಲೆನಾಡಿನ ಹಳ್ಳಿಗಳಿಗೆ ಬಂದು ನೆಲಸುವ ಮನಸ್ಸು ಮಾಡಬೇಕು. ಇಂದು ಮಲೆನಾಡಿನ ಜನತೆಗೆ ಲಭಿಸದಿರುವ ನಾಯಕತ್ವವನ್ನು, ದೂರದರ್ಶಿತ್ವವನ್ನು, ಕಾರ್ಯಶಕ್ತಿಯನ್ನು ಒದಗಿಸಿಕೊಡಬೇಕು. ಒಳ್ಳೆಯ ಗೊಬ್ಬರದ ತಯಾರಿಕೆ, ಉತ್ತಮ ಬೀಜದ ಉಪಯೋಗ, ಮಲೇರಿಯಾ ನಿವಾರಣೆಯಲ್ಲಿ ಪ್ರತಿಯೊಬ್ಬ ಪ್ರಜೆಯ ಕರ್ತವ್ಯ, ಉತ್ತಮ ರೀತಿಯಲ್ಲಿ ದನಕರುಗಳನ್ನು ಸಾಕುವ ವಿಧಾನ, ಉಪ ಕಸಬುಗಳ ಏರ್ಪಾಟು, ಸಹಕಾರಿ ತತ್ವದ ಮೇಲೆ ಜಮೀನುಗಳನ್ನು ಸಾಗುಮಾಡುವುದು, ಬೇಟೆಯ ಮಂದಿರಗಳನ್ನು ಏರ್ಪಡಿಸಿ ದುಷ್ಟ ಮೃಗಗಳನ್ನು ನಾಶ ಮಾಡುವುದು ಮುಂತಾದ ಅನೇಕ ವಿಷಯಗಳ ಮೇಲೆ ಸಾಮಾನ್ಯ ರೈತನಿಗೆ ಬೇಕಾದ ಜ್ಞಾನವನ್ನೂ ಸಹಾಯವನ್ನೂ ಒದಗಿಸಿ ಮಾರ್ಗದರ್ಶಕನಾಗಬಹುದು. ಶತಮಾನಗಳ ದಾಸ್ಯದಿಂದ ನಮ್ಮ ಮನೋವೃತ್ತಿಯಲ್ಲೇ ದಾಸ್ಯಭಾವನೆ ಮೂಡಿದೆ. ಎಲ್ಲಕ್ಕೂ ಸರಕಾರವನ್ನೇ ನಂಬಿ ಕೈಕಟ್ಟಿ ಕುಳಿತುಕೊಳ್ಳುವುದು ವಾಡಿಕೆಯಾಗಿದೆ. ಈ ದಾಸ್ಯಭಾವನೆ ಮೊದಲು ನಿವಾರಣೆಯಾಗಬೇಕು.

ಸರಕಾರವಾದರೂ ಮಲೆನಾಡಿನ ಜೀವನವನ್ನು ನಗರ ಜೀವನದಷ್ಟೇ ಸುಖಮಯವನ್ನಾಗಿ ಮಾಡಿದ ಹೊರತು ಮಲೆನಾಡಿಗೆ ಜನರು ವಲಸೆ ಬರಲಾರರು ಮತ್ತು ಮಲೆನಾಡು ಉದ್ಧಾರವಾಗಲಾರದು. ಮಲೆನಾಡಿನಿಂದ ದೊರೆಯಬಹುದಾದ ಪೂರ್ಣ ಪ್ರಯೋಜನವು ದೇಶಕ್ಕೆ ಒದಗುವದೂ ಕಷ್ಟವಾದೀತು. ಸ್ಕಾಟಲೆಂಡಿನ ಹೈಲೆಂಡ್ ಪ್ರದೇಶಗಳಲ್ಲಿ ೩೬೫ ದಿನಗಳಲ್ಲಿ ೩೦೦ ದಿನ ಮಳೆ ಬರುತ್ತದೆ. ಅಲ್ಲಿನ ಬೆಟ್ಟ ಗುಡ್ಡಗಳ ಕಣಿವೆಯ ಹೆದ್ದಾರಿಗಳಲ್ಲಿ ತಿರುಗುವಾಗ ನಮ್ಮ ತೀರ್ಥಹಳ್ಳಿ, ಕೊಪ್ಪ, ಮೂಡಗೆರೆಯ ಕಣಿವೆಗಳ ದೃಶ್ಯವನ್ನೇ ನೋಡಬಹುದು. ಆದರೂ ಸ್ಕಾಟಲೆಂಡ್ ಗುಡ್ಡನಾಡಿನ ಯಾವ ಹಳ್ಳಿಗೆ ಹೋದರೂ ವಿದ್ಯುಚ್ಛಕ್ತಿ, ಸಿಮೆಂಟ ರಸ್ತೆಗಳು, ಟೆಲಿಫೋನ್ ಸೌಕರ್ಯ, ಗುಡ್ಡದ ನೆತ್ತಿಯ ವರೆಗೂ ಸಾಗುವಳಿ ಮಾಡಲು ಅನುಕೂಲವಾದ ಟ್ರಾಕ್ಟರುಗಳು ಮೊದಲಾದ ಯಂತ್ರಸಾಮುಗ್ರಿಗಳು, ಬಸ್ಸು, ರೈಲು ಮುಂತಾದ ವಾಹನ ಸೌಕರ್ಯ, ೨-೩ ಗಂಟೆಗಳೊಳಗಾಗಿ ನಾಡಿನ ಯಾವ ಮುಖ್ಯ ನಗರದೊಂದಿಗಾದರೂ ಸಂಪರ್ಕ ಪಡೆಯಲು ಅನುಕೂಲವಿರುವ ಸುದ್ದಿ ಸೌಕರ್ಯ, ಉತ್ತಮ ವೈದ್ಯ ಸಹಾಯ, ನಾಲ್ಕಾರು ಹಳ್ಳಿಗಳಿಗೊಂದು ಸಿನೆಮಾ ಈ ರೀತಿ ಜೀವನ ಸೌಕರ್ಯವಿದ್ದರೆ ಮಲೆನಾಡು ಸ್ವರ್ಗದ ಬೀಡಾದೀತು. ಮಲೆನಾಡಿನ ರಮಣೀಯ ದೃಶ್ಯಗಳಿರುವ ಸ್ಥಳಗಳಿಗೆ, ಐತಿಹಾಸಿಕ ಸ್ಥಳಗಳಿಗೆ, ಪರ್ವತ ಶಿಖರಗಳಿಗೆ ಹೋಗಿ ಬರಲು ಪ್ರವಾಸಿಕರಿಗೆ ಪ್ರವಾಸ ಸೌಕರ್ಯವನ್ನು ಕಲ್ಪಿಸಿ ಆಕರ್ಷಿಸಬೇಕು, ಇಂಗ್ಲೆಂಡಿನ ಯಾವ ರೈಲು ನಿಲ್ದಾಣದಲ್ಲಿ ನೋಡಿದರೂ "Trip to Scotland-Concession rates" ಎಂಬ ಮನಮೋಹಕ ಜಾಹಿರಾತುಗಳು. ನಮ್ಮ ಸರಕಾರವೂ ಆ ರೀತಿ ನಮ್ಮ ದೇಶದ ಶ್ರೀಮಂತರಿಗೆ ಮತ್ತು ವಿದೇಶೀಯರಿಗೆ ಸುಂದರ ದೃಶ್ಯಗಳನ್ನು ಒದಗಿಸಬೇಕು; ಹಣವನ್ನು ಸಂಪಾದಿಸಲು ಯತ್ನ ಮಾಡಬೇಕು. ತಿರುವಾಂಕೂರಿನಲ್ಲಿ ಒಂದಂಗುಲ ಭೂಮಿಯನ್ನೂ ಬೀಳು ಬಿಡದಂತೆ ರಸ್ತೆಯ ಪಕ್ಕದ ದಿನ್ನೆಗಳ ಮೇಲೆ ಸಹ 'ಟ್ಯಾಪಿಯೋಕಾ' ಗೆಣಸನ್ನು ಬೆಳೆಯುತ್ತಾರೆ. ಮಲೆನಾಡಿನ ನಮ್ಮ ರೈತರು ಏಕೆ ಬೆಳೆಯಬಾರದು? ಸುಲಭದಲ್ಲಿ ಹೆಚ್ಚು ವೆಚ್ಚವಿಲ್ಲದೆ ಬೆಳೆಯಬಹುದಾದ ಪುಷ್ಟಿಯುತ ಆಹಾರವಿದು. ಆದರೆ ಇಂದು ಯಾವ ಹೊಸದಾರಿಯನ್ನು ಹಿಡಿಯುವದಕ್ಕೂ ಅಂಜಿಕೆ ಮತ್ತು ನಿರುತ್ಸಾಹ. ಮಲೆನಾಡಿನಲ್ಲಿ ಪ್ರಕೃತಿದತ್ತ ಸಂಪತ್ತು ಎಲ್ಲವೂ ಇದೆ. ಆದರೆ ಹೊಸ ಬಾಳಿನ ಹೊಸ ದಾರಿಯನ್ನು ಹಿಡಿಯಲು ಧೈರ್ಯಮಾಡಿ ಸಾಹಸಿಗ ಯುವಕರು ಮುಂದೆ ನಿಂತರೆ ಮಾತ್ರ ಮಲೆನಾಡನ್ನು ಮತ್ತೊಮ್ಮೆ ನಲಿಯುವ ನಾಡನ್ನಾಗಿ ಮಾಡಲು ಸಾಧ್ಯವಾದೀತು.

# ಇಪ್ಪತ್ತನೆಯ ಶತಕದ ಭಾರತೀಯ ವಿಜ್ಞಾನ

**ಅನೇಕ ಶತಕಗಳ ದಾಸ್ಯದಿಂದಲೂ ಭಾರತದ ಪ್ರಾಚೀನವಾದ ವಿಜ್ಞಾನಬುದ್ಧಿ ಅಳಿದಿಲ್ಲ. ಇಪ್ಪತ್ತನೇ ಶತಕದಲ್ಲಿ ಭಾರತದಲ್ಲಿ ವೈಜ್ಞಾನಿಕ ಸಂಶೋಧನೆಯ ಅನುಕೂಲತೆ ದೊರೆತ ಕೆಲವೆ ವಿಜ್ಞಾನಿಗಳು ಅತ್ಯಂತ ಮಹತ್ವದ ಸಂಶೋಧನೆಗಳಿಂದ ಜಾಗತಿಕ ವಿಜ್ಞಾನಕ್ಕೆ ಕಾಣಿಕೆ ಇತ್ತಿದ್ದಾರೆ. ಸ್ವಾತಂತ್ರ್ಯದ ನಂತರ ಈ ಕಾರ್ಯಕ್ಕೆ ಇನ್ನಷ್ಟು ಪುಟ ದೊರೆಯಬಹುದೆಂದು ಉಸ್ಮಾನಿಯ ವಿಶ್ವವಿದ್ಯಾಲಯದ ಪದಾರ್ಥವಿಜ್ಞಾನ ಶಾಖೆಯ ಶ್ರೀ ಪದ್ಮನಾಭ ಪುರಾಣಿಕರು ವರ್ಣಿಸಿದ್ದಾರೆ.**

ಭಾರತದಲ್ಲಿ ವೈಜ್ಞಾನಿಕ ಸಂಶೋಧನೆಗಳ ಆರಂಭವು ಇಪ್ಪತ್ತನೆಯ ಶತಮಾನದಲ್ಲಿಯೇ ಆಯಿತೆಂದು ಹೇಳಬಹುದು. ಇದುವರೆಗೆ, ವಿಶೇಷವಾಗಿ ಈ ಶತಮಾನದ ಮೊದಲ ಮೂವತ್ತೈದು ವರ್ಷಗಳಲ್ಲಾದ ಸಂಶೋಧನ ಕಾರ್ಯವನ್ನು ಅವಲೋಕಿಸಿದರೆ, ಹೆಚ್ಚಾಗಿ ಶುದ್ಧ ವಿಜ್ಞಾನಕ್ಕೆ ಸಂಬಂಧಿಸಿದ ಕಾರ್ಯವೇ ನಡೆದುಕೊಂಡು ಬಂದಿದೆ ಎಂದು ಒಡೆದು ಕಾಣಿಸುತ್ತದೆ. ಹೀಗೆ ಆದುದಕ್ಕೆ ರಾಜಕೀಯ ಪಾರತಂತ್ರ್ಯವೇ ಮುಖ್ಯ ಕಾರಣ. ಪರಾಧೀನ ದೇಶಗಳಲ್ಲಿ ದೊಡ್ಡ ದೊಡ್ಡ ಕೈಗಾರಿಕೆಗಳನ್ನು--ನೌಕಾಬಂಧನ, ಶಸ್ತ್ರಾಸ್ತ್ರವ್ಯವಸಾಯ, ಮುಂತಾದವುಗಳನ್ನು--ನಡೆಸುವುದು ಆಳುವವರಿಗೆ ಹಿತಕರವಾಗುವುದಿಲ್ಲವಾದುದರಿಂದ ಅವುಗಳ ವಿಕಾಸಕ್ಕೆ ಆಸ್ಪದ ದೊರೆಯುವುದಿಲ್ಲ. ಅನ್ವಿತ ವಿಜ್ಞಾನದ ಬೆಳವಣಿಗೆ ದೊಡ್ಡ ಮಾದರಿಯ ಉದ್ಯಮಗಳ ಬೆಳವಣಿಗೆಯನ್ನೇ ಅವಲಂಬಿಸಿರುವುದರಿಂದ ಆ ತೆರದ ಸಂಶೋಧನು ಕಾರ್ಯಕ್ಕೆ ಎಡೆ ಉಂಟಾಗುವುದಿಲ್ಲ. ಅಮೇರಿಕಾ ಮತ್ತು ರಶಿಯಾ ದೇಶಗಳಲ್ಲಿ ವಿಜ್ಞಾನದ ವಿಕಾಸವನ್ನು ನಿರೀಕ್ಷಿಸಿದರೆ ಮೇಲೆ ಹೇಳುವ ಮಾತು ಒಡೆದುಕಾಣಿಸುತ್ತದೆ. ಈ ಎರಡು ದೇಶಗಳಲ್ಲಿ ಮೊಟ್ಟಮೊದಲು ಆರಂಭವಾದುದು ಶುದ್ಧ ಸಂಶೋಧನೆಯಲ್ಲ, ಅನ್ವಿತ ಸಂಶೋಧನೆ. ತಮ್ಮ ದೇಶದ ಔದ್ಯೋಗಿಕ ಬೆಳವಣಿಗೆಗೆ ಸಹಾಯಕವಾಗುವಂತಹ ಸಮಸ್ಯೆಗಳನ್ನು ಕುರಿತು ಸಂಶೋಧನ ಕಾರ್ಯವು ನಡೆದು ಬಂದಿತು. ಔದ್ಯೋಗಿಕ ಸಮಸ್ಯೆಗಳು ಹೇರಳವಾಗಿ ಬೆಳೆದುಕೊಂಡು ಬಂದ ಹಾಗೆ ಶುದ್ಧ ಸಂಶೋಧನೆಗಳಿಗೆ ತನ್ನಿಂದ ತಾನೆ ಅನುವು ದೊರೆಯಹತ್ತಿತು. ಈಗ ಆಯಾ ದೇಶಗಳಲ್ಲಿ ಅನ್ವಿತ ಮತ್ತು ಶುದ್ಧ ಸಂಶೋಧನೆಗಳು ಬೇರೆಬೇರೆಯಾದರೂ ಒಂದಕ್ಕೊಂದು ಸಹಾಯಕವಾಗಿ ನಡೆದುಬರಹತ್ತಿವೆ.

ಹಿಂದುಸ್ಥಾನದಲ್ಲಿ ವೈಜ್ಞಾನಿಕ ಸಂಶೋಧನೆಗಳ ಚರಿತ್ರೆ ಬೇರೆಯಾಗಿದೆ. ರಾಜಕೀಯ ಸ್ವಾಧೀನತೆ ಇಲ್ಲದಾಗ ದೇಶದಲ್ಲಿ ರಾಷ್ಟ್ರೀಯ ಬೆಳವಣಿಗೆಯ ಯಾವ ಕಾರ್ಯಕ್ರಮಕ್ಕೂ ಪ್ರೇರಣೆ ಆಗುತ್ತಿರಲಿಲ್ಲ. ಆರ್ಥಿಕ ಅವನತಿಯ ಮೂಲಕ ಔದ್ಯೋಗಿಕ ಬೆಳವಣಿಗೆ ಸಾಧ್ಯವಾಗಿರಲಿಲ್ಲ. ಅನ್ವಿತ ವಿಜ್ಞಾನದ ಸ್ಫೂರ್ತಿಸ್ಥಾನವಾದ ಔದ್ಯೋಗಿಕ ಚಟುವಟಿಕೆಗಳು ಮುಂದಗತಿಯಿಂದ ಸಾಗಿದಾಗ ಅನ್ವಿತ ಸಂಶೋಧನೆಗಳಿಗೆ ಅನುಕೂಲವೆಲ್ಲಿ? ಧಾರಾಳವಾದ ಧನ ಸಹಾಯವು ಇಲ್ಲದೆ ಹೋದರೆ ಶುದ್ಧ ವಿಜ್ಞಾನದ ಸಂಶೋಧನೆಗಳು ಸಾಧ್ಯವಿಲ್ಲ.

ವೈಜ್ಞಾನಿಕ ಸಂಶೋಧನೆಗಳ ದೃಷ್ಟಿಯಿಂದ ದೇಶದ ಪರಿಸ್ಥಿತಿ ಇಷ್ಟು ವಿಷಣ್ಣವಾಗಿದ್ದರೂ ಕಳೆದ ಐವತ್ತು ವರ್ಷಗಳಲ್ಲಿ ಕೆಲವು ಭಾರತೀಯ ವೈಜ್ಞಾನಿಕರು ಶುದ್ಧ ವಿಜ್ಞಾನದ ಕ್ಷೇತ್ರದಲ್ಲಿ ಹಲವಾರು ಮಹತ್ವದ ಸಂಶೋಧನಗಳನ್ನು ಕೈಕೊಂಡು ಪ್ರಪಂಚದ ಜ್ಞಾನ ಭಾಂಡಾರಕ್ಕೆ ತಮ್ಮದೇ ಆದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಅಂತರರಾಷ್ಟ್ರೀಯ ಪ್ರತಿಷ್ಠೆಯನ್ನು ಗಳಿಸಿದ್ದಾರೆ. ರಾಮನ್, ಕೃಷ್ಣನ್, ಸಾಹಾ, ಭಾಭಾ, ಭಟನಾಗರ್, ಸಹಾನಿ, ಘೋಷ, ಮುಂತಾದವರು ನಮ್ಮ ದೇಶದ ಹೆಸರಾಂತ ವೈಜ್ಞಾನಿಕರು.

ಲೇಖಕರು:—**ಶ್ರೀ ಪದ್ಮನಾಭ ಪುರಾಣಿಕ,** ಎಂ. ಎಸ್‌ಸಿ.

## ಪದಾರ್ಥವಿಜ್ಞಾನ

ಭಾರತದಲ್ಲಿ ಪದಾರ್ಥ ವಿಜ್ಞಾನ ವಿಷಯದ ಸಂಶೋಧನೆಗಳು ೧೯ನೆಯ ಶತಮಾನದ ಕೊನೆಯಲ್ಲಿ ಆರಂಭವಾದವು. ೧೮೯೬ ರಲ್ಲಿ ಶ್ರೀ ಜಗದೀಶ ಚಂದ್ರ ಬೋಸರು ಅತ್ಯಲ್ಪ ಅಳತೆಯ ವಿದ್ಯುತ್ತಿನ ಅಲೆಗಳನ್ನು ಹುಟ್ಟಿಸಿದರು. ಪದಾರ್ಥವಿಜ್ಞಾನದ ಕ್ಷೇತ್ರದಲ್ಲಿ ಬೆಳಕಿನ ಚದರುವಿಕೆಯನ್ನು ಕುರಿತು (Seattering of light) ಹಿಂದುಸ್ಥಾನದಲ್ಲಿ ಆದ ಸಂಶೋಧನೆಗಳು ಪ್ರಪಂಚದಲ್ಲಿಯೇ ಅಪೂರ್ವವಾಗಿವೆ. ರಾಮನ್ ಪರಿಣಾಮವು (Raman Effect) ಬೆಳಕಿನ ಚದರುವಿಕೆಯನ್ನು ಕುರಿತು ನಡೆದ ಸಂಶೋಧನಗಳಲ್ಲಿ ಮುಕುಟಪ್ರಾಯವಾಗಿದೆ. ಪದಾರ್ಥದ ಅಂತರ್-ರಚನೆಯನ್ನು ಕಂಡುಹಿಡಿಯಲು ಈ ಪರಿಣಾಮವು ಒಂದು ಪ್ರಬಲವಾದ ಸಾಧನವಾಗಿದೆ. ೧೯೧೯ ರಿಂದ ೧೯೨೭ ರ ವರೆಗೆ ಪ್ರೊ. ರಾಮನ್ ಮತ್ತು ಅವರ ಸಹಕಾರಿಗಳು ಬೆಳಕಿನ ಚದುರುವಿಕೆಯನ್ನು ಕುರಿತು ಬೇರೆ ಬೇರೆ ಪದಾರ್ಥಗಳ ಮೇಲೆ ಪ್ರಯೋಗಗಳನ್ನು ಮಾಡಿದರು. ವಸ್ತುವಿನ ಅಣುಗಳು ಬೆಳಕನ್ನು ಚದರಿಸುವವು. ಚದರಿದ ಬೆಳಕಿನ ಅಲೆಯುಳತೆ ಮಾರ್ಪಡುವುದೇ ಎಂಬ ಪ್ರಶ್ನೆ ರಾಮನ್ನರ ಸಂಶೋಧನೆಗಳ ಜೀವಾಳದಂತಿತ್ತು. ರಾಮನ್ ಮತ್ತು ಕೆ. ಎಸ್. ಕೃಷ್ಣನ್ ಅವರು ಹಲವಾರು ದ್ರವಪದಾರ್ಥಗಳ ಮೇಲಿಂದ ಬೆಳಕನ್ನು ಚದರಿಸಿ ಚದರಿದ ಬೆಳಕಿನ ಅಲೆಯುಳತೆಯನ್ನು ಅಳೆದರು. ಕೊನೆಗೆ ೧೯೨೮ ರ ಫೆಬ್ರುವರಿ ತಿಂಗಳಲ್ಲಿ ಚದರಿದ ಬೆಳಕಿನ ಅಲೆಯುಳತೆ ಮೊದಲು ಬೀಳುವ ಬೆಳಕಿನ ಅಲೆಯುಳತೆಗಿಂತಲೂ ಭಿನ್ನವಿರುವುದೆಂದು ಸಿದ್ಧವಾಯಿತು. ಅಂದಿನಿಂದ ಇಂದಿನ ವರೆಗೆ 'ರಾಮನ್ ಪರಿಣಾಮ' ವನ್ನು ಕುರಿತು ನಮ್ಮ ದೇಶದಲ್ಲಿಯೂ, ಪರದೇಶಗಳಲ್ಲಿಯೂ ಸಾವಿರಾರು ಸಂಶೋಧನೆಗಳು ನಡೆದಿವೆ. ೧೯೨೮ ರಿಂದ ೧೯೩೮ರ ವರೆಗೆ–ಹತ್ತು ವರ್ಷದಲ್ಲಿ-ಒಟ್ಟು ೨೪೮೬ ವಸ್ತುಗಳ ಮೇಲೆ 'ರಾಮನ್ ಪರಿಣಾಮ' ದ ಪ್ರಯೋಗಗಳನ್ನು ಮಾಡಲಾಗಿದೆ. ಈ ಪ್ರಯೋಗಗಳ ಫಲಿತಾಂಶವನ್ನು ೧೮೦೦ ಸಂಶೋಧನಾಲೇಖನಗಳಲ್ಲಿ

ಚರ್ಚಿಸಲಾಗಿದೆ. ರಾಮನ್ ಪರಿಣಾಮವನ್ನು ಕುರಿತು ಹಲವಾರು ಬೆಲೆ ಬಾಳುವ ಉದ್ಗ್ರಂಥಗಳು ಪ್ರಕಟವಾಗಿವೆ. 'ರಾಮನ್ ಪರಿಣಾಮ' ದ ಸರ್ವದೇಶೀಯತೆಯನ್ನೂ ಪದಾರ್ಥದ ಆಂತರ ರಚನೆಯ ಅಭ್ಯಾಸದ ಒಂದು ಪ್ರಬಲವಾದ ಸಾಧನವಾದುದನ್ನೂ ಮನ್ನಿಸಿ ೧೯೩೦ ರಲ್ಲಿ ಪ್ರೊ. ರಾಮನ್ ಅವರಿಗೆ–ಸುಏಜ್ ಕಾಲುವೆಯ ಪೂರ್ವದ ದೇಶಕ್ಕೆ ಮೊದಲನೆಯ ಸಲ—ಜಗದ್ವಿಖ್ಯಾತ 'ನೊಬೆಲ್' ವಿಜ್ಞಾನ ಪಾರಿತೋಷಕವು ಕೊಡಲಾಯಿತು.

ಖಗೋಲಿಕ ಭೌತ ವಿಜ್ಞಾನದಲ್ಲಿ (Astro-physics) ಕಳೆದ ಮುವತ್ತು ವರ್ಷಗಳಲ್ಲಿ ಕೆಲವು ಮಹತ್ವದ ಸಂಶೋಧನೆಗಳಾಗಿವೆ. ೧೯೧೯ ರಲ್ಲಿ ಡಾ. ಮೇಘನಾದ ಸಾಹಾ ಅವರು ಸೂರ್ಯನಲ್ಲಿಯ ಮೂಲ ಭೂತಗಳನ್ನು ಕುರಿತು ತಮ್ಮ ಸಂಶೋಧನ ಕಾರ್ಯವನ್ನು ಪ್ರಕಟಿಸಿದರು. ಸೌರಗೋಲಕದಲ್ಲಿ ( Solar Chromosphere) ಇರುವ ಅಣುಗಳಲ್ಲಿಯ ಎಲೆಕ್ಟ್ರಾನ್‌ಗಳು (Electrons ) ಹಾರಿ ಹೋಗಿ ಅಣೂಕರಣವಾಗುವುದರ ಬಗ್ಗೆ ( Ionisation ) ತಮ್ಮ ಸಂಶೋಧನೆಗಳನ್ನು ಪ್ರಪಂಚದ ಮುಂದಿರಿಸಿದರು. ಡಾ. ಸಾಹಾರವರ ಕಾರ್ಯದ ಮಹತಿಯನ್ನು ಪ್ರಸಿದ್ಧ ಖಗೋಲಶಾಸ್ತ್ರಜ್ಞರಾದ ದಿವಂಗತ ಸರ್ ಆರ್ಥರ್ ಎಡಿಂಗ್ಟನ್ ಇವರ ಮುಖದಿಂದ ಕೇಳುವ ಹಾಗಿದೆ. ಅವರ ಉದ್ಗಾರಗಳು ಹೀಗಿವೆ "೧೬೦೮ ರಲ್ಲಿ ಗೆಲಿಲಿಯೋನ ದೂರದರ್ಶಕದ ರಚನೆಯ ನಂತರ, ಇಂದಿನ ವರೆಗೆ ಖಗೋಲ ಭೌತ ಶಾಸ್ತ್ರದಲ್ಲಾದ ಹತ್ತು ಮಹತ್ವದ ಸಂಶೋಧನೆಗಳಲ್ಲಿ ಸಹಾರವರ ಸಿದ್ಧಾಂತವೂ ಒಂದಾಗಿದೆ."

ಪರಮಾಣು ಶಾಸ್ತ್ರದ ಬೆಳವಣಿಗೆ ಜಗತ್ತಿನ ಬೇರೆಬೇರೆ ಭಾಗಗಳಲ್ಲಿ ಭರದಿಂದ ಸಾಗಿದೆ. ಅಮೇರಿಕಾ ದೇಶದಲ್ಲಿ ಪರಮಾಣು ಬಾಂಬಿನ ಸಿದ್ಧತೆ ಮತ್ತು ಅದರ ಪರಿಕಾರ್ಮಿಕ ಜಟಿಲತೆಯನ್ನು ಕುರಿತು ಭರದಿಂದ ಕೆಲಸ ನಡೆದಿದೆ.ಅದರ ಜೊತೆಯಲ್ಲಿ ಪದಾರ್ಥದ ಮೂಲಭೂತ ಕಣಗಳನ್ನು—ಎಲೆಕ್ಟ್ರಾನ್, ನ್ಯೂಟ್ರಾನ್, ಮಿಸೊಟ್ರಾನ್ ಮುಂತಾದವುಗಳ ಕುರಿತು–ಸೂಕ್ಷ್ಮವಾದ ಪ್ರಯೋಗಗಳು ಪ್ರಪಂಚದ ದೊಡ್ಡ ದೊಡ್ಡ ಪ್ರಯೋಗಶಾಲೆಗಳಲ್ಲಿ ನಡೆದಿವೆ. ಪರಮಾಣುಶಕ್ತಿ, ವಿಶ್ವಕಿರಣ–( Cosmic Rays ) ಶಕ್ತಿ ಇವುಗಳ ಬಗ್ಗೆ ರಶಿಯಾ ಮತ್ತು ಅಮೇರಿಕೆಯ ವೈಜ್ಞಾನಿಕರ ನಡುವೆ ಸ್ಪರ್ಧೆಯೇ ನಡೆದಂತಾಗಿದೆ.

ಹಿಂದುಸ್ಥಾನದಲ್ಲಿ ಪರಮಾಣುಶಕ್ತಿಯ ಉತ್ಪಾದನೆಗೆ ಬೇಕಾಗುವ ಕಚ್ಚಾ ಸರಕುಗಳಿಗೇನು ಕಡಮೆ ಇಲ್ಲ. ತಿರುವಾಂಕೂರಿನ ಮೊನಾಝೈಟ್ ( Monasite ) ಉಸುಕಿನಲ್ಲಿ, ಪರಮಾಣುಶಕ್ತಿಯ ಉತ್ಪಾದನೆಗೆ ಬೇಕಾಗುವ ಥೋರಿಯಂ ( Thorium ) ಲೋಹವು ಸಿಕ್ಕುತ್ತದೆ. ಅದಲ್ಲದೆ ಮದ್ರಾಸ್ ಪ್ರಾಂತದ ಪೂರ್ವ ವಿಭಾಗದ ತಿನ್ನೆವೆಲ್ಲಿ ಮತ್ತು ವಾಲ್ಟೇರ್ ಜಿಲ್ಲೆಗಳಲ್ಲಿಯೂ ಥೋರಿಯಂ ದೊರೆಯುತ್ತದೆ. ಒಟ್ಟಾಗಿ ೩೦ ರಿಂದ ೪೦ ಲಕ್ಷ ಟನ್ ಅದರುಗಳಲ್ಲಿ ೮ ರಿಂದ ೧೦% ಥೋರಿಯಂ ಹೊರಡಬಹುದೆಂದು ಅಂದಾಜು ಮಾಡಲಾಗಿದೆ. ಪರಮಾಣುವಿನ ಕೇಂದ್ರ ವ್ಯತ್ಯಾಸದ ಅಭ್ಯಾಸಕ್ಕೆ ಆವಶ್ಯಕವಿರುವ ಸಲಕರಣೆಗಳಲ್ಲಿ ಸೈಕ್ಲೊಟ್ರಾನ್ ಮತ್ತು ಬೀಟಾಟ್ರಾನ್ ( Cyclotron & Betatron ) ಎರಡು ಮಹತ್ವದ ಸಲಕರಣೆಗಳಿವೆ. ಕಲಕತ್ತಾ ವಿಶ್ವವಿದ್ಯಾನಿಲಯದಲ್ಲಿ ಸೈಕ್ಲೊಟ್ರಾನ್ ಕಟ್ಟಲಾಗಿದೆಯಾದರೂ ಸಾಕಷ್ಟು ಕೆಲಸ ನಡೆದಿಲ್ಲ. ಮುಂಬಯಿಯಲ್ಲಿಯ 'ಮೂಲಭೂತ ಸಂಶೋಧನಾ ಸಂಸ್ಥೆ' ( Institute of Fundamental R-search ) ಯಲ್ಲಿ ಬೀಟಾಟ್ರಾನನ್ನು ಕಟ್ಟುವ ಪ್ರಯತ್ನಗಳು ನಡೆದಿವೆ. ಇವೆಲ್ಲಕ್ಕೂ ಮಹತ್ವದ್ದಾಗಿ ಕೇಂದ್ರ ಸರಕಾರವು ಭಾರತೀಯ ಪಾರ್ಲಿಮೆಂಟಿನ ಮುಖಾಂತರ "ರಾಷ್ಟ್ರೀಯ ಪರಮಾಣುಶಕ್ತಿ ಸಮಿತಿ" (National Atomic Energy Commission ) ಯೊಂದನ್ನು ರಚಿಸಿದೆ. ದೇಶದ ಪ್ರಮುಖ ವೈಜ್ಞಾನಿಕರು ಈ ಸಮಿತಿಯ ಸದಸ್ಯರಾಗಿದ್ದಾರೆ. ಭಾರತವು ಈ ಸಮಿತಿಯ ಕಾರ್ಯದ ಕಡೆಗೆ ಆಶಾಪೂರ್ಣ ದೃಷ್ಟಿಯಿಂದ ದಾರಿ ಕಾಯುತ್ತ ಕುಳಿತಿದೆ.

### ರಸಾಯನಶಾಸ್ತ್ರ

ರಾಷ್ಟ್ರಗಳ ಔದ್ಯೋಗಿಕ ಪ್ರಗತಿಗೆ ರಸಾಯನ ಶಾಸ್ತ್ರದ ಆವಶ್ಯಕತೆ ಹೆಚ್ಚಾಗಿದೆ. ನಮ್ಮಲ್ಲಿಯ ರಸಾಯನ ಶಾಸ್ತ್ರಜ್ಞರಿಗೆ ದಿವಂಗತ ಶ್ರೀ ಪ್ರಫುಲ್ಲಚಂದ್ರರಾಯ ಅವರು ಆದ್ಯಾಚಾರ್ಯರು. ದೇಶದ ಔದ್ಯೋಗೀಕರಣದ ಜೊತೆಗೆ ರಸಾಯನಶಾಸ್ತ್ರದ ಬೆಳವಣಿಗೆ ಅಂಟಿಕೊಂಡಿರುತ್ತದೆ. ಆಚಾರ್ಯ ರಾಯರು ರಸಾಯನಶಾಸ್ತ್ರದ ಸಂಶೋಧನೆಯ ಜೊತೆಗೆ ರಸಾಯನಗಳ ಉದ್ಯಮವನ್ನು ಕೈಯಲ್ಲಿ ತೆಗೆದುಕೊಂಡಿದ್ದರು. ೧೯೧೪ ರ ಮಹಾಯುದ್ಧಕ್ಕಿಂತಲೂ ಪೂರ್ವದಲ್ಲಿ

ಕೆಲವು ಬಟ್ಟೆಯ ಗಿರಣಿಗಳನ್ನು ಬಿಟ್ಟರೆ ನಮ್ಮ ದೇಶದಲ್ಲಿ ಇನ್ನಾವ ಕೈಗಾರಿಕೆಯು ಭೂರಿಪ್ರಮಾಣದ ಮೇಲೆ ನಡೆದಿರಲಿಲ್ಲ. ಯುದ್ಧ ಕಾಲದಲ್ಲಿ ಕೆಲವು ಹೊಸ ಕೈಗಾರಿಕೆಗಳ ಸ್ಥಾಪನೆಯ ಜೊತೆಗೆ ಅವುಗಳಿಗೆ ಸಹಾಯಕವಾಗುವಂಥ ಪ್ರಯೋಗಶಾಲೆಗಳು ಹುಟ್ಟಿದವು. ಹತ್ತಿ, ಸಕ್ಕರೆ, ಅರಗು ಮುಂತಾದವುಗಳನ್ನು ಕುರಿತು ಸಂಶೋಧನ ಸಮಿತಿಗಳೂ ಪ್ರಯೋಗಶಾಲೆಗಳೂ ಸ್ಥಾಪನೆಯಾದವು. ನಮ್ಮದು ವಿಶಾಲವಾದ ದೇಶವಾದುದರಿಂದ ದೇಶದ ಬೇರೆ ಬೇರೆ ಭಾಗಗಳಲ್ಲಿಯ ಕಚ್ಚಾ ಸರಕುಗಳನ್ನು ರಾಷ್ಟ್ರೀಯ ಬೆಳವಣಿಗೆಗಾಗಿ ಅಣಿಮಾಡಿ ದೇಶದ ಆರ್ಥಿಕ ಮಟ್ಟವನ್ನು ಎತ್ತುವ ಕೆಲಸ ನಮ್ಮ ರಸಾಯನ ಶಾಸ್ತ್ರಜ್ಞರನ್ನು ಕೂಡಿದೆ. ಆ ದಿಶೆಯಲ್ಲಿ ನಮ್ಮಲ್ಲಿಯ ಶಾಸ್ತ್ರಜ್ಞರು ಕಾರ್ಯೋನ್ಮುಖರಾಗಿದ್ದಾರೆ.

ಎಣ್ಣೆ ಮತ್ತು ಕೊಬ್ಬುಗಳಿಗೆ ಬೇಕಾಗುವ ಬೀಜಗಳನ್ನು ಕುರಿತು ಬೇರೆ ಬೇರೆ ಪ್ರಾಂತೀಯ ಸರಕಾರಗಳು ತಮ್ಮ ಪ್ರಾಂತದ ಬೆಳವಣಿಗೆಯನ್ನು ನೋಡಿವೆ. ಬಂಗಾಲದಲ್ಲಿ ಸಣಬಿನ ಬೀಜದಿಂದ ಎಣ್ಣೆಯನ್ನು ತಗೆಯುವ ಬಗ್ಗೆ ಕೆಲಸ ನಡೆದಿದೆ. 'ಮಲಬಾರ್ ಸಾರ್ಡೈನ' **(Malabar Sardine)** ಎಂಬ ಮೀನದ ಎಣ್ಣೆಯಿಂದ ಕೊಬ್ಬುಳ್ಳ ಆಮ್ಲ ( **Fatty acids** ) ಗಳನ್ನು ಬೇರ್ಪಡಿಸುವುದಕ್ಕಾಗಿ ಹೊಸದಾದ ಒಂದು ವಿಧಾನವನ್ನು ನಮ್ಮಲ್ಲಿಯ ರಸಾಯನ ಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಹಿಂದುಸ್ತಾನದಲ್ಲಿ ಹೆಚ್ಚಿನ ಪ್ರಮಾಣದ ಮೇಲೆ ವನಸ್ಪತಿ ತೈಲವು ಹುಟ್ಟುತ್ತದೆ. ಎಂಜಿನ್ನು ಮತ್ತು ಮಹಾಯಂತ್ರಗಳನ್ನು ನಡೆಸುವುದಕ್ಕೆ ಪೆಟ್ರೋಲಿನ ಬದಲಾಗಿ ದೇಶದಲ್ಲಿಯೇ ಹುಟ್ಟುವ ಈ ಎಣ್ಣೆಯನ್ನು ಉಪಯೋಗಿಸುವುದರ ಬಗ್ಗೆ ಅಲೀಪೂರಿನ ಸರಕಾರಿ ಪರೀಕ್ಷಾಗ್ರಹದಲ್ಲಿ ( Government Test House ) ೧೯೪೧ರಿಂದ ಪ್ರಯೋಗಗಳು ನಡೆದಿವೆ. ಡೀಜಲ್ ಎಂಜಿನ್ನುಗಳಿಗೆ ಈ ಎಣ್ಣೆಯನ್ನು ಹೇಗೆ ಉಪಯೋಗಿಸಬಹುದೆಂಬುದೆ ದೊಡ್ಡ ಸಮಸ್ಯೆಯಾಗಿದೆ. ಅದಲ್ಲದೆ ಕಲ್ಲಿದ್ದಲಿಯಿಂದ ಕೃತಕ ಪೆಟ್ರೋಲನ್ನು ಸಿದ್ಧಮಾಡುವ ಪ್ರಯೋಗಗಳೂ ಸಾಗಿವೆ.

"ಇದು ಮೆದುವುಗಳ ಯುಗ" ( Age of Plastics ) ಎಂದು ಹೇಳುವುದು ವಾಡಿಕೆಯಾಗಿದೆ. ಮೆದುವುಗಳನ್ನು ಸಿದ್ಧಮಾಡುವುದಕ್ಕೆ ರಾಳ ( Rasin ) ಬೇಕು. ಇದು ನಮ್ಮ ದೇಶದಲ್ಲಿ ಬೆಳೆಯುವದಿಲ್ಲ. ಕಳೆದ ಮಹಾ ಯುದ್ಧದಲ್ಲಿ 'ಭಾರತೀಯ ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನಾ ಸಮಿತಿ'ಯ ಶಾಸ್ತ್ರಜ್ಞರು ರಾಳದ ಬದಲಾಗಿ ಇಲ್ಲಿಯೇ ಹುಟ್ಟುವ ಬೇರೆ ಬೇರೆ ಅಂಟುಗಳನ್ನು ಉಪಯೋಗಿಸಿ ಮೆದುವಿನಂತಹ ಗಟ್ಟಿ ಒಡೆಯದ ಪಾತ್ರೆಗಳನ್ನು ( Unbreakable Containers ) ಸಿದ್ಧಮಾಡಿದ್ದಾರೆ.

### ಕೃಷಿ ವಿಜ್ಞಾನ

ಭಾರತವು ಕೃಷಿ ಪ್ರಧಾನವಾದ ದೇಶ. ಆದುದರಿಂದ ನೆಲದ ಉತ್ಪಾದನಾ ಶಕ್ತಿಯನ್ನು ಕುರಿತು ಸಾಕಷ್ಟು ಸಂಶೋಧನೆಗಳಾಗಬೇಕು. ಕೃತಕ ಗೊಬ್ಬರಗಳ ವ್ಯವಸಾಯವು ಭರದಿಂದ ಮುಂದುವರಿಯಬೇಕು. ನೆಲದಲ್ಲಿ ಸಾರಜನಕದ ನೇರವಾದ ಸ್ಥಿರೀಕರಣದಿಂದ ( Fixation of Nitrogen ) ನೆಲದ ಉತ್ಪಾದಕ ಶಕ್ತಿ ಬೆಳೆಯುತ್ತದೆ ಎಂದು ಡಾ|| ನೀಲರತ್ನ ಧಾರರು ಸಿದ್ಧಮಾಡಿದ್ದಾರೆ. ಅವರು ೧೯೧೯ರಿಂದ ಪ್ರಯೋಗಗಳನ್ನು ನಡೆಸಿ ನೆಲದ ಉತ್ಪಾದಕ ಶಕ್ತಿಯನ್ನು ಹೇಗೆ ಹೆಚ್ಚಿಸಬಹುದೆಂಬುದನ್ನು ಕಂಡುಹಿಡಿಯುವ ಪ್ರಯತ್ನವನ್ನು ಮಾಡಿದ್ದಾರೆ. ಅಲಹಾಬಾದಿನ "ಭೂ-ವಿಜ್ಞಾನ ಸಂಸ್ಥೆ" ( Institute of Soil Science ) ಮತ್ತು ಬೆಂಗಳೂರಿನ ತಾತಾ ವಿಜ್ಞಾನ ಸಂಸ್ಥೆ ಇವುಗಳಲ್ಲಿ ಈ ವಿಷಯ ಸಂಶೋಧನೆ ನಡೆದು ಬರಡಾದ ನೆಲವನ್ನು ಮತ್ತೆ ಬೇಸಾಯಕ್ಕೆ ತಂದು ನೀಡುವ ಮಹತ್ಕಾರ್ಯವು ನಡೆದಿದೆ. ದೇಶದಲ್ಲಿಯ ಆಹಾರದ ಕೊರತೆಯು ಕೆಲವು ಮಹತ್ವದ ಸಂಶೋಧನೆಗಳಿಗೆ ಇಂಬುಗೊಡಹತ್ತಿದೆ. ಅಕ್ಕಿ, ತೆಂಗು, ತಂಬಾಕು, ತೈಲಬೀಜಗಳು ಇವೇ ಮುಂತಾದವುಗಳ ಬಗ್ಗೆ ಸಂಶೋಧನ ಕಾರ್ಯವು ಭರದಿಂದ ಸಾಗಿದೆ. ಕಬ್ಬಿನ ಸಾಗುವಳಿ, ಅದರಲ್ಲಿಯ ಶರ್ಕರಾಂಶದ ಹೆಚ್ಚುವಿಕೆ, ಅಲ್ಪವ್ಯಯದಲ್ಲಿ ರಸಪೂರಿತ ಕಬ್ಬುಗಳ ಬೆಳವಣಿಗೆ, ಈ ದಿಶೆಗಳಲ್ಲಿ ಬಹಳ ಕಾಲದಿಂದ ಕೆಲಸ ನಡೆದಿದೆ. ಕೊಯಿಮುತ್ತೂರಿನ ಕಬ್ಬಿನ ಪ್ರಯೋಗಶಾಲೆಗಳಲ್ಲಿ-ಪ್ರಯೋಗಕ್ಕೆಂದೇ ಅಣಿಮಾಡಿದ ಗದ್ದೆಗಳಲ್ಲಿ- ಹೊಸ ಮಾದರಿಯ ಕಬ್ಬುಗಳನ್ನು ಬೆಳೆದಿದ್ದಾರೆ. ಇವುಗಳಿಗೆ 'ಕೊ' ಜಾತಿಯ ಕಬ್ಬುಗಳೆಂದು ಹೆಸರು.

೧೯೨೧ರಿಂದ ಈಚೆಗೆ ಪ್ರಸಿದ್ಧ ರಸಾಯನಶಾಸ್ತ್ರಜ್ಞ ಎಫ್. ಜಿ ಡಾನನ್ ಇವರ ಶಿಷ್ಯತ್ರಯರಾದ ಭಟನಾಗರ್, ಮುಕರ್ಜಿ ಮತ್ತು ಘೋಷ ಇವರ ಸಂಶೋಧನಗಳು ಲೋಕೋತ್ತರ ಕೀರ್ತಿಯನ್ನು ಗಳಿಸಿವೆ. ವಸ್ತುವಿನ ಭಿನ್ನ ಭಿನ್ನ ಅವಸ್ಥೆಗಳ ಮೇಲೆ ಅಯಸ್ಕಾಂತ ಶಕ್ತಿಯ ಪರಿಣಾಮದ ವೈವಿಧ್ಯವನ್ನು ಕುರಿತು ಡಾ|| ಶಾಂತಿಸ್ವರೂಪ ಭಟನಾಗರ ಮತ್ತು ಈ ವರ್ಷದ 'ವಿಜ್ಞಾನ ಸಮ್ಮೇಲನ' ದ (Science Congress) ಅಧ್ಯಕ್ಷರಾದ ಡಾ|| ಕೆ. ಎಸ್. ಕೃಷ್ಣನ್

ಇವರ ಸಂಶೋಧನೆಗಳು ಅಪೂರ್ವವಾಗಿವೆ. ಭಟನಾಗರರು ಪದಾರ್ಥಗಳ 'ಅಯಸ್ಕಾಂತಿಕ ಮಾರ್ದವ'ನ್ನು (Magnetic Susceptibibty) ಅಳೆಯುವುದಕ್ಕಾಗಿ, ಒಂದು ಸೂಕ್ಷ್ಮವಾದ ಸಲಕರಣೆಯನ್ನು ರಚಿಸಿದ್ದಾರೆ. ಈ ಸಲಕರಣೆಗೆ 'ಭಟನಾಗರ್ ಮಾಥುರ್ ಅಯಸ್ಕಾಂತಿಕ ತಕ್ಕಡಿ' ಎಂದೆನ್ನುತ್ತಾರೆ. ಲಂಡನ್ನಿನ ಸಲಕರಣೆಗಳ ಪ್ರಸಿದ್ಧ ವ್ಯಾಪಾರಿಗಳಾದ ಆ್ಯಡಮ್ ಹಿಲ್ಗರ್ ಕಂಪನಿಯವರು ಈ ಸಲಕರಣೆಯನ್ನು ಮಾರಾಟಕ್ಕಿಟ್ಟದ್ದಾರೆ. ಡಾ|| ಕೆ. ಎಸ್. ಕೃಷ್ಣನ್ ಅವರು ಸ್ಫಟಿಕದ ಅಯಸ್ಕಾಂತತೆಯನ್ನು ಕುರಿತು ಮಹತ್ವದ ಕೆಲಸವನ್ನು ಮಾಡಿದ್ದಾರೆ.

ನೆಲದ ರಚನಾಂಗಗಳ ನಡುವೆ ಒಂದು ವಿಶಿಷ್ಟವಾದ ರಾಸಾಯನಿಕ ಕ್ರಿಯೆ ನಡೆಯುತ್ತಿದೆ. ಇದಕ್ಕೆ ಕಲಿಲ ಕ್ರಿಯೆ (Colloidal action) ಎಂದೆನ್ನುತ್ತಾರೆ. ನೆಲದಲ್ಲಿರುವ ಆರ್ದ್ರತೆಯನ್ನು ಹೀರುವ ಶಕ್ತಿ ಮತ್ತು ಆ ನೆಲದ ಉತ್ಪಾದಕ ಶಕ್ತಿ, ಈ ಕಲಿಲ ಕ್ರಿಯೆಯನ್ನು ಅವಲಂಬಿಸಿವೆ ಎಂದು ಪ್ರೊ. ಜೆ. ಎನ್. ಮುಕರ್ಜಿಯವರು ತೋರಿಸಿಕೊಟ್ಟಿದ್ದಾರೆ. ಗಣಿಯ ಎಣ್ಣೆಯನ್ನು ಅಗೆಯುವ ವಿಧಾನದಲ್ಲಿ ಕೆಸರಿನ ಕಲಿಲಕ್ರಿಯೆ ಎಣ್ಣೆಯ ಶುದ್ಧೀಕರಣದಲ್ಲಿ ಒಂದು ಮಹತ್ವದ ಅಂಶವಾಗಿದೆ. ಆಸಾಮ ಎಣ್ಣೆಯ ಕಂಪನಿಯವರು ಈ ಮಹತ್ವದ ಕಾರ್ಯವನ್ನು ಡಾ|| ಮುಕರ್ಜಿಯವರಿಗೆ ಒಪ್ಪಿಸಿದ್ದಾರೆ.

ಇತ್ತೀಚೆಗೆ ರಸಾಯನ ಶಾಸ್ತ್ರದಲ್ಲಿ "ಜೋಶಿ ಪರಿಣಾಮ" (Joshi effect) ದ ಹೆಸರು ಆಗಾಗ ಕೇಳಿಬರುತ್ತದೆ. ವಿದ್ಯುತ್ ಕ್ಷೇತ್ರದಲ್ಲಿ ನಡೆಯುವ ರಾಸಾಯನಿಕ ಕ್ರಿಯೆಗೆ ಬೇಕಾಗುವ ಒಂದು ವಿಶಿಷ್ಟ ವಿದ್ಯುತ್ತಿನ ಒತ್ತಡವನ್ನು (Electric potential) ಹಿಂದು ವಿಶ್ವವಿದ್ಯಾನಿಲಯದ ಡಾ|| ಎಸ್. ಎಸ್. ಜೋಶಿಯವರು ಗುರುತಿಸಿದ್ದಾರೆ. ಒತ್ತಡದ ಈ ಬೆಲೆಗೆ 'ಹೊಸ್ತಿಲ ಒತ್ತಡ' (Threshold potential) ಎಂದು ಸಾರ್ಥಕವಾಗಿಯೇ ಕರೆದಿದ್ದಾರೆ. ಈ ವಿಧದ ರಾಸಾಯನಿಕ ಕ್ರಿಯೆಗಳಿಗೆ 'ಜೋಶಿ ಪರಿಣಾಮ' ಎಂದು ಕರೆಯಲಾಗಿದೆ.

### ಸಸ್ಯವಿಜ್ಞಾನ

೧೯ ನೆಯ ಶತಕದ ಕೊನೆಯ ಅರ್ಧದಲ್ಲಿ ದಿವಂಗತ ಶ್ರೀ ಜಗದೀಶಚಂದ್ರ ಬೋಸರು ಸಸ್ಯಶಾಸ್ತ್ರದಲ್ಲಿ ಸಂಶೋಧನೆಗಳನ್ನು ನಡಸಿ ಸಸಿಗಳ ಮೇಲಾಗುವ ಕ್ರಿಯೆಗಳಿಗೆ, ಅವುಗಳಲ್ಲಿ ಪ್ರತಿಕ್ರಿಯೆ ಆಗುತ್ತದೆಂದು ಪ್ರಯೋಗದಿಂದ ತೋರಿಸಿದರು. ಇದಕ್ಕಾಗಿ "ಕ್ರೆಸ್ಕೊಗ್ರಾಫ್" ಎಂಬೊಂದು ಸೂಕ್ಷ್ಮವಾದ ಸಲಕರಣೆಯನ್ನು ಕಲಕತ್ತೆಯಲ್ಲಿಯೇ ರಚಿಸಿದರು.

ಭೂಗರ್ಭದಲ್ಲಿಯ ಕೆಲವು ಅವಶೇಷಗಳ ಹುಟ್ಟಿನ ಬಗ್ಗೆ ಅಭ್ಯಾಸ ಮಾಡುವುದಕ್ಕಾಗಿ "ಉತ್ಖಾತ ವನಸ್ಪತಿ ಶಾಸ್ತ್ರ"ದಲ್ಲಿ (Fossil Botany) ಪರಿಶ್ರಮ ಬೇಕು. ಈ ಶಾಸ್ತ್ರದಲ್ಲಿಯ ಸಂಶೋಧನೆಗೆಂದೇ ಲಖ್ನೋದಲ್ಲಿ ದಿವಂಗತ ಡಾ. ಬೀರ್ಬಲ್ ಸಹಾನಿಯವರ ನೇತೃತ್ವದಲ್ಲಿ 'Institute of Paliobotany' ಎಂಬ ಸಂಸ್ಥೆ ಜನ್ಮತಾಳಿದೆ. ಈ ಸಂಸ್ಥೆಯಲ್ಲಿ ಉತ್ಖಾತ ವನಸ್ಪತಿಗಳ ವೈಜ್ಞಾನಿಕ ಪಾರ್ಶ್ವವನ್ನೂ ಭೂಗರ್ಭಶಾಸ್ತ್ರದ ಆರ್ಥಿಕ ಮಹತ್ವವನ್ನೂ ಕುರಿತು ಸಂಶೋಧನೆ ನಡೆಯಬೇಕೆಂದು ಆಶಿಸಲಾಗಿದೆ. ಡಾ. ಸಹಾನಿಯವರ ಅಕಾಲ ನಿಧನದಿಂದ ಈ ಕೆಲಸವು ಸ್ವಲ್ಪ ಹಿಮ್ಮೆಟ್ಟಿದಂತಾಗಿದೆ. ಮಧ್ಯಪ್ರಾಂತದ ಚಿಂಡ್ವಾರಾ ಜಿಲ್ಹೆಯ ಭೂಗರ್ಭದ ಪದರುಗಳಲ್ಲಿ ಒಂದು ವಿಶಿಷ್ಟ ಜಾತಿಯ (angiospermons) ಹೂವಿನ ಅಸ್ತಿತ್ವದ ಗುರುತು ಡಾ. ಸಹಾನಿಯವರ ಹಿರಿದಾದ ಸಂಶೋಧನೆಯಾಗಿದೆ.

### ಅನ್ವಿತ ವಿಜ್ಞಾನ

ಕಳೆದ ಐವತ್ತು ವರ್ಷಗಳಲ್ಲಿ ಹಲವಾರು ವೈಜ್ಞಾನಿಕ ಸಂಶೋಧನ ಸಂಸ್ಥೆಗಳು ಜನ್ಮತಾಳಿವೆ. ಆದರೆ ಇವುಗಳ ಸ್ಥಾಪನೆ ಮತ್ತು ವಿಕಸನದ ಹಿಂದೆ ಒಂದು ಯೋಜನೆ ಕಂಡುಬರುವದಿಲ್ಲ. ಬೇರೆ ಬೇರೆ ಸಂಸ್ಥೆಗಳ ನಡುವೆ ಒಂದು ವಿಧದ ಸಹಕಾರ ಇಲ್ಲದೇ ಹೋದರೆ ಸಂಶೋಧನ ಕಾರ್ಯದ ವೇಗವು ಮಂದವಾಗುತ್ತದೆ. ನಮ್ಮಲ್ಲಿಯ ಬೇರೆ ಬೇರೆ ಸಂಸ್ಥೆಗಳಲ್ಲಿ ಇದೇ ರೀತಿಯ ಸಂಬಂಧಗಳು ಬೆಳೆದು ಬಂದಂತೆ ಕಾಣಿಸುತ್ತದೆ. ಯುದ್ಧದ ವಿಷವಾಯು ವೈಜ್ಞಾನಿಕ ಸಂಶೋಧನೆಗೆ ಪೂರಕವಾಗಿರುತ್ತದೆ. ಎರಡನೆಯ ಮಹಾಯುದ್ಧವು ನಡೆದಾಗ ಆಗಿನ ಸರಕಾರವು ಹಲವಾರು ಸಂಶೋಧನೆಗಳಿಗೆ ಆರ್ಥಿಕ ಉತ್ತೇಜನವನ್ನು ಕೊಟ್ಟು, ತತ್ಸಂಬಂಧ ಸಂಶೋಧನೆಗಳನ್ನು ನಡೆಯಿಸಿತು. 'ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನ ಸಮಿತಿ' (Scientific and Industrial Research Council) ಅದೇ ಕಾಲದಲ್ಲಿ ಸ್ಥಾಪಿತವಾಯಿತು. ಯುದ್ಧ ಮುಗಿಯಿತು, ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ಲಭಿಸಿತು. ಪ್ರಧಾನ ಮಂತ್ರಿಗಳೇ ವೈಜ್ಞಾನಿಕ ಸಂಶೋಧನೆಯ ಮಂತ್ರಿಗಳಾದರು. ಆದುದರಿಂದ ಭಾರತದಲ್ಲಿ ವೈಜ್ಞಾನಿಕ ಸಂಶೋಧನೆಗೆ ಸಾಕಷ್ಟು ಪ್ರಶಸ್ತಿ ದೊರೆ

ಯಲು ಆರಂಭವಾಯಿತು. ಯುದ್ಧ ಕಾಲದಲ್ಲಿ ನಡೆದ ಸಂಶೋಧನೆಗಳನ್ನು ಶಾಂತಿ ಕಾಲದಲ್ಲಿ ದೇಶದ ಔದ್ಯೋಗಿಕ ಉನ್ನತಿಗೋಸುಗ ಅಣಿಮಾಡಲಾಯಿತು. ಕಳೆದ ಐದು ವರ್ಷಗಳಲ್ಲಿ ಈ ರೀತಿಯ ವೈಜ್ಞಾನಿಕ ಚಟುವಟಿಕೆಗಳು ಕೆಲವು ಮಹತ್ವದ ಸಂಶೋಧನೆಗಳಿಗೆ ಜನ್ಮ ಕೊಟ್ಟಿವೆ. ಪಾಕಿಸ್ತಾನದ ಹುಟ್ಟು ಹಿಂದುಸ್ತಾನಕ್ಕೆ ನಿರಾಶ್ರಿತರ ಸಮಸ್ಯೆಯನ್ನು ತಂದೊಡ್ಡಿತು. ನಿರಾಶ್ರಿತರಿಗೆ 'ಪೂರ್ವ ರಚಿತ' (Pre-fabricated) ಮನೆಗಳನ್ನು ಪೂರೈಸುವ ಕೆಲಸಕ್ಕೆ ಆರಂಭವಾಯಿತು. ಸಂಶೋಧನ ಸಮಿತಿಯ ಪ್ರಯೋಗ ಶಾಲೆಗಳಲ್ಲಿ ಇಂತಹ ಮನೆಗಳಿಗೆ ಬೇಕಾಗುವ ತಗಡುಗಳು ಸಿದ್ಧವಾಗಿವೆ. ದೇಶದ ವಾಯುಗುಣಕ್ಕನುಸರಿಸಿ ಈ ತಗಡುಗಳು ಹೆಚ್ಚು ಕಾಯಬಾರದು. ಅದರ ಜೊತೆಗೆ ಅವುಗಳ ಭದ್ರತೆಯೂ ಕಡಮೆಯಾಗಬಾರದು. ಸಂಶೋಧನ ಸಮಿತಿಯಲ್ಲಿ ಸಿದ್ಧವಾದ ತಗಡುಗಳಲ್ಲಿ ಮೂರು ಪದರುಗಳಿವೆ. ಮೇಲಿನ ಪದರು ಜಲಾವರೋಧಿ, ನಡುವಿನದು ಉಷ್ಣತಾವರೋಧಿ ಕೆಳಗಿನದು ಅಲಂಕಾರಮಯವಾಗಿರುವದರಿಂದ ಎಲ್ಲ ಕಾಲದಲ್ಲಿ ಭದ್ರವಾಗಿಯೂ ಸುಂದರವಾಗಿಯೂ ಉಳಿದುಕೊಳ್ಳಬಹುದಾಗಿದೆ. ರಾಷ್ಟ್ರೀಯ ಪದಾರ್ಥ ವೈಜ್ಞಾನಿಕ ಪ್ರಯೋಗ ಶಾಲೆಗಳಲ್ಲಿ ವಿದ್ಯುತ್ತಿನ ಬೀಸಣಿಕೆ, ಮೋಟರ, ಡಾಯ್ನಮೊ ಮುಂತಾದ ಯಂತ್ರಗಳಲ್ಲಿ ಉಪಯೋಗವಾಗುವ ಇಂಗಾಲದ ಕುಚ್ಚಗಳ ಸಿದ್ಧತೆ ನಡೆದಿದೆ. ಟೆಲಿಫೋನ ಮತ್ತು ವಿದ್ಯುತ್-ಪಾತ್ರೆಗಳಿಗೆ ಬೇಕಾಗುವ ಇಂಗಾಲದ ಹಲವಾರು ಸಲಕರಣೆಗಳನ್ನು ದೇಶದಲ್ಲಿಯೇ ದೊರೆಯುವ ಕಚ್ಚಾ ಸರಕುಗಳಿಂದ ಸಿದ್ಧ ಮಾಡುವ ಪ್ರಯತ್ನಗಳು ನಡೆದಿವೆ.

ತೊಗಲು ಹಿಂದುಸ್ತಾನದ ಒಂದು ಮಹತ್ವದ ನಿರ್ಯಾತ ವಸ್ತು. ಡಾಲರ್ ಗಳಿಸುವುದಕ್ಕೆ ಇದೊಂದು ಮಹತ್ವದ ಸಾಧನವಾಗಿದೆ. ಎರಡನೆಯ ಮಹಾಯುದ್ಧಕ್ಕಿಂತ ಮುಂಚೆ ಕಚ್ಚಾ ತೊಗಲನ್ನೇ ಹೊರಗೆ ಕಳಿಸುತ್ತಿದ್ದರು. ಈಗ ಅದನ್ನು ಮಿದುವಾಗಿಸಿ ಅದರ ನಿರ್ಯಾತದ ಮಹತ್ವವನ್ನು ಹೆಚ್ಚು ಮಾಡುವ ಪ್ರಯತ್ನಗಳು ನಡೆದಿವೆ. ಮದ್ರಾಸಿನ 'ಕೇಂದ್ರೀಯ ಚರ್ಮ ಸಂಶೋಧನಾಲಯ'ದಲ್ಲಿ ಒಂದು ಹೊಸದಾದ ಕೃತಕ ವಸ್ತುವಿನಿಂದ ಹಸಿತೊಗಲನ್ನು ಹದಮಾಡಿ ನಿರ್ಯಾತಕ್ಕೆ ಅಣಿಮಾಡಹತ್ತಿದ್ದಾರೆ. ಈ ಹೊಸ ಕೃತಕ ವಸ್ತುವಿನ ಉಪಯೋಗವು ನಮ್ಮ ರಾಷ್ಟ್ರೀಯ ವಾಣಿಜ್ಯಕ್ಕೆ ಒಂದು ಮಹತ್ವದ ಕಾಣಿಕೆಯಾಗಬಹುದೆಂದು ಆಶಿಸಲಾಗಿದೆ.

ಜಮಶೇದಪುರದ ಲೋಹಸಂಶೋಧನಾಲಯದಲ್ಲಿ ಉಕ್ಕಿನ ಬಗ್ಗೆ ಸಂಶೋಧನೆಗಳು ನಡೆದಿವೆ. ಆಸ್ಟಿನಾಯ್ಟ (Austinite) ಜಾತಿಯ ಉಕ್ಕಿನಲ್ಲಿ ನಿಕಲ್ ಲೋಹವು ಸೇರಿರುತ್ತದೆ. ನಮ್ಮ ದೇಶದಲ್ಲಿ ಈ ಲೋಹವು ಸಿಕ್ಕುವುದಿಲ್ಲ. ಆದುದರಿಂದ ನಮ್ಮಲ್ಲಿ ದೊರೆಯುವ 'ಮೆಂಗನೀಸ್' ಲೋಹವನ್ನು ಉಪಯೋಗಿಸಿ ಅದೇ ಮಾದರಿಯ ಉಕ್ಕನ್ನು ಸಿದ್ಧ ಮಾಡುವ ಪ್ರಯತ್ನಗಳು ನಡೆದಿವೆ. ಕಲಂಕ ರಹಿತ ಉಕ್ಕು, ವಿಶೇಷವಾಗಿ ಶಸ್ತ್ರಕ್ರಿಯೆಗೆ ಬೇಕಾಗುವ ಈ ತೆರದ ಉಕ್ಕನ್ನು ಸಿದ್ಧ ಮಾಡುವುದರಲ್ಲಿ ನಮ್ಮ ದೇಶದ ಲೋಹಶಾಸ್ತ್ರಜ್ಞರು ಸಾಕಷ್ಟು ಮುಂದುವರಿದಿದ್ದಾರೆ.

ಕಳೆದ ಎರಡು ವರ್ಷಗಳಲ್ಲಿ ದೇಶದ ಆರ್ಥಿಕ ಮತ್ತು ಔದ್ಯೋಗಿಕ ಅಭಿವೃದ್ಧಿಯನ್ನು ಅನುಲಕ್ಷಿಸಿ, ವೈಜ್ಞಾನಿಕ ಸಹಾಯವನ್ನು ನೀಡುವ ಕೆಲಸವು ಸುವ್ಯವಸ್ಥಿತವಾಗಿ ಆರಂಭವಾಗಿದೆ. ಅಲ್ಲಲ್ಲಿ ರಾಷ್ಟ್ರೀಯ ಪ್ರಯೋಗ ಶಾಲೆಗಳು ಸ್ಥಾಪಿತವಾಗಿವೆ. ಸರಿತ್-ಸಂಶೋಧನ ಕಾರ್ಯಕ್ಕೆ ಹಲವಾರು ಸರಿತ್-ಯೋಜನೆಗಳ ರೂಪದಲ್ಲಿ ಸಾಮುಗ್ರಿ ದೊರೆಯಹತ್ತಿದೆ. ಮೇಲ್ಮಟ್ಟದ ಕೆಲವರು ದೊಡ್ಡ ವೈಜ್ಞಾನಿಕರು ನಮ್ಮ ದೇಶದಲ್ಲಿದ್ದಾರೆ. ಅವರ ಸಂಖ್ಯೆ ಬಹಳ ಕಡಮೆ ಇದ್ದರೂ ಅವರ ನೇತೃತ್ವದಲ್ಲಿ ಸಂಶೋಧನ ಕಾರ್ಯದ ವಿಕಾಸವು ಅವ್ಯಾಹತವಾಗಿ ಸಾಗಬಹುದು. ದೇಶದ ಮನುಷ್ಯ-ಶಕ್ತಿ ಸಾಕಷ್ಟಿದ್ದು, ಶಕ್ತಿಯ ಅಲ್ಪಾಂಶವಾದರೂ ಸಂಶೋಧನ ಕಾರ್ಯವನ್ನು ಕೈಕೊಂಡರೆ, ಆರ್ಥಿಕ ಮತ್ತು ಔದ್ಯೋಗಿಕ ಅಭಿವೃದ್ಧಿಯ ಜೊತೆಗೆ ವಿಜ್ಞಾನಲೋಕದಲ್ಲಿ ನಮ್ಮ ದೇಶವು ತನ್ನದೇ ಆದ ಸ್ಥಾನವನ್ನು ಪಡೆಯಬಹುದೆಂದು ವಿಶ್ವಾಸದಿಂದ ಆಶಿಸಬಹುದು.

---

## ವೈದ್ಯರ ಸಪ್ತ ಮಹಾಪಾತಕಗಳು

ವೈದ್ಯಕೀಯ ಅಪರಾಧಗಳು ಅಸಂಖ್ಯವಾಗಿವೆ. ಅವುಗಳಲ್ಲಿ ಹೆಸರಿಸತಕ್ಕವು ಏಳು—ಅಸ್ಪಷ್ಟತೆ, ಕ್ರೂರತೆ, ಅವಿನಯ, ಅತಿ ವಿಶೇಷಜ್ಞತೆ, ದುರ್ಲಭ ವಸ್ತು ಮೋಹ, ದಡ್ಡತನ, ಮೈಗಳ್ಳತನ.

— ಡಾ. ಆಶರ್.

# ಕಾಂಗ್ರೆಸ್ಸಿಗೆ ಬದಲು ಇನ್ನೇನು?

ಲೇಖಕರು :
ಶ್ರೀ ಖಾದರಸಾಹೇಬ ಶೇಖ
ಪಾಚ್ಛಾಪುರ

**ಸ್ವರಾಜ್ಯ ಬಂದ ನಂತರ ಕಾಂಗ್ರೆಸ್ ನೀತಿಗೆಟ್ಟಿದೆ ಅಸಮರ್ಥವಾಗಿದೆ, ಎಂದು ತೆಗಳುವುದು ಸುಲಭ. ಆದರೆ ಕಾಂಗ್ರೆಸ್ಸನ್ನು ಹೊರದಬ್ಬಿದರೆ ಮುಂದೇನು? ಅದರ ಸ್ಥಾನವನ್ನು ವಹಿಸುವ ಯೋಗ್ಯತೆ ಯಾವ ಪಕ್ಷಕ್ಕಿದೆ? ಸದ್ಯಕ್ಕಂತೂ ತೋರುವುದಿಲ್ಲ. ಆದ್ದರಿಂದ ಕಾಂಗ್ರೆಸ್ ಇಲ್ಲವೆ ಅರಾಜಕತೆಯಲ್ಲೊಂದನ್ನು ನಾವು ಆರಿಸಿಕೊಳ್ಳಬೇಕಾಗುವುದೆಂದು ಕಾಂಗ್ರೆಸ್ಸಿನ ಬಹು ವರ್ಷದ ಅನುಯಾಯಿ ಶ್ರೀ ಶೇಖರು ವಿವರಿಸಿದ್ದಾರೆ.**

ಕಲಕತ್ತೆಯ ದಕ್ಷಿಣ ಭಾಗದಿಂದ ಆರಿಸಿಬಂದ ಶರಶ್ಚಂದ ಬೋಸರ ಜಯವು ಕಾಂಗ್ರೆಸ್ಸಿನ ಪೂರ್ಣ ಅಪಜಯವೆಂದು ಹೇಳಲಾಗುವದು. ಕಾರಣ, ಪ್ರತಿಯೊಬ್ಬನು ಅದರ ಭವಿತವ್ಯದ ಬಗೆಗೆ ಶಾಂತಚಿತ್ತದಿಂದ ವಿಚಾರ ಮಾಡುವ ವೇಳೆ ಬಂದಿದೆ.

ಕಾಂಗ್ರೆಸ್ಸಿನ ಭವಿತವ್ಯವನ್ನು ನೋಡಬೇಕಾದರೆ ಯಾವ-ದೊಂದು ಸಂಸ್ಥೆಯ ಭವಿತವ್ಯ ನೋಡುವದರ ಬದಲು, ಇಡೀ ರಾಷ್ಟ್ರದ ಭವಿತವ್ಯವನ್ನು ಕಣ್ಣೆದುರಿನಲ್ಲಿಟ್ಟುಕೊಂಡರೆ, ಒಂದು ನಿರಯಕ್ಕೆ ಬರಲು ಅನುಕೂಲವಾಗುವದೆಂದು ನಮ್ಮ ಮತ.

ಕಾಂಗ್ರೆಸ್ಸಿನ ಮೇಲೆ ಆಗುತ್ತಿರುವ ಟೀಕೆಯನ್ನು ಮೊದಲು ನೋಡುವಾ.

ಕಾಂಗ್ರೆಸ್ಸು ರಾಜ್ಯನಡೆಸಲು ಅಸಮರ್ಥವಾಯಿತು. ಕಾಂಗ್ರೆಸ್ಸಿನ ಬಗೆಗೆ ಇಟ್ಟುಕೊಂಡಿದ್ದ ಸಾಮಾನ್ಯರ ಆಶೆಗಳು ನಿರಾಶೆಗಳಾದವು. ಅವರಿಗೆ ಸ್ವತಂತ್ರತೆಯ ಅರಿವು ಸಹ ಆಗಲಿಲ್ಲ. ಸ್ವತಂತ್ರತೆ, ಗುಲಾಮಗಿರಿಗಳಲ್ಲಿಯ ಭೇದ ಕಂಡುಬರಲಿಲ್ಲ. ಆಂಗ್ಲರ ಕಾಲಕ್ಕಿದ್ದ ಸಂಕಟಗಳು ಇನ್ನೂ ಇವೆ. ತುಟ್ಟಿಬೆಲೆ, ಕಳ್ಳಪೇಟೆ, ಲಂಚಗುಳಿತನ, ದೇಶದಲ್ಲಿ ತುಂಬಿಹೋಗಿವೆ; ಕಾಂಗ್ರೆಸ್ಸಿನ ನೈತಿಕ ಮಟ್ಟವು ಕೆಳಗಿಳಿದಿದೆ. ಧನಸಂಚಯದ ಸಂಧಿ ಇದೇ ಎಂದು ಅವರು ತಿಳಕೊಂಡಂತೆ ಕಾಣುವದು.

ಆಡಳಿತೆಯ ಸೂತ್ರವು ಸಡಿಲಾಗುತ್ತ ನಡೆದಿದೆ. ಮೊದಲು ಒಂದು ದಿನದಲ್ಲಿ ಆಗುತ್ತಿದ್ದ ಕಾರ್ಯವು. ಈಗ ನಾಲ್ಕೈದು ದಿವಸಗಳಲ್ಲಿ ಸಹ ಆಗಲೊಲ್ಲದು. ಮೇಲಧಿಕಾರಿಗಳ ಅಂಜಿಕೆಯು ಇಲ್ಲದಂತಾಗಿದೆ. ಕಾರ್ಯಕರ್ತರಿಗೆ ಪರಿವೆ ಇಲ್ಲದಾಗಿದೆ. ಮಂತ್ರಿಗಳ ಮುಂದೆ ಕಾಗದಗಳ ರಾಶಿ ಬಿದ್ದುಬಿಟ್ಟಿದೆ. ಪ್ರವಾಸ, ಸಭೆ, ಸಮ್ಮೇಲನ, ಅಲ್ಪಾಹಾರಗಳಲ್ಲಿ ಎಲ್ಲ ವೇಳೆ ಹೋಗಹತ್ತಿದೆ.ಇವುಗಳನ್ನು ಪರಿಶೀಲಿಸಲು ಅವಕಾಶವಿಲ್ಲ. ಇವರ ಆಪ್ತೇಷ್ಟರು ಸಿಕ್ಕ ಮಾರ್ಗದಿಂದ ಲಾಭಮಾಡಿಕೊಳ್ಳಲು ತೊಡಗಿದ್ದಾರೆ.

ಉದ್ದಿಮೆಗಳು ಮೂಲೆಗುಂಪಾಗಿವೆ. ಬಂಡವಳದಾರರು ತಮ್ಮ ಹಣವನ್ನು ಅವುಗಳಲ್ಲಿ ತೊಡಗಿಸಲು ಹಿಂಜರಿಯಹತ್ತಿರುವರು. ಅವರಿಗೆ ಎದೆಯಾಗದಾಗಿದೆ. ವ್ಯಾಪಾರ ಮುಂದಗತಿಯಲ್ಲಿದೆ. ಜನರ ಹತ್ತಿರ ಹಣವಿಲ್ಲ. ನಿರುದ್ಯೋಗವು ಬೆಳೆದಿದೆ. ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಿದಂದಿನಿಂದ ಅದರಲ್ಲಿಯ ಒಂದು ಭಾಗವು ಸರಕಾರವಾಯಿತು. ಇನ್ನೊಂದು ಭಾಗವು ಹೊರಗಿದ್ದು ತನಗೆ ಸಾಧ್ಯವಾದಷ್ಟು ಲಾಭ ಮಾಡಿಕೊಳ್ಳಹತ್ತಿದೆ. ಅದು ಸಾಮಾನ್ಯರಲ್ಲಿ ಕೂಡಿಕೊಂಡು ವಿಧಾಯಕ ಕಾರ್ಯಮಾಡುತ್ತ ಹೋಗಿದ್ದರೆ ಈ ಸ್ಥಿತಿಯು ಬರುತ್ತಿರಲಿಲ್ಲ. ಹೀಗಾಗಿ ಸರಕಾರವು ಕಾಂಗ್ರೆಸ್ಸಿನ ಅಳತೆಯಲ್ಲಿ ಇರದೆ, ಕಾಂಗ್ರೆಸ್ಸೇ ಸರಕಾರದ ಆಳವಿನಲ್ಲಿ ಸಿಕ್ಕುಬಿದ್ದಿದೆ. ಶಿಸ್ತು ಉಳಿಯಲಿಲ್ಲ. ಅಧ್ಯಕ್ಷರ ಹೇಳಿಕೆಗಳಿಗಿಂತ, ಮಂತ್ರಿಗಳ ಹೇಳಿಕೆಗಳೇ ಮಹತ್ವದವಾದವು. ಈಗ ಕಾಂಗ್ರೆಸ್ಸಿಗಿಂತ ಸರಕಾರವೇ ಮಹತ್ವದ್ದಾಗಿಬಿಟ್ಟಿದೆ. ಪ್ರಾಂತಗಳ ಸ್ಥಿತಿಯೂ ಹೀಗೆಯೇ. ಈ ಪ್ರಕಾರ ದಿನದಿನಕ್ಕೆ ಅದರ ವರ್ಚಸ್ಸು ಕಡಿಮೆಯಾಗಹತ್ತಿದೆ.

ಹೊಗೆಬಂಡಿಗಳಲ್ಲಿ, ಟ್ರಾಮಿನಲ್ಲಿ, ಬಸ್ಸಿನಲ್ಲಿ, ಪ್ರೆಸ್ಸಿನಲ್ಲಿ, ಹಾಟೇಲುಗಳಲ್ಲಿ, ನಿಲ್ದಾಣಗಳಲ್ಲಿ, ಹಾದಿಬೀದಿಗಳಲ್ಲಿ, ಮನೆಮನೆಗಳಲ್ಲಿ ಕಾಂಗ್ರೆಸ್ಸಿನ ಮೇಲೆ ಟೀಕೆಯಾಗಹತ್ತಿದೆ.

### ಸರಕಾರವನ್ನು ಸಹಜವಾಗಿ ಬದಲಿಸಬಹುದು

ಸಾಮಾನ್ಯರು ಸರಕಾರವನ್ನು ಸಹಜವಾಗಿ ಬದಲಿಸಬಹುದು. ಪ್ರತಿ ಒಬ್ಬನಿಗೆ ಮತಾಧಿಕಾರವಿದೆ. ಹೀಗಿದ್ದರೂ ಟೀಕಾಕಾರರು ದೇಶದಲ್ಲೆಲ್ಲ ನಡೆಯಿಸಿದ ಟೀಕೆಯ ಕೋಲಾಹಲದ ಅರ್ಥ ನನಗೆ ತಿಳಿಯದಾಗಿದೆ. ಸರಕಾರ ಬದಲಿಸುವದಕ್ಕೆ ಇಷ್ಟು ಕೋಲಾಹಲವೇಕೆ? ನಮ್ಮ ಮನಕ್ಕೊಪ್ಪುವ ಸರಕಾರವನ್ನು ನಾವು ತರಬಹುದು. ಆ ವೇಳೆ ದೂರಿಲ್ಲ, ಸ್ವಲ್ಪ ತಾಳಿರಿ; ಮುಂದಿನ ವರ್ಷ, ಬಹಳವಾದರೆ, ೧೯೫೧ ನೇ ಸಾಲಿನಲ್ಲಿ ಬಂದೇ ಬರುವದು. ಆಗ ಕಾಂಗ್ರೆಸ್ಸಿನ ಕಿವಿಹಿಡಿದು ಹೊರಗೆ ಹಾಕಬಹುದು. ಅದರ ಸ್ಥಳದಲ್ಲಿ ಸೋಶಾಲಿಷ್ಟರನ್ನು ತರಬಹುದು. ಕಮ್ಯುನಿಷ್ಟರನ್ನು ಸರಕಾರದ ಗದ್ದುಗೆಯ ಮೇಲೆ ಕೂಡ್ರಿಸಬಹುದು. ಮನಸ್ಸಿದ್ದರೆ, ಆರ್. ಎಸ್. ಎಸ್. ದವರ ತಲೆಯ ಮೇಲೆ ಕಿರೀಟವನ್ನಿಡಬಹುದು. ಜಯಶಾಲಿಗಳನ್ನಾಗಿ ಮಾಡಿದ ಶರತ್‌ಬೋಸರ ಕೈಯಲ್ಲಿ ರಾಜದಂಡ ಕೊಡಬಹುದು. ಇವೆಲ್ಲವುಗಳು ನಿಮ್ಮನ್ನೇ ಅವಲಂಬಿಸಿವೆ. ಇಷ್ಟು ತಳಮಳವೇಕೆ? ನೀವು ಕಾಂಗ್ರೆಸ್ಸಿಗೆ ನಿರಂತರ ಪಟ್ಟ ಬರಕೊಟ್ಟಿರುವಿರಾ?

ಕಾಂಗ್ರೆಸ್ಸಿನ ಟೀಕೆಮಾಡುವದರಲ್ಲಿ, ಅದಕ್ಕೆ ಹೆಸರಿಡುವದರಲ್ಲಿ, ಎಲ್ಲ ಪಕ್ಷಪಂಗಡಗಳು ಒಮ್ಮತವಾಗಿರುವವೆಂದುಒಡೆದುಕಾಣಿಸುತ್ತದೆ. ಕಾಂಗ್ರೆಸ್ಸನ್ನು ಸರಿಸಿದ ನಂತರ ಯಾವ ಸರಕಾರ ಬರುವದು, ಈ ಪ್ರಶ್ನೆಗೆ ಉತ್ತರವೇನು?ನಮ್ಮ ಪಕ್ಷ, ಆ ಪಕ್ಷ, ಈ ಪಕ್ಷ ಎಂದು ಹೇಳಲಾಗುತ್ತಿದೆ. ಆಗ ಮಾತ್ರ ಇವುಗಳಲ್ಲಿ ಎಷ್ಟು ತಲೆಗಳೋ ಅಷ್ಟೇ ಪಂಗಡಗಳಾಗುವವು. ಕಾಂಗ್ರೆಸ್ಸಿನ ಮೇಲೆ ಆಗುತ್ತಿರುವ ಟೀಕೆಗಳು ನಿಜವಿರುವವೆಂದು ನಂಬುವಾ. ಕಾಂಗ್ರೆಸ್ಸಿನ ತರುವಾಯ ಅದರ ಸ್ಥಳದಲ್ಲಿ ದುರ್ಗುಣ

ಗಳಿಲ್ಲದ ಯಾವ ಸಂಸ್ಥೆಯನ್ನು ತರಬೇಕೆಂದು ಟೀಕಾಕಾರರು ಹೇಳಿಬಿಡಬೇಕು. ! ಬೇರೆ ಮನೆಯ ಸಿದ್ಧತೆ ಮಾಡದೆ, ಇದ್ದ ಮನೆಯನ್ನು ಕೆಡಹುವ ಮೂರ್ಖತನಕ್ಕೆ ಹೋಗಬಾರದು. ಸರಕಾರದ ಆಸನವು ಎಂದೂ ಖಾಲಿ ಇರಲಾರದು. ಅದರ ಮೇಲೆ ಯಾರಾದರೂ ಬರಲೇಬೇಕು. "ಅರಸನು ಸಾಯುವದಿಲ್ಲ" ಎಂಬ ನಾಣ್ಣುಡಿಯಿದೆ. ಇದರ ಯೋಚನೆಯನ್ನು ನಾವು ಮೊದಲೇ ಮಾಡಿ ಇಡಬೇಕಾಗಿದೆ.

### ಅನೀತಿಗಿಳಿದ ಕಾರಣವೇನು

ಕಾಂಗ್ರೆಸ್ಸಿನಲ್ಲಿ ಸೇರಿದ ಕೊಳೆಯ ಬಗೆಗೆ ಅನೇಕ ಬರೆಹಗಳು ಬರೆಯಲ್ಪಟ್ಟಿವೆ. ಪ್ರಮುಖ ವೃತ್ತಪತ್ರಗಳು ಅಗ್ರಲೇಖ ಬರೆದವು. ಆದರೆ ಇದು ಅನೀತಿಗಿಳಿಯಲುಕಾರಣವೇನು ?ಎಂಬದನ್ನು ಬಹುಶಃ ಯಾರೂ ಬರೆಯಲಿಲ್ಲ. ಇದರ ಮೂಲ ಕಾರಣವು ಸಹಜವಾಗಿ ತಿಳಿಯುವಂತಿದೆ. ಅದನ್ನು ಹೇಳುವ ಸಂದರ್ಭದಲ್ಲಿ ಎಲ್ಲರ ಮನಸ್ಸು ನೋಯಿಸುವ ಉದ್ಧಟತನ ಮಾತ್ರ ನಮ್ಮ ಪಾಲಿಗೆ ಬಂದಿದೆ.

ಮಂತ್ರಿಗಳೂ ಮುಂದಾಳುಗಳೂ ಕಾರ್ಯಕರ್ತರೂ ಜಪಾನ, ಜರ್ಮನಿ, ಅಮೇರಿಕೆಗಳಿಂದ ಬಂದವರಲ್ಲ–ಇಲ್ಲಿಯವರೇ ಇದ್ದಾರೆ. ನಮ್ಮ ಸಮಾಜದಲ್ಲಿಯೇ ಬೆಳೆದು ದೊಡ್ಡವರಾದವರು. ನಮ್ಮ ಮತ್ತು ಸಮಾಜದಲ್ಲಿಯ ಅವಗುಣಗಳು ಅವರ ಮೇಲೆ ತಮ್ಮ ಪ್ರಭಾವ ಬೀರಿ ಅನೀತಿಗಿಳಿಸಿದವೆಂದು ನಮ್ಮ ಮನವರಿಕೆ. ಸ್ವಲ್ಪ ವಿಚಾರಮಾಡಿದರೆ ನಿಮಗೂ ಹೊಳೆಯದಿರದು.

ಕಾಂಗ್ರೆಸ್ಸಿಗರಷ್ಟೇ ಕೆಟ್ಟವರು, ಕಾಂಗ್ರೆಸ್ಸಿನ ಹೊರಗಿನವರು ಸಜ್ಜನರು, ಹೀಗಲ್ಲ. ಸಮಾಜಕ್ಕೆ ಹತ್ತಿದ ಅಂಟುರೋಗವೇ ಇವರಿಗೂ ಅಂಟಿಕೊಂಡಿದೆ.

ನಾವು ಮುಂಜಾವಿನಿಂದ ಸಂಜೆಯವರೆಗೆ ಎಷ್ಟು ಜನರನ್ನು ಮೋಸಗೊಳಿಸಲು ಪ್ರಯತ್ನಿಸುವೆವೆಂದು ನಾವೇ ಶಾಂತಚಿತ್ತದಿಂದ ವಿಚಾರಿಸಬೇಕು. ವ್ಯಾಪಾರಸ್ಥರು ಕಳ್ಳಪೇಟೆ, ಲಾಭಬಡಕತನಗಳಲ್ಲಿ ಸದಾ ಲೀನರಾಗಿರುವರು. ಉತ್ಪನ್ನ ಕರದಿಂದ ಉಳಿಯಲು ಸುಳ್ಳು ಜಮಾಖರ್ಚನ್ನಿಟ್ಟು ಸರಕಾರವನ್ನು ಮೋಸಗೊಳಿಸಲು ಹೇಸುವದಿಲ್ಲ. ಒಂದು ಬಲ್ಲಿಯ ಜೀನಸಿಗೆ, ಎರಡು ಬಿಲ್ಲಿ ಬೆಲೆ ಹೇಳಿ, ಕಡೆಗೆ ಗಿರಾಕಿಯಿಂದ ಒಂದೂವರೆ ದುಡ್ಡು ಸೆಳೆಯದೆ ಬಿಡುವದಿಲ್ಲ. ತೂಕ, ಮಾಪುಗಳಲ್ಲಿ ಕೈಚಳಕ ತೋರಿಸುವದು ನಿತ್ಯದ ವ್ಯವಹಾರವಾಗಿದೆ. ಹಿಂದುಸ್ಥಾನದಲ್ಲಿ ಮಿಶ್ರಣವಿಲ್ಲದೆ ಯಾವ ಪದಾರ್ಥವೂ ತನ್ನ ನಿಜರೂಪದಲ್ಲಿ ಸಿಗುವಂತಿಲ್ಲೆಂದು ಪ್ರಸಿದ್ಧಿಯಿದೆ. ಅದು ತನ್ನ ಈ ವೃತ್ತಿಯನ್ನು ಪರದೇಶಗಳಿಗೂ ಸಾಗಿಸಲು ಆರಂಭಿಸಿರುತ್ತದೆ. ಹಾಲಿನಲ್ಲಿ ನೀರು ಬೆರೆಸುವ ದೇಶವೆಂದರೆ ನಮ್ಮದೇ ಆಗಿರುತ್ತದೆ.

ಹಿಂದದ ನೌಕರರಲ್ಲಿ ಪ್ರಾಮಾಣಿಕರು ಇಲ್ಲವೆಂದು ಹೇಳಬೇಕಾಗಿದೆ. ನೂರರಲ್ಲಿ ನಾಲ್ಕಾರು ಇರಬಹುದು. ಸರಕಾರಿ ನೌಕರರಲ್ಲಿ ಅಪ್ರಾಮಾಣಿಕತನವು ಒಂದು ಕಲೆಯಾಗಿಬಿಟ್ಟಿದೆ. ಲಂಚವನ್ನು ಕೊಡ ತಗೊಳ್ಳುವದು ಸಮಾಜದಲ್ಲಿ ಪಾಪವಲ್ಲ. ವೇತನದ ಹೊರ್ತಾಗಿ ಮೇಲೇನು? ಎಂದು ಗೆಳೆಯರು ಸಹಜವಾಗಿ ಕೇಳುತ್ತಿರುವದುಂಟು. ನ್ಯಾಯಾಲಯಗಳಲ್ಲಿ ಸುಳ್ಳುಸಾಕ್ಷಿಯನ್ನು ಅಂಜಿಕೆ ಇಲ್ಲದೆ ಹೇಳ-ಲಾಗುತ್ತಿದೆ. ನಮ್ಮಲ್ಲಿಯ ವಕೀಲರಿಂದ ನಿಜವಾದ ಅಭಿಪ್ರಾಯವು ಸಿಗುವದು ಶಕ್ಯವಿಲ್ಲ. ಧನವಂತನು ಸಿಕ್ಕರೆ, ರೋಗವನ್ನು ಉದ್ದಾಗಿ ಮಾಡುವದರಲ್ಲಿ ಡಾಕ್ಟರರು ಜಾಣರಿರುವರೆಂಬ ಕೂಗು ಕೇಳಿಬರಹತ್ತಿದೆ. ವಚನಪಾಲಿಸುವ ವೃತ್ತಿ ಹಾಳಾಗಿಹೋಗಿದೆ. ಕಲಿತವರಿರಲಿ, ಧನವಂತರಿರಲಿ, ಸ್ವಲ್ಪ ಜನರು ಮಾತ್ರ ವಚನಪಾಲಿಸುವವರಾಗಿದ್ದಾರೆ. ಬಹಳ ಜನರಿಗೆ ವೇಳೆಯ ಮಹತ್ವ ಗೊತ್ತಿರುವದಿಲ್ಲ. ಒಯ್ದ ಹಣವನ್ನು ತಿರುಗಿ ಕೊಡುವವರೂ ಕಾಗದ, ಕತಬಿಗಳಿಲ್ಲದೆ, ಸಾಲ ಒಯ್ದು ಸದ್ದಿಲ್ಲದೆ ಮುಟ್ಟಿಸುವವರೂ ಸಾವಿರದಲ್ಲಿ ಒಬ್ಬಿಬ್ಬರಿರಬಹುದು. ಇದು ಮೇಲ್ತರಗತಿಯವರ ಮಾತಾಯಿತು.

ಕೆಳತರಗತಿಯವರಲ್ಲಿ ಕೂಲಿಕಾರರು. ಇವರಿಗೆ, ಭಾಯಿ ಸೋಶಾಲಿಸ್ಟ, ಕಮ್ಯುನಿಸ್ಟರು ಮಜದೂರರೆಂದು ಕರೆಯುವದುಂಟು. ಇವರ ಸಲುವಾಗಿ ಅನೇಕ ಕತೆ, ಕವನಗಳು ರಚಿತವಾಗಿವೆ. ನಮ್ಮ ದೇಶದ ಕೂಲಿಕಾರರು ಕಾರಖಾನೆಗಳಿಂದ ಹೊರಬೀಳುವಾಗ ಅವರ ಅಂಗಿ, ಅರಿವೆಗಳನ್ನು ತಪಾಸಿಸುವದು ಯಾಕೆ? ಬಂಗಾರದ ಗಣಿಗಳಲ್ಲಿಯ ಕೂಲಿಕಾರರಿಗೆ ಬಟ್ಟೆಗಳ ತಪಾಸಣೆಯು ತರುವಾಯ ಒಂದು ತಗ್ಗನ್ನು ಜಿಗಿಯಬೇಕಾಗುವದಂತೆ, ಯಾಕೆ? ಇವರಿಗೆ ಈ ತರದ ಲಾಭಬಡಕತನವು ಸದ್ಯದ ಕೋಟ್ಯಧೀಶರ ಹೀನ ವೃತ್ತಿಯಿಂದಲೇ ಬಂದಿದೆ ಎಂದು ನಮಗೆ ಗೊತ್ತುಂಟು. ಕಾಂಗ್ರೆಸ್ಸಿನಲ್ಲಿಯ ಅನೇಕರು ಬಂಡವಳದಾರ ವಾತಾವರಣದಲ್ಲಿಯೇ ಬೆಳೆದವರಿದ್ದಾರೆ. ಸಾಮಾನ್ಯ ಕೂಲಿಕಾರ, ಟಾಂಗಾವಾಲಾ, ಇವರು ಕೂಡ, ಪ್ರಸಂಗಕ್ಕನುಸರಿಸಿ ಒಂದಕ್ಕೆ ಎರಡು ದೊರಕಿಸದೆ ಬಿಡುತ್ತಿರುವದಿಲ್ಲ.

ಜನತೆಯ ಆಚಾರವಿಚಾರಗಳನ್ನು ಸರಿಪಡಿಸಿ, ದೇಶಕ್ಕೆ ಮತ್ತು ಜನಾಂಗಕ್ಕೆ ಮಾರ್ಗದರ್ಶನ ಮಾಡುವದು ಪತ್ರಕಾರರ ಕರ್ತವ್ಯವು. ಎಷ್ಟು ಪತ್ರಕಾರರು ತಮ್ಮ ಕರ್ತವ್ಯ ಮಾಡುತ್ತಲಿದ್ದಾರೆ? ತಮ್ಮ ಪ್ರೇಮಪೂರಿತ ವಾಣಿಯಿಂದ ಸಮಾಜದ ತಪ್ಪು ತೋರಿಸಿಕೊಟ್ಟು ತಿದ್ದಿ, ಜಾತೀಯತೆಯನ್ನು ಹೋಗಲಾಡಿಸಿ, ಹಿಂದುಳಿದ ಹಿಂದುಸ್ಥಾನವನ್ನು ಮುಂದೆ ತರಲು ಅದೆಷ್ಟು ವೃತ್ತಪತ್ರಗಳು ದುಡಿಯಹತ್ತಿರುವವು? ತಾನು ಹೊರಡಿಸುತ್ತಿರುವ ಪ್ರತಿಗಳ ಸಂಖ್ಯೆಯನ್ನು ಉಬ್ಬಿಸಿ, ಪ್ರಕಟನೆ ಸಂಪಾದಿಸುವದೂ ಇದು ರಾಮಬಾಣ, ಇದು ಸುದರ್ಶನ ಚಕ್ರ, ಎಂದು ಔಷಧದ ಜಾಹೀರಾತುಗಳನ್ನು ದಪ್ಪಕ್ಷರಗಳಲ್ಲಿ ಮುದ್ರಿಸುವದೂ ಸರಕಾರದಿಂದ ಕಾಗದದ ಹೆಚ್ಚು ಕೋಟಾ ಸಂಪಾದಿಸಿ ಕಳ್ಳಪೇಟೆ ಮಾಡುವದೂ ನಡೆದಿಲ್ಲವೇ?

ಈಗ ಪಗಡಿ ಇಲ್ಲದೆ, ಪಟ್ಟಣಗಳಲ್ಲಿ ಬಾಡಿಗೆಯ ಮನೆಯು ಸಿಗುವಂತಿಲ್ಲ. ನಮಾಜ ಮತ್ತು ಪೂಜಾಪಾಠಗಳು ಜಗತ್ತಿನ ಎಲ್ಲ ದೇಶಗಳಿಗಿಂತ ನಮ್ಮಲ್ಲಿಯೇ ಹೆಚ್ಚಾಗಿ ನಡೆಯುವವು. ಇಂಥ ಆಧ್ಯಾತ್ಮಿಕ ದೇಶದಲ್ಲಿ ಮತ್ತೆ ಏನೇನು ನಡೆಯುತ್ತಿದೆ ಎಂದು ಊಹಿಸ ಬಹುದೇ ಹೊರ್ತು ಬರೆಯಲು ಆಗುವಂತಿಲ್ಲ. ಕಾಂಗ್ರೆಸ್ಸು ಹೀಗೆ ಆಚರಿಸಲು ಅಪ್ಪಣೆ ಮಾಡಿರುವದೇ?

ಹಿಂದುಸ್ತಾನದವರು ಮೋಸಗಾರರು, ಅವರಲ್ಲಿ ನೀತಿಯಿಲ್ಲ ಎಂದು ಮಾತ್ರ ದಯಮಾಡಿ ಅರ್ಥಮಾಡಿಕೊಳ್ಳಬಾರದು. ನಮ್ಮಲ್ಲಿ ಸಜ್ಜನರಿರುವರು, ನೀತಿವಂತರಿರುವರು. ಆದರೆ ಸಾಮಾನ್ಯವಾಗಿ ದೇಶದ ಪರಿಸ್ಥಿತಿಯನ್ನು ವಾಚಕರ ಮುಂದೆ ಇಟ್ಟಿದ್ದೇವೆ. ಇವು ಸುಳ್ಳಾದರೆ ಎಲ್ಲಕ್ಕೂ ಮೊದಲು ನಮಗೆ ಸಂತೋಷವಾಗುವದು. ನಮ್ಮ ಹಳ್ಳಿಯವರು ಪಟ್ಟಣದವರಿಗಿಂತ ಹೆಚ್ಚು ಒಳ್ಳೆಯವರಾಗಿದ್ದಾರೆ. ಯಾಕಂದರೆ, ಪಟ್ಟಣದ ಹವೆಯು ಹಳ್ಳಿಯವರಿಗೆ ಇನ್ನೂ ಪೂರ್ಣ ಮುಟ್ಟಿಲ್ಲ.

ಸರಕಾರದಲ್ಲಿ ಅವನತಿ ಬಂದಿದೆ. ಅದನ್ನು ನಿರ್ಮಾಣ ಮಾಡಿದವರು ನಾವೇ. ಹೆರವರ ಮಕ್ಕಳಿಗಿಂತ ತನ್ನ ಮಗನಿಗೆ ಮೊದಲು ನೌಕರಿ ಸಿಗಬೇಕೆಂದು ಬಯಸುವದೇಕೆ? ಇದರ ಸಲುವಾಗಿ ಪ್ರಶಸ್ತಿ ಪತ್ರ ದೊರಕಿಸಲು ಮನೆಮನೆಗೆ ಎಡತಾಕುವದೇಕೆ? ಪರಮಿಟ್ ಮತ್ತು ಗುತ್ತಿಗೆಗಳು ನಮಗೆ ದೊರೆಯಲೆಂದು ಪ್ರಯತ್ನವೇಕೆ? ತನ್ನ ಕೆಲಸವು ಬೇಗ ಆಗಬೇಕೆಂದು ಕಾರಕೂನರಿಗೆ ಲಂಚ ಕೊಡುವದೇಕೆ? ತನ್ನ ಕಾರ್ಯ ಸಾಧಿಸಲು ಮಂತ್ರಿಗಳ ಬಾಗಿಲು ಬಡಿಯುವದೇಕೆ? ರೇಲಿನಲ್ಲಿ ತನಗೆ ಪ್ರಶಸ್ತ ಜಾಗೆ ಸಿಗಬೇಕೆಂಬದು, ಹೆಚ್ಚು ಸಾಮಾನು ಒಯ್ಯುವದು, ಸಿಕ್ಕರೆ ಟಿ. ಟಿ. ಐ. ಜನರಿಗೆ ಲಂಚ ಕೊಟ್ಟು ರಾಷ್ಟ್ರದ ರೇಲಿಗೆ ಮೋಸಮಾಡುವದು ಏಕೆ? ನಾವೆಲ್ಲರೂ ನಮ್ಮ ಸರತಿ ಬರುವದನ್ನು ಯಾಕೆ ಕಾಯಬಾರದು? ಕಲಿತವರ, ಧನವಂತರ ವೃತ್ತಿ ಇದಾದರೆ ಅಶಿಕ್ಷಿತ, ಬಡವರಿಗೇನು ಅನ್ನುವದು?

### ನಮ್ಮಲ್ಲಿ ಆದ ಬದಲಾವಣೆ ಏನು?

ಸ್ವತಂತ್ರತೆಯ ತರುವಾಯ ದೇಶದ ಸ್ಥಿತಿಯು ಬದಲಾಗಲಿಲ್ಲೆಂದು ಹೇಳುವದುಂಟು. ಆದರೆ ಅದು ಸಿಕ್ಕನಂತರ ನಾವೆಷ್ಟು ಬದಲಾಗಿದ್ದೇವೆ? ನಮ್ಮ ವೈಯಕ್ತಿಕ ಬದಲಾವಣೆಯ ಬೇರೀಜು ರಾಷ್ಟ್ರದ ಬದಲಾವಣೆಯಲ್ಲವೇ? ಸ್ವತಂತ್ರತೆಯ ನಂತರ ಕಾಂಗ್ರೆಸ್ಸಿನ ನೈತಿಕ ಮಟ್ಟವು ಅವನತಿಗಿಳಿದದ್ದು ನಿಜ. ಈ ಕಾಲದಲ್ಲಿ ನಮ್ಮ ನೈತಿಕಮಟ್ಟವು ಎಷ್ಟು ಎತ್ತರರಾಗಿದೆ? ಕಾಂಗ್ರೆಸ್ಸಿಗರು ನಮ್ಮ ಪ್ರತಿನಿಧಿಗಳಲ್ಲವೇ? ನಮ್ಮಲ್ಲಿ ಸ್ಥಿತ್ಯಂತರವಾಗಿದ್ದರೆ, ಅವರಲ್ಲಿಯೂ ಸ್ಥಿತ್ಯಂತರವಾಗುತ್ತಿತ್ತು.

ಪ್ರಜಾರಾಜ್ಯದಲ್ಲಿ ರಾಷ್ಟ್ರದ ಹೊಣೆಯು ಎಲ್ಲರ ಮೇಲೆ ಸರಿಯಾಗಿ ಇರುವದು. ಇದರಲ್ಲಿ ಕಾಂಗ್ರೆಸ್ಸು, ಸಾಮಾನ್ಯರು, ಬೇರೆ ಅಲ್ಲ. ಎಲ್ಲರೂ ಹೊಣೆಗಾರರು. ತನ್ನಿಂದ ಕಾಂಗ್ರೆಸ್ಸನ್ನು ಬದಿಗಿಟ್ಟು ವಿಚಾರ ಮಾಡುವ ವಿಚಿತ್ರ ಪದ್ಧತಿ ದೇಶದಲ್ಲಿ ಹಬ್ಬಿದೆ. ಸರಕಾರ ಬೇರೆ, ಪ್ರಜೆಗಳು ಬೇರೆ, ಈ ತರದ ರಾಜ್ಯವಲ್ಲ, ಪ್ರಜಾರಾಜ್ಯವಿದೆ. ನಿಮ್ಮ ಪ್ರತಿನಿಧಿಗಳ ಸರಕಾರವಿದೆ. ಸರಕಾರ ಅಪ್ರಾಮಾಣಿಕನಾಗಿದ್ದರೆ ನೀವೂ ಅಪ್ರಾಮಾಣಿಕರು. ಟ್ರೂಮನ್ ಅಪ್ರಾಮಾಣಿಕನೆಂದು ಅಮೇರಿಕನ್ನರು ಹೇಳಿದರೆ, ಅಮೇರಿಕೆಯೇ ಅಪ್ರಾಮಾಣಿಕವಾಗಿದೆ ಯೆಂದು ಹೇಳಬಹುದು.

ದೇಶಕ್ಕೆ ಬಂದ ಸಂಕಟಗಳನ್ನು ನಾವೆಲ್ಲರು ಸಹಿಸಬೇಕು. ಎಲ್ಲರೂ ಕೂಡಿಕೊಂಡು ಕಠಿನ ಪ್ರಶ್ನೆಗಳನ್ನು ಬಿಡಿಸಬೇಕು. ಯಾಕಂದರೆ ಅವು ನಮ್ಮೆಲ್ಲರಿಗೆ ಸಂಯುಕ್ತವಾದವುಗಳು. ಬಂದ ಅಡೆತಡೆಗಳನ್ನು ದೂರಮಾಡಲು, ನಾವೆಲ್ಲರೂ ಅವರಗೂಡ ಸಹಕರಿಸಬೇಕು. ಬರೇ ಟೀಕೆ ಮಾಡುತ್ತ ಕೂಡ್ರಬಾರದು. ನಮ್ಮ ಸಹಕಾರದ ಹೊರ್ತು ಅವರಿಂದ ಯಾವ ಕಾರ್ಯವೂ ಆಗುವಂತಿಲ್ಲ.

ತಾವು ಇಚ್ಛಿಸಿದ ಸರಕಾರ ಸಿಗುವದು, ಸಾಮಾನ್ಯರು ಗಾಬರಿಯಾಗುವ ಕಾರಣವಿಲ್ಲ, ಎಂದು ರಾಷ್ಟ್ರಪತಿಗಳು ಹೇಳಿದ್ದಾರೆ. ನಾವು ಇದೇ ಸಂಸ್ಥೆಗೆ ಮತ ಕೊಡಿರೆಂದು ಹೇಳುವದಿಲ್ಲ. ಜನರು ತಮ್ಮ ಇಚ್ಛೆ ಇದ್ದವರಿಗೆ ಕೊಡಬಹುದು. ನಾವು ಕಾಂಗ್ರೆಸ್ಸಿನ ಕೊಳೆ ತೆಗೆಯಲು ಪ್ರಯತ್ನಿಸುವೆವು. ಅದು ನಮ್ಮಿಂದಾಗದಿದ್ದರೆ ಅದನ್ನು ವಿಸರ್ಜಿಸಿಬಿಡಬಹುದು, ಎಂದು ಮುಖ್ಯ ಮಂತ್ರಿಗಳೂ, ರಫಿ ಅಹಮ್ಮದ ಕಿಡ್ವಾಯಿಯವರೂ ಹೇಳಿದ್ದಾರೆ.

### ಯಾವ ಸಂಸ್ಥೆಯು ಮುಂದೆ ಬರಬಹುದು

ನಮಗೆ ಕಾಂಗ್ರೆಸ್ಸು ಬೇಡಾಗಿದ್ದರೆ ಹಾಗೆಯೇ ಆಗಲಿ. ಆದರೆ ಕಾಂಗ್ರೆಸ್ಸಿನ ಸ್ಥಳದಲ್ಲಿ ಯಾವ ಸಂಸ್ಥೆಯನ್ನು ತರಬೇಕೆನ್ನುವಿರಿ? ಕಲಕತ್ತೆಯ ಚುನಾವಣೆಯಲ್ಲಿ ನಾವು ಬೋಸರನ್ನು ಆರಿಸಿ ಅಸೆಂಬ್ಲಿಗೆ ಕಳಿಸಿದೆವು. ಅವರು ಅಲ್ಲಿ ಹೋಗಿ ಏನು ಮಾಡುವರು? ಉತ್ತರ ಕೊಡುವಿರಾ? ಬೋಸರು ಜವಾಹರಲಾಲರಿಗಿಂತ ಉತ್ತಮರೆಂದು ಪ್ರಾಮಾಣಿಕತನದಿಂದ ಹೇಳುವಿರಾ? ಇವರು ಅವರಿಗಿಂತ ಮೇಲಾಗ

ಬಹುದೇ ? ರಿಪಬ್ಲಿಕನ್ ಸೋಶಾಲಿಷ್ಟ ಪಕ್ಷವು ಅವರ ಸ್ವಂತದ ಪಕ್ಷವಾಗಿದೆ. ಅದರಲ್ಲಿ ಇವರ ಹೊರ್ತು ಬೇರೆ ಯೋಗ್ಯರು ಕಾಣುವದಿಲ್ಲ. ಇಂಥವರ ಕೈಯಲ್ಲಿ ಪಶ್ಚಿಮ ಬಂಗಾಲದ ಸರಕಾರ ಕೊಟ್ಟರೆ ಕಾಂಗ್ರೆಸ್ಸಿಗಿಂತ ಹೆಚ್ಚು ಯಶಸ್ವಿಯಾಗಿ ನಡೆಸಬಹುದೇ ?

ಸಾಂಸ್ಥೆಯ ಕಾರ್ಯವು ವ್ಯಕ್ತಿಗಳನ್ನು ಅವಲಂಬಿಸಿರುವದಿಲ್ಲ. ವ್ಯಕ್ತಿಗಳು ಬರುವವು, ಹೋಗುವವು. ಇದೇ ಕಾಂಗ್ರೆಸ್ಸು ಮೋತಿಲಾಲ, ದಾಸ, ಲಜಪತರಾಯ, ಅನಸರಿ, ಅಜಮುಲ್‌ಖಾನ ಮತ್ತು ಕೊನೆಗೆ ಮಹಾತ್ಮರ ತರುವಾಯ ಅಳಿಯದೆ ಉಳಿದಿರುವದಿಲ್ಲವೇ ?

ಕಲಕತ್ತೆಯ ಆಯ್ಕೆಯಲ್ಲಿ ಕಾಂಗ್ರೆಸ್ಸಿನ ವಿರುದ್ಧ, ಸೊಶಾಲಿಷ್ಟ, ಕಮ್ಯುನಿಷ್ಟ, ಆರ್. ಎಸ್.ಎಸ್., ಶೀಖ, ಬಂಗಾಲಿ ಹಿಂದು, ಹಿಂದು ಮಹಾಸಭೆ ಈ ಎಲ್ಲರೂ ಕೂಡಿ ಪ್ರಯತ್ನಿಸಿದರೆಂಬ ಮಾತು ಅತಿ ಮಹತ್ವದ್ದು. ಈ ಸಂಸ್ಥೆಗಳು ಪರಸ್ಪರ ವಿರುದ್ಧ ಇರುವವು. ಅವರ ಧ್ಯೇಯ, ಉದ್ದೇಶಗಳು ಬೇರೆಬೇರೆಯಾಗಿವೆ. ಇವು ಒಂದೆಡೆಯಲ್ಲಿ ಕೂಡಲು ಸಹ ಒಪ್ಪುವಂತಿಲ್ಲ. ಕಾಂಗ್ರೆಸ್ಸಿನ ವಿರೋಧವೊಂದೇ ಇವರೆಲ್ಲರಲ್ಲಿ ಸಂಯುಕ್ತಸಂಗತಿ.... ಇವರೆಲ್ಲರು ಕಾಂಗ್ರೆಸ್ಸನ್ನು ಸೋಲಿಸಿ ಬೋಸರ ಹಿರಿತನದಲ್ಲಿ ಪ. ಬಂಗಾಲದ ಎಲ್ಲ ಸ್ಥಳಗಳನ್ನು ಕೈವಶ ಮಾಡಿಕೊಂಡರೆಂದು ತಿಳಿಯುವಾ ! ಈ ಎಲ್ಲ ಪಕ್ಷಗಳು ಕೂಡಿ ಮಂತ್ರಿಮಂಡಳ ರಚಿಸಬಹುದೇ ? ಇದರಲ್ಲಿ ಕಮ್ಯುನಿಷ್ಟ ೧೦, ಸೊಶಾಲಿಷ್ಟ ೨೦, ಆರ್. ಎಸ್.ಎಸ್. ೫೦ ಶೀಖ ೫, ಹಿಂದುಮಹಾಸಭೆ ೨೫, ಬೋಸಪಾರ್ಟಿ ೬೦ ಹೀಗೆ ಸ್ಥಳಗಳು ಹಂಚಲ್ಪಟ್ಟರೆ, ಆ ಅಸೆಂಬ್ಲಿಯು ಅಸೆಂಬ್ಲಿಯಲ್ಲ, ಕಲಕತ್ತೆಯ ಮ್ಯುಝಿಯಮ್ ಆಗುವದು. ಇಂಥ ಸಂದರ್ಭದಲ್ಲಿ ಬೋಸರ ಸರಕಾರವು ಕಾಂಗ್ರೆಸ್ಸಿಗಿಂತ ಪ್ರಭಾವಶಾಲಿ ಸರಕಾರವಾಗಬಹುದೇ ? ಇವರಲ್ಲಿ ಅಪ್ರಾಮಾಣಿಕತನ, ಲಂಚಗುಳಿತನ ಬರಲಿಕ್ಕಿಲ್ಲವೇ ? ಇಂಥ ಸರಕಾರವು ಪ. ಬಂಗಾಲದಲ್ಲಿ ಒಂದು ದಿವಸ ಸಹ ನಡೆಯಲಿಕ್ಕಿಲ್ಲ. ಇದನ್ನು ಎಲ್ಲರೂ ಬಲ್ಲರು. ಕಾಂಗ್ರೆಸ್ಸಿನ ವೈರಭಾವದಿಂದ ಪ್ರೇರಿತರಾಗಿ, ದೇಶವು ಹಾಳಾದರೂ ಲೆಕ್ಕಿಸದೆ, ಹಟದಿಂದ ಕಣ್ಣು ಮುಚ್ಚಿಕೊಂಡು ಸಾಗಹತ್ತಿದ್ದಾರೆ.

ಸರದಾರರಷ್ಟೇ ಬೋಸರು ತಮಗೆ ವಿರುದ್ಧರಿರುವರೆಂದು ಕಮ್ಯುನಿಷ್ಟರಿಗೆ ಗೊತ್ತಿದೆ, ಬೋಸರಿಗಿಂತ ನೆಹರುರವರು ತಮಗೆ ಸಮೀಪದವರೆಂದು ಸೋಶಾಲಿಷ್ಟರ ನಂಬಿಕೆ. ಬೋಸರು ನೆಹರುರವರಿಗಿಂತ, ಹಿಂದುರಾಜ್ಯ ಸ್ಥಾಪಿಸಲು ಸಹಾಯಕವಾಗಬಹುದೆಂದು, ಆರ್. ಎಸ್.ಎಸ್., ಹಿಂದುಮಹಾಸಭೆಯವರು ತಿಳಿದಿರುವರು. ಕಾಂಗ್ರೆಸ್ಸಿನ ನಂತರವೇ ತಮ್ಮ ಬೇಳೆ ಬೇಯುವದೆಂದು ಇವರೆಲ್ಲರ ಮನವರಿಕೆ.

ಈ ಎಲ್ಲ ಸಂಸ್ಥೆಗಳ ಹತ್ತರ, ಜನಸಾಮಾನ್ಯರಿಗೆ ತೋರಿಸಲು ಬಂಡವಲು ಎಲ್ಲಿದೆ ? ಕಾಂಗ್ರೆಸ್ಸಿನ ಬಗ್ಗೆ ದೇಶದಲ್ಲಿ ಹಬ್ಬುತ್ತಿರುವ ತಿರಸ್ಕಾರವೇ ಇವರ ಮುಖ್ಯ ಬಂಡವಲು. ಇದೇ ಇವರ ಆಧಾರ. ಜನಸಾಮಾನ್ಯರು ಕಾಂಗ್ರೆಸ್ಸನ್ನು ತಿರಸ್ಕರಿಸುವ ಮಬ್ಬಿನಲ್ಲಿ ಅಂಧರಾಗಿದ್ದಾರೆ. ನಿಮ್ಮ ಹತ್ತರ ಏನಿದೆ? ನೀವು ನಮಗೆ ಏನು ಕೊಡುವವರು? ಎಂದು ಕೇಳುವ ಅರಿವು ಅವರಲ್ಲಿ ಉಳಿದಿರುವದಿಲ್ಲವೆಂದು ಮನವರಿಕೆಯಾಗಿ ಹೋಗಿದೆ.

ಮುಂದಿನ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಯಾರು ಹೆಚ್ಚು ಹೆಸರಿಡುವರೋ ಅವರಿಗೇ ಮತ. ಇದು ಕಲಕತ್ತೆಯ ಚುನಾವಣೆಯಿಂದ ಸಿದ್ಧವಾಗಿದೆ. ಮುಸ್ಲಿಂ ಲೀಗಿನ ಕಾಲದಲ್ಲಿ ಹೀಗೆಯೇ ಮುಸ್ಲಿಮರು ಅಂಥರಾಗಿ ಯಾವನು ಹಿಂದುಗಳಿಗೆ ಹೆಚ್ಚು ಹೆಸರಿಡುವನೋ ಅವನು ಎಂಥವನೇ ಇರಲಿ ನೋಡದೆ ಮತ ಕೊಟ್ಟರು. ಅದರ ಪರಿಣಾಮ ನಾವೀಗ ಉಣ್ಣಹತ್ತಿದ್ದೇವೆ. ಅದೇ ಅಂಧಶ್ರದ್ಧೆ ಹಿಂದು ಬಾಂಧವರಲ್ಲಿ ಸೇರಹತ್ತಿದ್ದು ದುರ್ದೈವದ ಸಂಗತಿ.

ಈ ಎಲ್ಲ ಸಂಸ್ಥೆಗಳಿಂದ ಹಿಂದುಸ್ತಾನದ ರಾಜ್ಯ ಸಾಗಿಸಲು ನೆಹರು, ಪಟೇಲ, ರಾಜೇಂದ್ರಬಾಬು, ಅಜಾದ, ರಾಜಾಜಿಯವರ ಪ್ರತಿಯಾಗಿ ಐವರ ಹೆಸರುಗಳನ್ನು ತೋರಿಸಲಿ. ಇವರಿಗೆ ಒಬ್ಬರಾದರೂ ಸಿಗಬಹುದೇ ? ಇವರು ದೇಶದ ದ್ರೋಹ ಬಯಸುವಷ್ಟು ಅಪ್ರಾಮಾಣಿಕರಾಗಿದ್ದರೆ ಹಿಂದುಸ್ತಾನದಲ್ಲಿ ಒಬ್ಬನೂ ಪ್ರಾಮಾಣಿಕನಿಲ್ಲವೆಂದು ಸ್ಪಷ್ಟವಾಗಿ ಹೇಳಬಹುದು.

## ಸೋಶಾಲಿಷ್ಟ ಪಕ್ಷ

ಕಾಂಗ್ರೆಸ್ಸಿನ ಸ್ಥಳವನ್ನು ಆಕ್ರಮಿಸುವ ಅಲ್ಪಸ್ವಲ್ಪ ಯೋಗ್ಯತೆ ಇದ್ದ ಸಂಸ್ಥೆಯೆಂದರೆ ಇದು. ಆದರೆ ಇದು ಕೇವಲ ಕಾಂಗ್ರೆಸ್ಸಿನ ವೈರಭಾವದ ಮೂಲಕ, ತನ್ನ ಪಕ್ಷದ ಅವಮಾನದ ಕಡೆಗೆ ಲಕ್ಷ್ಯಕೊಡದೆ, ಅದರ ವರ್ಚಸ್ಸನ್ನು ಕಡಿಮೆ ಮಾಡುವ ಮಬ್ಬಿನಲ್ಲಿ ಕಾಂಗ್ರೆಸ್ಸಿಗಿಂತ ಹೆಚ್ಚಾಗಿ ತಾನು ವಿರೋಧಿಸುವ ಬೋಸರಿಗೆ ಸಹಾಯ ಮಾಡಿದ್ದು ಶೋಚನೀಯವಾದದ್ದು.

ಒಂದು ವೇಳೆ ಇದರ ಕೈಯಲ್ಲಿ ರಾಜ್ಯಸೂತ್ರ ಬಂದಲ್ಲಿ ಅದಕ್ಕಿಂತ ಹೆಚ್ಚು ತನ್ನ ಯೋಗ್ಯತೆಯ ಪ್ರಭಾವ ತೋರಿಸಬಹುದೇ? ಇದರಲ್ಲಿ ಕಾಂಗ್ರೆಸ್ಸಿನಲ್ಲಿರುವದಕ್ಕಿಂತ ಹೆಚ್ಚು ಪ್ರಭಾವಶಾಲಿಗಳು ಇರುವರೋ? ಇದರ ಉದ್ದೇಶ ಮತ್ತು ಇದು ಮಾಡುತ್ತಿರುವ ಕಾರ್ಯ ಎಲ್ಲರಿಗೂ ಗೊತ್ತಿದೆ. ಕಮ್ಯುನಿಷ್ಟರು ಚೀನವನ್ನು ವಶಪಡಿಸಿಕೊಂಡ ನಂತರ ಅಲ್ಲಿಯ ಆರ್ಥಿಕ ಪರಿಸ್ಥಿತಿ, ಬಿದ್ದ ಕೈಗಾರಿಕೆಯನ್ನು ಸರಿಪಡಿಸಲು ಬಂಡವಲದಾರರನ್ನೊಡಗೊಂಡು ಒಂದು ಯೋಜನೆ ತಯಾರಿಸಿರುವರಂತೆ. ಜಾಗತಿಕ ವಾತಾವರಣ ಹೀಗಿರುವಾಗ ಇವರು ಹಿಂದುಸ್ತಾನದಲ್ಲಿ ಏನು ಮಾಡಲಿರುವರು? ಬಹಳವಾದರೆ ಸಣ್ಣಸಣ್ಣ ಉದ್ದಿಮೆಗಳನ್ನು ರಾಷ್ಟ್ರೀಕರಿಸಬಹುದು. ಕಾಂಗ್ರೆಸ್ಸು ಇದನ್ನೇ ಮಾಡಹತ್ತಿದೆ. ಜಮೀನುದಾರಿ ಪದ್ಧತಿಯನ್ನು ನಿರ್ಮೂಲನ ಮಾಡಿ ಕಾಂಗ್ರೆಸ್ಸು ತನ್ನ ಕೃತಿಯಿಂದ ಸೋಶಾಲಿಷ್ಟವಾಗುತ್ತ ನಡೆದಿದೆ. ಈ ಸಂಸ್ಥೆಯ ಮುಂದಾಳುಗಳಾದ ನರೇಂದ್ರದೇವರು, ಹೋದ ವರ್ಷ ಒಂದು ಭಾಷಣದಲ್ಲಿ— ''ನಮಗೆ ಅರಸೊತ್ತಿಗೆ ಸಿಕ್ಕರೆ ನಾವು ಉದ್ದಿಮೆಗಳನ್ನು ಒಮ್ಮೆಲೇ ರಾಷ್ಟ್ರೀಕರಿಸಲಾರೆವು. ಕಾಂಗ್ರೆಸ್ಸನ್ನು ಅರಸೊತ್ತಿಗೆಯಿಂದ ಸರಿಸುವಂತಿಲ್ಲ. ನಾವು ಅದರ ವಿರುದ ಪಕ್ಷದ ರೂಪದಲ್ಲಿ ಕಾರ್ಯಮಾಡಲು ಇಚ್ಛಿಸುತ್ತೇವೆ" ಎಂದಿದ್ದರು. ಆಗ ಕಾಂಗ್ರೆಸ್ಸಿನ ವಿರುದ್ಧ ನಿಂತು ಆರಿಸಿಬರುವುದು ಶಕ್ಯವಿದ್ದಿಲ್ಲ. ಕಲಕತ್ತೆಯ ಸೋಲಿನಿಂದ ಇವರಿಗೆ ಹುರುಪು ಬಂದಿದೆ. ಅದನ್ನು ಸರಿಸಿ ಅದರ ಸ್ಥಳವನ್ನು ಆಕ್ರಮಿಸುವದಾಗಿ ಹೇಳಹತ್ತಿದ್ದಾರೆ.

## ಕಮ್ಯುನಿಷ್ಟ ಪಕ್ಷ

ಇದು ಉದ್ದುದ್ದ ಮಾತಾಡುವದು, ಕರಪತ್ರ ಹಂಚುವದರ ಹೊರ್ತು ಬೇರೆ ಕಾರ್ಯ ಮಾಡಿಲ್ಲ. ದಂಗೆ ಎಬ್ಬಿಸುವದು, ಕೊಲೆ, ಸುಲಿಗೆ, ನಾಶ ಮಾಡುವದರಲ್ಲಿ ಮಾತ್ರ ಪ್ರಸಿದ್ಧಿ ಪಡೆದಿದೆ. ಕಮ್ಯುನಿಝಂ ಯುರೋಪಿನಲ್ಲಿ ಅವನತಿಗೆ ಇಳಿಯಹತ್ತಿದೆ. ಬೇರೆ ಬೇರೆ ದೇಶಗಳಲ್ಲಿ ಬೇರೆಬೇರೆ ತರದ ಕಮ್ಯುನಿಝಂಗಳು ರೂಪು ತಾಳಿವೆ. ಯುಗೋಸ್ಲಾವಿಯಾದ ಮಾ|| **ಟಿಟೋ**, ಚೀನದ **ಮಾವ್**, ಇವರು ತಮ್ಮ ದೇಶಗಳಿಗನುಗುಣವಾಗಿ ಪಕ್ಷವನ್ನು ರಚಿಸಿಕೊಂಡಿದ್ದಾರೆ. ಇದರಲ್ಲಿ ಬಂಡವಾಲದಾರರ ಸಹಕಾರವೂ ಒಳಗೊಂಡಿದೆ- ಒಂದು ವೇಳೆ ಕಮ್ಯುನಿಷ್ಟ ಸರಕಾರವಾದಲ್ಲಿ ಅದು ಬಡವರ, ಕೂಲಿಕಾರರ, ಸರಕಾರವಾಗುವಂತಿಲ್ಲ. ಈಗಿನ ಸರಕಾರಕ್ಕೂ ಅದಕ್ಕೂ ಬಹಳ ಅಂತರ ಇರಲಾರದು. ಕಾಂಗ್ರೆಸಿಗರ ಸ್ಥಳದಲ್ಲಿ ಇವರು ಮಾತ್ರ ಕಾಣಿಸಬಹುದು.

ಸದ್ಯಕ್ಕೆ ನಮ್ಮ ರಾಷ್ಟ್ರದ ಮುಂದೆ ಕೆಲ ಮಹತ್ವದ ಪ್ರಶ್ನೆಗಳಿವೆ. ಅವುಗಳನ್ನು ಬಿಡಿಸಬೇಕಾಗಿದೆ. ಈ ದಿಶೆಯಲ್ಲಿಯೇ ನಾವು ಹೆಚ್ಚು ಸಮರ್ಥ ಮತ್ತು ಪ್ರಭಾವಶಾಲಿ ಸಂಸ್ಥೆಯನ್ನು ಆರಿಸಬೇಕಾಗಿದೆ. ದೇಶದ ಶಾಂತತೆ ಕಾಯ್ದುಕೊಳ್ಳುವದು ನಮ್ಮೆಲ್ಲರ ಪ್ರಥಮ ಕಾರ್ಯವಾಗಿದೆ. ಏಶಿಯಾದ ಅನೇಕ ದೇಶಗಳಲ್ಲಿ ಅಶಾಂತತೆ, ಅರಾಜಕತೆಗಳು ಹಬ್ಬಿವೆ. ಅವುಗಳ ಬೇಗೆಯು ನಮ್ಮ ಸೀಮೆಯನ್ನು ಮುಟ್ಟಿರುತ್ತದೆ. ನಮ್ಮ ದೇಶದಲ್ಲಿ ಅದು ಹಣಿಕಿ ನೋಡಹತ್ತಿದೆ. ಇದು ಹಬ್ಬದಂತೆ ನಮ್ಮ ದೇಶವನ್ನು ಕಾಪಾಡಬೇಕಾಗಿದೆ.

ಮಿತಿಮೀರಿ ಏರಿದ ಬೆಲೆಗಳನ್ನು ತಗ್ಗಿಸಬೇಕಾಗಿದೆ. ಸರಕಾರದ ಯಂತ್ರದಲ್ಲಿ ಬಂದ ಶಿಥಿಲತೆಯನ್ನು ಸರಿಪಡಿಸಬೇಕಾಗಿದೆ. ಈ ಮಹಾ ಕಾರ್ಯ ಸಾಧಿಸಿದ ನಂತರ, ದೇಶದಲ್ಲಿ ನಿಜವಾದ ಕಾರ್ಯ ಆರಂಭವಾಗುವುದು. ಅಂದರೆ ದೇಶದಲ್ಲೆಲ್ಲ ಕೈಗಾರಿಕೆಗಳನ್ನು ಹೆಚ್ಚಿಸುವದು, ಒಕ್ಕಲತನವನ್ನು ಬೆಳೆಸುವದು, ಹೆಚ್ಚು ಆಹಾರ ಹುಟ್ಟಿಸುವದು. ಇವೆಲ್ಲ ಪ್ರಶ್ನೆಗಳು ಬಹಳ ಮಹತ್ವದವುಗಳು ಇವುಗಳನ್ನು ಬಿಟ್ಟುಕೊಟ್ಟು ಬೇರೆ ಪ್ರಶ್ನೆಗಳ ಬೆನ್ನುಹತ್ತುವ ಕಾಲ ಇದಲ್ಲ. ದೇಶದ ಹಿತಚಿಂತಕರು, ಇವುಗಳ ಮಹತ್ವವನ್ನು ನಂಬಲೇಬೇಕು. ಕಮ್ಯುನಿಷ್ಟರು ಮಾತ್ರ ನಂಬಲಿಕ್ಕಿಲ್ಲ. ಇದರಿಂದ ಅವರ ಉದ್ದೇಶ ಫಲಿಸಲಾರದು.

ಮೇಲಿನ ಮಹತ್ವದ ಪ್ರಶ್ನೆಗಳನ್ನು ಬಿಡಿಸುವ ಸಾಮರ್ಥ್ಯ ಯಾವ ಸಂಸ್ಥೆಯಲ್ಲಿದೆ ಎಂಬುದನ್ನು ಶಾಂತಚಿತ್ತದಿಂದ ವಿಚಾರ ಮಾಡಬೇಕು. ಕಾಂಗ್ರೆಸ್ಸಿನ ಹೊರ್ತು ಬೇರೆ ಯಾವ ಸಂಸ್ಥೆಗಳೂ ಸಮರ್ಥ, ಪ್ರಭಾವಶಾಲಿ ಇಲ್ಲವೆಂದು ನಮ್ಮ ಮತ. ಸಂಸ್ಥೆಗಳ ಉದ್ದೇಶ ಮತ್ತು ಕಾರ್ಯಗಳನ್ನು ನೋಡಿ ಹಿಂಬಾಲಿಸಬೇಕು. ವ್ಯಕ್ತಿಗಳಿಂದ ತಪ್ಪು ಆಗುವವು, ಆಗಿರುತ್ತವೆ. ಅವರು ದೇವತೆಗಳಲ್ಲ. ಮೊದಲಿನ ಕಾಂಗ್ರೆಸ್ಸು ಉಳಿದಿರುವದಿಲ್ಲ. ಅದರ ವರ್ಚಸ್ಸು ಕಡಿಮೆಯಾಗುತ್ತಾ ನಡೆದಿದೆ. ಆದರೂ ದೇಶದಲ್ಲಿ ಇದರ ಸ್ಥಳವನ್ನು ಆಕ್ರಮಿಸುವ ಯೋಗ್ಯ ಸಂಸ್ಥೆಯಿಲ್ಲದ್ದರಿಂದ ಇದರ ಪ್ರತಿಯಾಗಿ ಯೋಗ್ಯ ಸಂಸ್ಥೆ ನಿರ್ಮಾಣವಾಗುವ ವರೆಗೆ ಇದನ್ನು ನಾಶ ಮಾಡಬಾರದು. ಇದರ ನಾಶದಿಂದ ನಾವು ಹಾಳಾಗುವೆವು. ಕಾಂಗ್ರೆಸ್ಸಿನಿಂದಲೇ ದೇಶದಲ್ಲಿ ಏಕರಾಷ್ಟ್ರೀಯತೆ ಉಳಿದಿದೆ. ಅದು ಇಲ್ಲವಾದರೆ ರಾಷ್ಟ್ರದ ಒಕ್ಕಟ್ಟು ಇಲ್ಲವಾಗುವದು, ಅರಾಜಕತೆಯು ಹಬ್ಬಲು ಅನುಕೂಲವಾಗುವದು. ಇದನ್ನು ಸುಧಾರಿಸುವ ಪ್ರಯತ್ನ ಮಾಡಬೇಕು. ಉಳಿದೆಲ್ಲ ಸಂಸ್ಥೆಗಳು ಕಾಂಗ್ರೆಸ್ಸಿನ ಅವನತಿ ಬಯ

ಸುವಲ್ಲಿ ಸಂತುಷ್ಟವಾಗದೆ, ಅದಕ್ಕೆ ಈ ಕಾಲದಲ್ಲಿ ಸಹಾಯಮಾಡಬೇಕು. ಯಾಕಂದರೆ ಈ ಎಲ್ಲ ಪ್ರಶ್ನೆಗಳು ರಾಷ್ಟ್ರಕ್ಕೆ ಸಂಬಂಧಿಸಿದವುಗಳಿರುತ್ತವೆ.

### ಕಾಂಗ್ರೆಸ್ಸು ಇಲ್ಲವೆ ಅರಾಜಕತೆ

ನಾವು ಕಾಂಗ್ರೆಸ್, ಕಮ್ಯುನಿಷ್ಟ, ಸೋಶಾಲಿಷ್ಟ ಪಕ್ಷಗಳಲ್ಲಿ ಒಂದನ್ನು ಆರಿಸಬೇಕಾಗಿಲ್ಲ, ಕಾಂಗ್ರೆಸ್ಸು ಮತ್ತು ಅರಾಜಕತೆ ಇವುಗಳಲ್ಲಿ ಒಂದನ್ನು ಸ್ವೀಕರಿಸಬೇಕಾಗಿದೆ.

ಕಾಂಗ್ರೆಸ್ಸಿನಲ್ಲಿ ಎಷ್ಟೊ ಅಧರ್ಮ, ಅಸಮರ್ಥತೆ, ಅನ್ಯವಹಾರ ಇದ್ದರೂ ದೇಶದ ಪೇಟೆಗಳು ತೆರೆದಿರುತ್ತವೆ. ವ್ಯಾಪಾರ ಸಾಗಿದೆ. ವಾಹನಗಳ ಚಲನ ವಲನ ನಡೆದಿದೆ, ತಂತಿ ಟಪ್ಪಾಲುಗಳೂ ವಿಮಾನಗಳ ಹಾರಾಟವೂ ಬಂದಾಗಿಲ್ಲ. ಹೊಟ್ಟೆತುಂಬ ಇಲ್ಲದಿದ್ದರೂ ಅರ್ಧ ಹೊಟ್ಟೆ ಅನ್ನ ಸಿಗಹತ್ತಿದೆ. ಮನೆಗಳಲ್ಲಿ ಕೂತಿದ್ದೇವೆ. ಜನಸಾಮಾನ್ಯರು ಅಡ್ಡದಾರಿ ಹಿಡಿದ. ಮಧ್ಯವರ್ತಿ ಶಕ್ತಿಯನ್ನು ಹಾಳುಮಾಡಿಬಿಟ್ಟರೆ,ಆ ಸ್ಥಳವನ್ನು ಆಕ್ರಮಿಸಿಕೊಳ್ಳುವ ಸಾಮರ್ಥ್ಯವು ಇಲ್ಲವಾದ್ದರಿಂದ, ಅದರ ಪರಿಣಾಮವಾಗಿ ದೇಶದಲ್ಲೆಲ್ಲ, ಅಶಾಂತತೆ ಅರಾಜಕತೆಗಳು ಹಬ್ಬುವವು.

ಇದೇಸ್ಥಿತಿ ಚೀನಕ್ಕೆ ಬಂದಿತ್ತು. ಇಂದು ಬರ್ಮಾ ದೇಶದಲ್ಲಿ ಇದೇ ಸ್ಥಿತಿ ನಡೆದಿದೆ. ನಾಳೆ ಹಿಂದುಸ್ತಾನದಲ್ಲಿಯೂ ಇದೇ ಆಗುವದು. ನಾವು ಅವಿಚಾರದಿಂದ ಸಾಗಿದರೆ ಈ ಸ್ಥಿತಿ ಬರದೆ ಬಿಡಲಾರದು.

ಕಾಂಗ್ರೆಸ್ಸಿನಲ್ಲಿಯ ನ್ಯೂನತೆಗಳನ್ನು ದೂರಮಾಡುವ ಪ್ರಯತ್ನ ಮಾಡಬೇಕು. ದೇಶದಲ್ಲಿ ಒಂದು ಶೀಲವಂತ ಸಂಸ್ಥೆ ನಿರ್ಮಾಣವಾವ ವರೆಗೆ ಅನಿವಾರ್ಯವಾಗಿ ಇದನ್ನೇ ಎತ್ತಿ ಹಿಡಿಯಬೇಕು.

ರಶಿಯಾದ ಒಂದು ಸ್ಥಳದಲ್ಲಿ ಕಮ್ಯುನಿಷ್ಟ ಪಾರ್ಟಿಯಿಂದ ೧೫೦೦ ಸದಸರನ್ನು ತೆಗೆದುಹಾಕಿದರಂತೆ. ಈ ಸಂಖ್ಯೆಯು ಆ ಪಕ್ಷದ ೩/೪ ದಷ್ಟು ಇದ್ದಿತಂತೆ ಅದರಂತೆಯೇ ಕಾಂಗ್ರೆಸ್ಸಿನ ಮುಂದಾಳುಗಳು ಮುಂದೆ ಬಂದು ಕಾಂಗ್ರೆಸ್ಸನ್ನು ಅವನತಿಗೆ ತರಲು ಯಾರು ಕಾರಣರಾದರೋ ಅವರ ಸಂಖ್ಯೆ ೩/೪ ದಷ್ಟಾದರೂ ಚಿಂತೆ ಮಾಡದೆ ಕಿವಿಹಿಡಿದು ತಂದು ಹೊರಗೆ ಬಿಡಬೇಕು. ಅಂದರೆ ದೇಶದ ಸ್ಥಿತಿಯು ಸುಧಾರಿಸುವದು. ಶಾಂತಚಿತ್ತರಾಗಿ ವಿಚಾರ ಮಾಡುವ ವಿಚಾರವಂತರಿಗೆ ದೇಶದ ಸ್ಥಿತಿಯ ಯಥಾರ್ಥ ಕಲ್ಪನೆ ಬರಬೇಕೆಂದು ಇದ್ದದ್ದನ್ನು ಇದ್ದಂತೆ ಬರೆಯಲಾಗಿದೆ.

ಹಿಂದುಸ್ತಾನವನ್ನು ಉಳಿಸುವದು ಜನಸಾಮಾನ್ಯರ ಕೈಯಲ್ಲಿದೆ. ಅವರ ಕೈಯಲ್ಲಿ ಮತದ ಮಹಾಶಕ್ತಿ ಪ್ರಾಪ್ತವಾಗಿದೆ. ಹಿಂದುಸ್ತಾನದ ಪ್ರತಿಯೊಬ್ಬ ವಯಸ್ಕನು ಕಿರೀಟವಿಲ್ಲದ ಅರಸನಾಗಿದ್ದಾನೆ. ತನ್ನ ಅರಸೊತ್ತಿಗೆಯನ್ನು ರಕ್ಷಿಸುವ ಹೊಣೆಯು ಅವನ ಮೇಲಿದೆ. ದೇವರು ನಮ್ಮೆಲ್ಲರಿಗೆ ಸನ್ಮಾರ್ಗವನ್ನು ತೋರಿಸಲಿ

———

# ಸಿಟಿ ಬುಕ್‌ಸ್ಟಾಲ, ಹುಬ್ಬಳ್ಳಿ

## ನಮ್ಮಲ್ಲಿ ಸಿಗುವ ಪುಸ್ತಕಗಳು

### ನಾಟಕಗಳು

| | | |
|---|---|---|
| ೧ | ಸಂಪೂರ್ಣ ರಾಮಾಯಣ | ೨-೦-೦ |
| ೨ | ದಶಾವತಾರ | ೧-೮-೦ |
| ೩ | ಶಾಂತಕುಮಾರಿ | ೧-೮-೦ |
| ೪ | ಸ್ತ್ರೀ ರತ್ನ | ೧-೮-೦ |
| ೫ | ಹರಿಶ್ಚಂದ್ರ | ೧-೮-೦ |
| ೬ | ಧರತಿಮಾತಾ | ೧-೮-೦ |
| ೭ | ಉಷಾ ಸ್ವಯಂವರ | ೧-೮-೦ |
| ೮ | ನರರಾಕ್ಷಸಿ (ಹೆಣ್ಣಿನಹಂಬಲ) | ೨-೦-೦ |
| ೯ | ಸಮ್ರಾಟ ಉತ್ತರಕುಮಾರ | ೧-೮-೦ |
| ೧೦ | ಸತ್ಯವಾನ ಸಾವಿತ್ರಿ | ೧-೮-೦ |
| ೧೧ | ಚಲೇಜಾವ ಮಹಾದೇವವೈಲಾರ | ೧-೮-೦ |
| ೧೨ | ಸತಿ ಅನಸೂಯಾ | ೧-೦-೦ |
| ೧೩ | ಬ್ಲ್ಯಾಕ್ ಮಾರ್ಕೆಟ್ | ೨-೦-೦ |
| ೧೪ | ಚಿತ್ತೂರ ಪದ್ಮಿನಿ | ೧-೮-೦ |
| ೧೫ | ರಾಧಾರಮಣ | ೧-೮-೦ |
| ೧೬ | ಕಿತ್ತೂರ ಕೇಸರಿ | ೧-೮-೦ |
| ೧೭ | ಝಾಂಸಿ ಲಕ್ಷ್ಮೀಬಾಯಿ | ೧-೮-೦ |
| ೧೮ | ಭೂ ಕೈಲಾಸ | ೧-೮-೦ |
| ೧೯ | ಜೀವನ ಸಂಗೀತ | ೧-೮-೦ |
| ೨೦ | ಬೆಳವಡಿ ಮಲ್ಲಮ್ಮ | ೧-೮-೦ |
| ೨೧ | ನವಯುಗ | ೧-೮-೦ |
| ೨೨ | ನಾಗಯಜ್ಞ | ೧ ೮ ೦ |
| ೨೩ | ಕುರುಕ್ಷೇತ್ರ | ೧-೮-೦ |
| ೨೪ | ಸಿಂಧೂರ ಲಕ್ಷ್ಮಣ | ೧-೮-೦ |
| ೨೫ | ಕರ್ಣಾರ್ಜುನ | ೧-೮-೦ |
| ೨೬ | ಭಾಗ್ಯಹೀನ ಮಂಡೋದರಿ | ೧-೮-೦ |
| ೨೭ | ಚಲನ ಪ್ರಪಂಚ | ೧-೮-೦ |
| ೨೮ | ಸ್ವಜನದ್ರೋಹ | ೧-೮-೦ |
| ೨೯ | ರಾಷ್ಟ್ರ ಭಕ್ತಿ | ೧-೮-೦ |
| ೩೦ | ಚಂದ್ರಹಾಸ | ೨-೦-೦ |
| ೩೧ | ಶಾಪವಿಮೋಚನ | ೧-೮-೦ |
| ೩೨ | ಕಡ್ಲಿಮಟ್ಟಿ ಸ್ಟೇಶನ ಮಾಸ್ತರ | ೧-೮-೦ |
| ೩೩ | ಭೌಮಾಸುರ | ೧.೮.೦ |
| ೩೪ | ಜೈ ಹಿಂದ | ೧-೮-೦ |

### ಏಕಾಂಕ ನಾಟಕಗಳು

| | | |
|---|---|---|
| ೧ | ಹುತಾತ್ಮರು | ೦.೮.೦ |
| ೨ | ಜೈ ಕರ್ನಾಟಕ | ೦.೬.೦ |
| ೩ | ಯಮುನ ನ್ಯಾಯ ಮಂದಿರ | ೦ ೮.೦ |
| ೪ | ನಡುಗಾಲ ಸಂಸಾರ | ೦-೮ ೦ |

### ಕಥಾ ಸಂಗ್ರಹಗಳು

| | | |
|---|---|---|
| ೧ | ಗೇಣು ಹೊಟ್ಟೆಗಾಗಿ | ೦-೮-೦ |
| ೨ | ಸಂಧಿಕಾಲ | ೧-೪-೦ |
| ೩ | ಹಾಡುವ ಹುಡಿಗಿ | ೧-೮-೦ |

### ರಾಜಕೀಯ

| | | |
|---|---|---|
| ೧ | ಸೋವ್ಹಿಯೆಟ್ ಭೂಮಿ | ೧-೪-೦ |
| ೨ | ಮರುಭೂಮಿಯ ಅರಬರು | ೧-೮-೦ |

### ಕಾಮಶಾಸ್ತ್ರ

| | | |
|---|---|---|
| ೧ | ಕಾಮಕಲಾನಿಧಿ | ೨-೦-೦ |

### ಕಾದಂಬರಿಗಳು

| | | |
|---|---|---|
| ೧ | ಕರ್ಮಪತ್ನಿ | ೦-೧೨-೦ |

### ಇತರ

| | | |
|---|---|---|
| ೧ | ಕಾಮಧೇನು | ೫-೮-೦ |
| ೨ | ಕಲ್ಪವೃಕ್ಷ | ೪-೮ ೦ |
| ೩ | ಕನ್ನಡ ಹಿಂದೀ ಸ್ವಯಂಬೋಧೆ | ೧-೦೦ |

**ವೀರಭದ್ರಪ್ಪಾ ದುಂಡಪ್ಪ ಆರುಬೆರಳಿನ (ಶಾಸ್ತ್ರಿ) ಇವರ ೧೦ ವರ್ಷದಿಂದ ದುರ್ಮಿಳವಾದ ಅಪೂರ್ವ ದೊಡ್ಡ ಗ್ರಂಥ**

# ಕಾಮಧೇನು

ಸುಧಾರಿಸಿ ಬೆಳಿಸಿದ ಹೊಸ ೭ನೇ ಅವೃತ್ತಿ. ೫೫೦ ಪುಟಗಳು.
ಬೆಲೆ ರೂ ೫—೮—೦ ವ್ಹಿ. ಪಿ. ಯಿಂದಾ ರೂ. ೬—೦—೦

ಇದರಲ್ಲಿ-ಮುಹೂರ್ತ ಸಂಗ್ರಹ, ಶಿಶು ಜನ್ಮ ಫಲ, ಪ್ರಶ್ನ ಸಂಗ್ರಹ, ಶಕುನ ಸಂಗ್ರಹ, ಸ್ವಪ್ನ ಫಲ, ಸಾಮುದ್ರಿಕ ಯಂತ್ರ-ಮಂತ್ರ-ತಂತ್ರ ಸಂಗ್ರಹ, ವಿವಿಧ ಕಲಾಸಂಗ್ರಹ ವೈದ್ಯ ಸಂಗ್ರಹ, ಸ್ತ್ರೀ ರೋಗ ಚಿಕಿತ್ಸೆ, ಬಾಲ ಚಿಕಿತ್ಸೆ, ಬಾಲರೋಗ ಚಿಕಿತ್ಸೆ ವಗೈರೆ ಅಪೌಲ್ಯ ಮಾಹಿತಿ ಇರುವದು. ಬೇಗನೇ ತಕ್ಕೊಳ್ಳಿರಿ. ಪ್ರತಿಗಳು ಸ್ವಲ್ಪೇ ಇರುವವು. ನಿರಾಶೆ ಆಗಬೇಡಿರಿ.

# ಕಲ್ಪವೃಕ್ಷ

ಸುಧಾರಿಸಿ ಬೆಳಿಸಿದ ಹೊಸ ಮೂರನೆ ಆವೃತ್ತಿ ೪೦೦ ಪುಟಗಳು.
ಬೆಲೆ ರೂ. ೪—೮—೦ ವ್ಹಿ. ಪಿ ಯಿಂದಾ ೫-೦-೦ ರೂ.

ಇದರಲ್ಲಿ—ಗ್ರಹಗಳ ಶುಭಾ ಶುಭ ಫಲ, ನವಗ್ರಹ ಶಾಂತಿ ಕ್ರಮ, ಸುಭಿಕ್ಷ—ದುರ್ಭಿಕ್ಷ ವಿಚಾರ ವ್ಯಾಪಾರ ತೇಜಿ ಮಂದಿ ನಿರ್ಣಯ ಗ್ರಹನಿರ್ಮಾಣ ವಿಚಾರ ಔಷಧಿ ಸಂಗ್ರಹ ಪಶು ರೋಗ ಚಿಕಿತ್ಸೆ ವಿಷ ವೈದ್ಯ, ಯಂತ್ರ ಮಂತ್ರ ತಂತ್ರಗಳು ಅಶ್ವಾದಿ ಪಶು ಪರೀಕ್ಷೆ ಜಲ ಮಾರ್ಗ ವಿಚಾರ (ದೃಗಾರ್ಗಲಶಾಸ್ತ್ರ) ಬುದ್ಧಿವರ್ಧಕ, ಮನೋರಂಜಕ ಲೆಕ್ಕಗಳು ವಗೈರೆ ಮಾಹಿತಿ ಇರುವದು ಬೇಗನೆ ತರಿಸಿಕೊಳ್ಳಿರಿ. ಪ್ರತಿಗಳು ಸ್ವಲ್ಪೆ ಇರುವವು.

# ಕನ್ನಡ-ಹಿಂದೀ ಸ್ವಯಂಬೋಧೆ

ಸಂಪೂರ್ಣ ಹೊಸ ದೊಡ್ಡ ಗ್ರಂಥ— ಬೆಲೆ ರೂಪಾಯಿ ೧—೦—೦ ವ್ಹಿ. ಪಿ. ಯಿಂದಾ ೧—೬—೦

ಇದರಲ್ಲಿ ಕನ್ನಡ–ಉಚ್ಚಾರ ಸಹಿತ–ಅಂಕಲಿಪಿ ವಿಭಾಗ, ಕಥಾ ವಿಭಾಗ, ಅನುವಾದ ವಿಭಾಗ, ಪತ್ರ ಲೇಖನ ವಿಭಾಗ, ವಾಕ್ ಪ್ರಚಾರ ವಿಬಾಗ, ಹೀಗೆ ಆರು ವಿಭಾಗಗಳು ಇರುವವು

**ಸಿಗುವ ಸ್ಥಳ:— ಸಿಟಿ ಬುಕ್ ಸ್ಟಾಲ, ದುರ್ಗದಬೈಲ, ಹುಬ್ಬಳ್ಳಿ.**

# ಹಿಂದೀ ಚಲಚಿತ್ರಗಳು

ಬರೆದವರು:
ಶ್ರೀ 'ಅಚ್ಯುತ' ಧಾರವಾಡ

ಚಲಚ್ಚಿತ್ರಗಳು ಮನೋರಂಜಕವಾಗಿರುವಂತೆ ಬೋಧಪ್ರದವಾಗಿರಬೇಕು. ವಿವಿಧ ವಿಷಯಗಳ ಬಗ್ಗೆ ಜನತೆಗೆ ತಿಳಿವಳಿಕೆ ನೀಡಿ ಶಿಕ್ಷಣ ಕೊಡುವಂತಹವುಗಳಾಗಿರಬೇಕು. ನಮ್ಮ ಚಿತ್ರನಿರ್ಮಾಪಕರು ಮುಖ್ಯ ಅಂಶಗಳನ್ನು ಮರೆತು ಕೀಳು ದರ್ಜೆಯ ಚಿತ್ರಗಳನ್ನು ತಯಾರಿಸುತ್ತಿರುವದು ಕಂಡುಬರಹತ್ತಿದೆ. ಉತ್ತಮ ಚಿತ್ರಗಳಿಲ್ಲವೆಂದೇನಲ್ಲ. ಅವುಗಳ ಸಂಖ್ಯೆ ಅತ್ಯಲ್ಪವಿರುವದರಿಂದ ಜನರು ಕೀಳು ದರ್ಜೆಯ ಮನೋರಂಜಕ ಚಿತ್ರಗಳಿಂದ ತೃಪ್ತರಾಗಬೇಕಾಗಿದೆ.

### ಆರಂಭ ದಶೆ

ಹಿಂದುಸ್ತಾನದಲ್ಲಿ ಮೂಕ ಚಿತ್ರಗಳ ತಯಾರಿಕೆ ೧೯೧೨ ರಲ್ಲಿ ಪ್ರಾರಂಭವಾಯಿತು. ಶ್ರೀ ಫಾಳಕೆಯವರು ಚಿತ್ರ ನಿರ್ಮಾಪಕರಲ್ಲಿ ಮೊದಲಿಗರು. 'ಹರಿಶ್ಚಂದ್ರ' ಅವರ ಮೊದಲನೆಯ ಚಿತ್ರ. ಅವರು ೧೯೧೭ ರ ವರೆಗಿನ ಅವಧಿಯಲ್ಲಿ ಸುಮಾರು ೨೨ ಚಿತ್ರಗಳನ್ನು ತಯಾರಿಸಿದರು. ಅವುಗಳಲ್ಲಿ 'ಲಂಕಾದಹನ'ವೊಂದೇ ಅವರಿಗೆ ಧನ ಲಾಭ ಮಾಡಿಕೊಟ್ಟದ್ದು. ೧೯೧೧ ರಲ್ಲಾದ ದಿಲ್ಲಿ ದರ್ಬಾರಿನ ವರ್ಣ ಚಿತ್ರವನ್ನು ತೆಗೆದುಕೊಳ್ಳಲಾಗಿದ್ದರೂ ಅದು ವಿದೇಶೀ ಕಂಪನಿಯದಾಗಿದ್ದಿತು. ಮಾತನಾಡುವ ಚಿತ್ರಗಳ ತಯಾರಿಕೆ ೧೯೩೧ ರಿಂದ ಪ್ರಾರಂಭವಾಯಿತು. ಮೊದಲನೆಯ ಚಿತ್ರ ಅಲಂ ಆರಾ. ಇಂಪೀರಿಯಲ್ ಫಿಲ್ಮ ಕಂಪನಿಯವರು ಇದನ್ನು ತಯಾರಿಸಿದವರು. ಹಿಂದುಸ್ತಾನದಲ್ಲಿ ಮೊದಲನೆಯ ವರ್ಣಚಿತ್ರವನ್ನು ತಯಾರಿಸಿದ್ದೂ ಈ ಕಂಪನಿಯೇ. 'ಕಿಸಾನ ಕ್ಯಾ' ಈ ಕಂಪನಿಯ ವರ್ಣ ಚಿತ್ರ. ಅರ್ದಶೀರ ಇರಾಣಿಯವರು ಈ ಚಿತ್ರದ ನಿರ್ಮಾಪಕರು. ಹಿಂದುಸ್ತಾನದಿಂದ ಪರದೇಶಗಳಿಗೆ ಹೋದ ಚಿತ್ರಗಳಲ್ಲಿ ಮಹಾರಾಷ್ಟ್ರ ಫಿಲ್ಮ ಕಂಪೆನಿಯ 'ಸೈರಂಧ್ರಿ' ಮೊದಲನೆಯದು. ಬಾಬುರಾವ ಪೇಂಟರ ಈ ಚಿತ್ರದ ದಿಗ್ದರ್ಶಕರು. ಬೆಂಬ್ಲೆ ಪ್ರದರ್ಶನಾಲಯದಲ್ಲಿ ಈ ಚಿತ್ರ ತೋರಿಸಲ್ಪಟ್ಟಿತು. ಬಂಗಾಲದ ನಿರಂಜನ ಪಾಲರು ತಯಾರಿಸಿದ 'The light of Asia' ಮತ್ತು ಪ್ರಭಾತ ಕಂಪನಿಯವರ 'ಸಂತ ತುಕಾರಾಮ' ಚಿತ್ರಗಳು ಹೊರದೇಶಗಳಲ್ಲಿ ಪ್ರದರ್ಶಿಸಲ್ಪಟ್ಟವು.

ಪ್ರಾರಂಭದಿಂದಲೂ ಸಾಮಾಜಿಕ ಚಿತ್ರಗಳನ್ನು ಯಶಸ್ವಿಯಾಗಿ ಚಿತ್ರಿಸಿದ ನ್ಯೂ ಥಿಯೇಟರ್ಸ ಸಂಸ್ಥೆ ಕಲಕತ್ತೆಯಲ್ಲಿ ೧೯೩೧ ರಲ್ಲಿ ಪ್ರಾರಂಭವಾಯಿತು. ಮದನ್ ಥಿಯೇಟರ್ಸ, ರಣಜಿತ್ ಫಿಲ್ಮ ಕಂಪನಿ, ವಾಡಿಯಾ ಮುವೀಟೋನ್, ಮಿನರ್ವಾ ಮುವೀಟೋನ್, ಹಂಸ್ ಪಿಕ್ಚರ್ಸ್, ಇಂಪೀರಿಯಲ್ ಫಿಲ್ಮ್ ಕಂಪೆನಿ ಮೊದಲಾದ ಚಿತ್ರ ನಿರ್ಮಾಪಕ ಸಂಸ್ಥೆಗಳು ಇದೇ ವರುಷದಿಂದ ಚಿತ್ರ ತಯಾರಿಕೆಯನ್ನು ಪ್ರಾರಂಭಿಸಿದವು. ಪ್ರಭಾತ ಕಂಪನಿಯು ೧೯೩೨ ರಲ್ಲಿ ಪ್ರಾರಂಭವಾಯಿತು. ಮುಂಬಯಿಯಿಂದ ಪ್ರಥಮತಃ ಯಶಸ್ವಿ ಚಿತ್ರಗಳನ್ನು ತಯಾರಿಸಿದ ಮುಂಬಯಿ ಟಾಕೀಜ ಲಿಮಿಟೆಡ್ ಎಂಬ ಸಂಸ್ಥೆಯನ್ನು ದಿವಂಗತ ಹಿಮಾಂಶು ರಾಯರು ೧೯೩೪ ರಲ್ಲಿ ಸ್ಥಾಪಿಸಿದರು. ಹಿಮಾಂಶು ರಾಯರ ನಿಧನದ ನಂತರ ೧೯೪೩ ರಿಂದ ಈ ಸಂಸ್ಥೆಯ ಆಡಳಿತೆಯಲ್ಲಿ ಬದಲಾವಣೆಯಾಗುತ್ತ ಬಂದು ಈಗ ಅಶೋಕ ಕುಮಾರ ಮತ್ತು ವಿ. ವಾಚ್ಛಾ ಅವರಿಗೆ ಅದು ಸೇರಿದೆ. ನ್ಯೂ ಥಿಯೇಟರ್ಸ ಸಂಸ್ಥೆಯ ಹಿಂದೀ ಶಾಖೆ ಈಗ ಕಲಕತ್ತೆಯಿಂದ ಮುಂಬಯಿಗೆ ಸ್ಥಳಾಂತರ ಹೊಂದಿದೆ.

ಚಲಚ್ಚಿತ್ರದ ಉದ್ದಿಮೆಯಲ್ಲಿ ಈಗ ಸುಮಾರು ೨೫ ಕೋಟಿ ರೂ.ಗಳಷ್ಟು ಬಂಡವಲು ತೊಡಗಿಸಲ್ಪಟ್ಟಿದೆ; ೫೦ ಸಾವಿರ ಕೆಲಸಗಾರರು ದುಡಿಯುತ್ತಿದ್ದಾರೆ. ಸುಮಾರು ೭೫-೮೦ ಕಂಪನಿಗಳು ಯಶಸ್ವಿಯಾಗಿ ಚಿತ್ರಗಳನ್ನು ತಯಾರಿಸುತ್ತಿವೆ. ಹೊಸ ಹೊಸ ಕಂಪನಿಗಳು ಹುಟ್ಟಿಕೊಳ್ಳತೊಡಗಿವೆ. ಸುಮಾರು ೨೫೦ ಚಿತ್ರವಿತರಣ ಸಂಸ್ಥೆಗಳಿವೆ.

ಹಿಂದುಸ್ತಾನದಲ್ಲಿ ಪ್ರಾರಂಭದಲ್ಲಿ ಪೌರಾಣಿಕ ಚಿತ್ರಗಳನ್ನೇ ಹೆಚ್ಚಾಗಿ ಸಿನೆಮುದನರು ತೆಗೆದುಕೊಂಡರು. ೧೯೪೦ ರಿಂದ ಈಚೆಗೆ



ನಿರ್ದೇಶಕ ವಿ. ಶಾಂತಾರಾಮು



ನಿರ್ದೇಶಕ ಹಿಮಾಂಶು ರಾಯ



ನಟ ದೇವಿಕಾರಾಣಿ

ಪೌರಾಣಿಕ ಚಿತ್ರಗಳ ತಯಾರಿಕೆ ಕಡಿಮೆಯಾಗಿ ಸಾಮಾಜಿಕ ಚಿತ್ರಗಳ ರಚನೆ ಹೆಚ್ಚಾಗಿದೆ.

### ನ್ಯೂ ಥಿಯೇಟರ್ಸಿನ ಉತ್ತಮ ಆದರ್ಶ

ಮೊದಲಿನಿಂದಲೂ ಯಶಸ್ವಿಯಾಗಿ ಸಾಮಾಜಿಕ ಚಿತ್ರಗಳನ್ನು ತಯಾರಿಸಿದವರೆಂದರೆ ಕಲಕತ್ತೆಯ ನ್ಯೂ ಥಿಯೇಟರ್ಸಿನವರು. 'ಛಿಖಂಡಾ ತಾರ' ಅವರ ಮೊದಲನೆಯ ಚಿತ್ರ. ಈ ಸಂಸ್ಥೆ ತಯಾರಿಸಿದ ಒಂದೊಂದು ಚಿತ್ರದಲ್ಲಿಯೂ ಒಂದೊಂದು ಸಮಸ್ಯೆಯಾಗಲಿ, ಸಂದೇಶವಾಗಲಿ ಜನತೆಗೆ ದೊರೆಯುತ್ತದೆ. 'ದೇವದಾಸ' ಚಿತ್ರದಲ್ಲಿ ಪ್ರೇಮದ ಸಮಸ್ಯೆಯನ್ನು ತೋರಿಸಿಕೊಟ್ಟರೆ 'ಹಾರ ಜೀತ್' ಚಿತ್ರದಲ್ಲಿ ಕಲಾಕೀರ್ತಿ, ಸುಖ ಶಾಂತಿಗಳು ಲಭಿಸಿದರೂ ಪ್ರೇಮ ಜೀವನ ಲಭಿಸುವದು ದುಸ್ತರವೆಂಬುದನ್ನು ಚಿತ್ರಿಸಲಾಗಿದೆ. 'ಜಿಂದಿಗಿ' ಚಿತ್ರದಲ್ಲಿ ನಾರಿಯ ಜೀವನವನ್ನು ಸಮಾಜವು ಯಾವ ದೃಷ್ಟಿಯಿಂದ ನೋಡುತ್ತದೆ, ನಾರಿ ಅದನ್ನು ಹೇಗೆ ಕಾಣುತ್ತಾಳೆ ಎಂಬುದನ್ನು ತೋರಿಸಲಾಗಿದೆ. 'ಡಾಕ್ಟರ' ಚಿತ್ರದಲ್ಲಿ ಡಾಕ್ಟರರು ದೇಶ ಸೇವೆ, ಜನ ಸೇವೆ ಮಾಡುವದಕ್ಕಾಗಿಯೆ ತಮ್ಮ ವಿದ್ಯೆಯನ್ನುಪಯೋಗಿಸಬೇಕೆಂಬ ಸಂದೇಶವನ್ನು ಕೊಡಲಾಗಿದೆ. ಶ್ರೀಮಂತ ಪತ್ನಿಯು ದುಡ್ಡಿನ ಮೋಹದಿಂದ ಪತಿಯನ್ನು ಹೀಯಾಳಿಸಿ ಪಶ್ಚಾತ್ತಾಪದಿಂದ ಬೆಂದ ದಾರುಣ ಚಿತ್ರ 'ಕಾಶೀನಾಥ'ದಲ್ಲಿ ಒಡಮೂಡಿದೆ. 'ಲಗನ್' ಚಿತ್ರದಲ್ಲಿ ತಪ್ಪು ತಿಳಿವಳಿಕೆಯಿಂದಾಗುವ ಅನರ್ಥವನ್ನು ತೋರಿಸಲಾಗಿದೆ. 'ವಸೀಯತನಾಮಾ' ಎಂಬ ಚಿತ್ರದಲ್ಲಿ ಮೃತ್ಯುಪತ್ರದಿಂದ ಒದಗಿದ ಘೋರ ವಿಪತ್ತುಗಳನ್ನು ತೋರಿಸಲಾಗಿದೆ. 'ಊಂಚ ನೀಚ್' ಚಿತ್ರದಲ್ಲಿ ಹರಿಜನ ಸಮಸ್ಯೆಯ ಪರಿಚಯ ಮಾಡಿ ಕೊಡಲಾಗಿದೆ. ಹೀಗೆ ಸಮಾಜದ ನಾನಾ ವಿಧವಾದ ಸಮಸ್ಯೆಗಳು, ಕುಂದುಕೊರತೆಗಳು ಮುಂತಾದವನ್ನು ಚಿತ್ರಿಸಲಾಗಿದೆ. ಪಂಕಜ ಮಲ್ಲಿಕ, ಜಮುನಾ, ಬರುವಾ, ಪನ್ನಾ, ಕಾನನದೇವಿ, ಭಾರತೀದೇವಿ, ನೀಮೋ, ಜ್ಯೋತಿ ಪ್ರಕಾಶ, ಅನುರಮಲಿಕ, ಸುಮಿತ್ರಾದೇವಿ, ಪಾಲ ಮಹೇಂದ್ರ, ಅಸಿತ ಬರನ್, ಮೋವಾ, ಶ್ರೀಲೇಖಾ, ಮುಂಜರಿ, ಡಿ. ಆರ್. ದಾಸ್, ಕಮಲೇಶ ಕುಮಾರಿ, ಲೀಲಾ ದೇಸಾಯಿ, ನಜೀಮ, ಜಗದೀಶ, ಪೃಥ್ವಿರಾಜ ಮೊದಲಾದ ಪ್ರಸಿದ್ಧ ನಟನಟಿಯರು ಈ ಸಂಸ್ಥೆಯ ಚಿತ್ರಗಳಲ್ಲಿ ಅಭಿನಯಿಸಿರುವರು. ಅಭಿನಯವಾದರೂ ಎಲ್ಲ ರೀತಿಯಿಂದಲೂ ಸಮರ್ಪಕವಾಗಿದೆ. ದೇವಕೀ ಬೋಸ್, ಮಧು ಬೋಸ್, ಅಮರ ಮಲ್ಲಿಕ, ಹೇಮಚಂದ್ರ, ಪಿ. ಸಿ. ಬರುವಾ, ನಿತೀನಬೋಸ್ ಮೊದಲಾದ ಉತ್ತಮ ದಿಗ್ದರ್ಶಕರು ಈ ಸಂಸ್ಥೆಯ ಚಿತ್ರಗಳನ್ನು ದಿಗ್ದರ್ಶಿಸಿದ್ದಾರೆ. ಈ ಸಂಸ್ಥೆಯ ಒಂದು ವೈಶಿಷ್ಟ್ಯವೆಂದರೆ, ಕಥಾನಕಗಳಿಗಾಗಿ ಉತ್ತಮ ಬರೆಹಗಾರರ ಜನಪ್ರಿಯ ಕಾದಂಬರಿ, ಕಥೆಗಳನ್ನು ಆಯ್ದುಕೊಳ್ಳುವದಾಗಿದೆ.

### ಇತರ ಚಿತ್ರಾಲಯಗಳು

ನ್ಯೂಥಿಯೇಟರ್ಸಿನ ಬಳಿಕ ಪುಣೆಯಲ್ಲಿ ಉತ್ತಮ ಚಿತ್ರಗಳನ್ನು ತಯಾರಿಸಿದ ಮೊದಲನೆಯ ಸಂಸ್ಥೆ ಪ್ರಭಾತ ಕಂಪನಿ. 'ಅಮೃತ ಮಂಥನ', 'ಆದಮಿ', 'ಪಡೋಸಿ' ಈ ಕಂಪನಿಯ ಉತ್ತಮ ಚಿತ್ರಗಳು. ಈಗ ರಾಜಕಮಲ ಚಿತ್ರಮಂದಿರ ಸ್ಥಾಪಿಸಿದ ಶ್ರೀ ವಿ. ಶಾಂತಾರಾಮರು ಕಡೆಯ ಎರಡೂ ಚಿತ್ರಗಳನ್ನು ದಿಗ್ದರ್ಶಿಸಿದ್ದಾರೆ. ಜಾತೀಯತೆಯನ್ನು ತ್ಯಜಿಸಬೇಕು; ಭೂಮಿಯೇ ರೈತರ ಸರ್ವಸ್ವ ಎಂಬೀ ಎರಡು ಸಂದೇಶಗಳನ್ನು 'ಪಡೋಸಿ' ಬೀರುತ್ತದೆ. ದಿವಂಗತ ವಿನಾಯಕರಂತಹ ಶ್ರೇಷ್ಠ ದಿಗ್ದರ್ಶಕರ ನೆರವೂ ಈ ಕಂಪನಿಗೆ ದೊರಕಿದೆ. ಸಾಮಾಜಿಕ ಚಿತ್ರಗಳನ್ನಲ್ಲದೆ, ಪೌರಾಣಿಕ, ಐತಿಹಾಸಿಕ ಚಿತ್ರಗಳನ್ನು ಈ ಸಂಸ್ಥೆ ತಯಾರಿಸಿದೆ. ಈಗೀಗ ಅಷ್ಟು ಚಿತ್ರಗಳನ್ನು ಈ ಸಂಸ್ಥೆ ತಯಾರಿಸುತ್ತಿಲ್ಲ.



ನಿರ್ದೇಶಕ ನಟ ಕಿಶೋರಸಾಹು

ಅದೇ ಆಗ ವಿದೇಶದಿಂದ ಹಿಂತಿರುಗಿದ ದಿ. ಹಿಮಾಂಶು ರಾಯರು ಪರದೇಶಗಳಲ್ಲಿಯ ಚಿತ್ರ ನಿರ್ಮಾಣದ ಕಲೆಯನ್ನು ಕಣ್ಣಾರೆ ಕಂಡು ಹಿಂದುಸ್ಥಾನದಲ್ಲಿಯೂ ಅಂತಹ ಉತ್ತಮ ಚಿತ್ರಗಳನ್ನು ತಯಾರಿಸಬೇಕೆಂಬ ಉತ್ಕಟೇಚ್ಛೆಯಿಂದ ಮುಂಬೈ ಟಾಕೀಸ್ ಲಿ. ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಹರಿಜನ ಸಮಸ್ಯೆಯನ್ನು ಚಿತ್ರಿಸುವ ಅಛೂತಕನ್ಯಾ, ರಾಷ್ಟ್ರಪ್ರೇಮ ಬಿಂಬಿಸುವ ಜನ್ಮಭೂಮಿ, ಆಝಾದ, ಸಾಮಾಜಿಕ ಜೀವನದ ಚಿತ್ರವನ್ನು ಚಿತ್ರಿಸುವ 'ಕಂಗನ್', 'ಬಂಧನ', 'ಝೂಲಾ', 'ಇಜ್ಜತ್', ಈ ಸಂಸ್ಥೆಯ ಉತ್ತಮ ಚಿತ್ರಗಳು. 'ಕಿಸ್ಮತ್' ಚಿತ್ರವು ಒಳ್ಳೆಯ ಕಥಾನಕದಿಂದ ಕೂಡಿದ್ದರೂ ದಿಗ್ದರ್ಶಕರ ನಿರೀಕ್ಷೆಯಂತೆ ಸುಪರಿಣಾಮವಾಗದುದೇ ಹೆಚ್ಚು. ಅಶೋಕಕುಮಾರ, ದೇವಿಕಾರಾಣಿ, ಸ್ನೇಹಪ್ರಭಾ ಪ್ರಧಾನ, ಲೀಲಾ ಚಿಟ್ನಿಸ್, ಶಾಂತಾ ಆಪ್ಟೆ ಮೊದಲಾದ ನಟನಟಿಯರು ಈ ಸಂಸ್ಥೆಯ ಚಿತ್ರಗಳಲ್ಲಿ ಅಭಿನಯಿಸಿರುವರು. ಶ್ರೀ. ಎನ್. ಆರ್. ಆಚಾರ್ಯ ಮೊದಲಾದವರು ಈ ಸಂಸ್ಥೆಯ ಚಿತ್ರಗಳನ್ನು ದಿಗ್ದರ್ಶಿಸಿದ್ದಾರೆ.

ಮಿನೆರ್ವಾ ಮುವೀಟೋನಿನ 'ಪುಕಾರ್' ಜಹಾಂಗೀರನ ನ್ಯಾಯಪ್ರಿಯತೆಯನ್ನು ಚಿತ್ರಿಸುವ ಐತಿಹಾಸಿಕ ಚಿತ್ರಪಟ. ಐತಿಹಾಸಿಕ ಸನ್ನಿವೇಶಗಳಿಗೆ ವ್ಯತ್ಯಯ ಬಾರದಂತೆ ಚಿತ್ರಿಸಲಾಗಿದೆ. ಚಂದ್ರಮೋಹನ್, ನಾಸೀಂ ಸೋಹ್ರಾಬರು ಈ ಚಿತ್ರದಲ್ಲಿ ಅಭಿನಯಿಸಿದ್ದಾರೆ ಇವರ ಮತ್ತೊಂದು ಚಿತ್ರ 'ಸಿಕಂದರ' ಐತಿಹಾಸಿಕಚಿತ್ರ ಉತ್ತಮವಾಗಿ ಚಿತ್ರಿತವಾಗಿದೆ. ಇದರಲ್ಲಿ ಪೃಥ್ವಿರಾಜರ ಅಭಿನಯ ಅತ್ಯ



ಕೆ. ಎಲ್. ಸಹಗಲ



ಜಮುನಾ



ಚಂದ್ರಮೋಹನ

ದ್ಭುತವಾಗಿದೆ. ರಣಜಿತ ಫಿಲ್ಮ್ ಕಂಪನಿಯೂ 'ದೇಶದಾಸಿ' ಮೊದಲಾದ ಉತ್ತಮ ಚಿತ್ರಗಳನ್ನು ತಯಾರಿಸಿದೆ. ಪ್ರಾಚೀನ ಕಂಪನಿಗಳಲ್ಲಿ ಮದನ್ ಥಿಯೇಟರ್ಸ, ಕೊಲ್ಹಾಪುರ ಸಿನೆಟೋನ, ಪಾಯೋನಿಯರ್ ಫಿಲ್ಮ್ಸ್, ಇಂಪೀರಿಯಲ್ ಫಿಲ್ಮ್ಸ್, ದಿಗ್ವೀರ ಸಿನೇಟೋನ್, ಅಂಬಿಕಾ ಮುವಿಟೋನ್, ಈಸ್ಟರ್ನ ಆರ್ಟ್ಸ ಪ್ರೊಡಕ್ಶನ್ಸ್, ಸಾಗರ ಫಿಲ್ಮ್ ಕಂಪನಿ, ವಾಡಿಯಾ ಮುವಿಟೋನ್, ಹಂಸಾಪಿಕ್ಚರ್ಸ ಮೊದಲಾದ ಸಂಸ್ಥೆಗಳಾದರೂ ಕೆಲ ಉತ್ತಮ ಚಿತ್ರಗಳನ್ನು ತಯಾರಿಸಿವೆ. ವಾಡಿಯಾ ಮುವಿಟೋನ್ ಸಾಮಾನ್ಯವಾಗಿ ಸ್ಟಂಟ್ (ಅತ್ಯದ್ಭುತ ಸಂಗತಿಗಳನ್ನು ಪ್ರದರ್ಶಿಸುವ) ಚಿತ್ರಗಳನ್ನೇ ಹೆಚ್ಚಾಗಿ ತಯಾರಿಸುತ್ತ ಬಂದಿದೆ.

ಇತ್ತೀಚೆಗೆ ಪ್ರಾರಂಭವಾದ ಚಲಚ್ಚಿತ್ರ ನಿರ್ಮಾಣ ಸಂಸ್ಥೆಗಳಲ್ಲಿ ರಾಜಕಮಲ ಚಿತ್ರಮಂದಿರ, ಫಿಲ್ಮಿಸ್ತಾನ, ಐ. ಯನ್. ಏ. ಪಿಕ್ಚರ್ಸ, ಕರ್ದಾರ ಪ್ರೊಡಕ್ಶನ್ಸ್, ಹಿಂದುಸ್ತಾನ ಚಿತ್ರ, ಶಾಂತಿ ಪಿಕ್ಚರ್ಸ ಮೊದಲಾದ ಕೆಲ ಸಂಸ್ಥೆಗಳು ಉತ್ತಮ ಚಿತ್ರಗಳನ್ನು ತಯಾರಿಸಿವೆ.

ರಾಜಕಮಲ ಚಿತ್ರಮಂದಿರದ ಪರ್ವತಪೆ ಅಪನಾ ಡೇರಾ, ಡಾ. ಕೋಟ್ನೀಸ, ಶಾಕುಂತಲ, ರಾಮ ಜೋಶಿ, ಅಪ್ನಾ ದೇಶ್ ಮೊದಲಾದವುಗಳು ಉತ್ತಮ ಚಿತ್ರಗಳು. ಹಿಂದುಸ್ತಾನ-ಚೀನಗಳಲ್ಲಿ ಬಾಂಧವ್ಯವುಂಟುಮಾಡಿದ ಡಾ॰ ಕೊಟ್ನೀಸರ ಜೀವನಚಿತ್ರವನ್ನು 'ಡಾ. ಕೋಟ್ನಿಸ್' ಎಂಬ ಚಿತ್ರದಲ್ಲಿ ತೋರಿಸಲಾಗಿದೆ. ಶಾಕುಂತಲ ಪೌರಾಣಿಕ ಚಿತ್ರವಾದರೂ ಮಹಿಳೆಯರ ಧೈರ್ಯವನ್ನು ತೋರಿಸುವ ಪದಕ್ಕಾಗಿ ಶಕುಂತಲೆಯನ್ನು ಆಧುನಿಕ ಯುವತಿಯಂತೆ ಚಿತ್ರಿಸಲಾಗಿದೆ. 'ರಾಮಜೋಶಿ' ಎಂಬ ಚಿತ್ರದಲ್ಲಿ ಕಲಾವಿದನ ಸುಂದರ ಜೀವನವನ್ನು ಚಿತ್ರಿಸಲಾಗಿದೆ. 'ಅಪ್ನಾದೇಶ' ಎಂಬ ಚಿತ್ರದಲ್ಲಿ ಕಳ್ಳ ಪೇಟೆಗರ ದೇಶದ್ರೋಹವನ್ನು ತೋರಿಸಲಾಗಿದೆ. 'ಬನಬಾಸಿ' ಇವರ ಉತ್ತಮ ಸಾಮಾಜಿಕ ಚಿತ್ರಗಳಲ್ಲೊಂದಾಗಿದೆ. ಸಾಧಾರಣವಾಗಿ ಎಲ್ಲ ಚಿತ್ರಗಳನ್ನು ಶಾಂತಾರಾಮರೇ ದಿಗ್ದರ್ಶಿಸಿದ್ದಾರೆ. 'ಬನಬಾಸಿ' ಎಂಬ ಚಿತ್ರವನ್ನು ಶ್ರೀ. ಚಂದ್ರಶೇಖರ ಇವರು ದಿಗ್ದರ್ಶಿಸಿದ್ದಾರೆ. ಜಯಶ್ರೀ, ಚಂದ್ರಮೋಹನ, ಮನಮೋಹನ ಕೃಷ್ಣಾ, ಹಂಸಾ, ಪರಶುರಾಮ, ದುಹೀಪಾಲ, ಶೋಭಾರಾಣಿ, ಪುಷ್ಪಾ ಹಂಸ (ನೂತನ ತಾರೆ), ಉಮೇಶ ಶರ್ಮ ಮೊದಲಾದ ನಟನಟಿಯರೂ ಈ ಸಂಸ್ಥೆಯ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

ಫಿಲ್ಮಿಸ್ಥಾನದವರು ನಿರ್ಮಿಸಿದ ಚಿತ್ರಗಳಲ್ಲಿ 'ಸಿಂಧೂರ' ಒಂದು ಮಾತ್ರ ಉತ್ತಮ ಸಾಮಾಜಿಕ ಚಿತ್ರ. ಅದರ ದಿಗ್ದರ್ಶಕ ಕಿಶೋರ ಶಾಹು. ಅದರಲ್ಲಿ ವಿಧವಾವಿವಾಹ ಸಮಸ್ಯೆಯನ್ನು ಉತ್ತಮವಾಗಿ ಚಿತ್ರಿಸಲಾಗಿದೆ. ಶಾಮೀಮ, ಕಿಶೋರ ಶಾಹೂರವರ ಅಭಿನಯ ಈ ಚಿತ್ರದಲ್ಲಿ ಮೆಚ್ಚಿಗೆಯದಾಗಿದೆ. ಐ. ಯನ್. ಏ. ಪಿಕ್ಚರ್ಸಿನ ಮೊದಲನೆಯ ಚಿತ್ರ 'ಸ್ವಯಂಸಿದ್ಧ', ಈಗ ರಂಗಕ್ಕೆ ಬಂದಿದೆ. ಸುಶಿಕ್ಷಿತ-ಸುಸಂಸ್ಕೃತ ಹಿಂದು ಮಹಿಳೆ ಎಂತಹ ಅದ್ಭುತ ಕಾರ್ಯವನ್ನು ಸಾಧಿಸಬಲ್ಲಳೆಂಬುದನ್ನು ಇದರಲ್ಲಿ ತೋರಿಸಲಾಗಿದೆ. ಕರ್ದಾರ ಪ್ರೊಡಕ್ಶನ್ಸಿಯವರ 'ದರ್ದ', 'ದಿಲ್ಲಗಿ' ಮೊದಲಾದ ಕೆಲ ಚಿತ್ರಗಳು ಮುಸ್ಲಿಂ ಸಮಾಜದ ಚಿತ್ರಗಳನ್ನೊಳಗೊಂಡಿವೆ ಹಿಂದುಸ್ತಾನ ಚಿತ್ರದ 'ಸಾವನ ಆಯಾರೆ' ಚಿತ್ರವೂ ಶಾಂತಿ ಪಿಕ್ಚರ್ಸಿನವರ 'ಗೋಪೀನಾಥ'ವೂ ಈಗ ರಂಗಕ್ಕೆ ಬಂದಿವೆ. ಎರಡೂ ಉತ್ತಮ ಚಿತ್ರಗಳೆಂದು ಹೇಳಲಾಗುತ್ತಿದೆ.

## ಭಾಷಾಭೇದ ಮತ್ತು ಪ್ರಸಾರವ್ಯಾಪ್ತಿ

ಹಿಂದೀ ಭಾಷೆಯ ಚಿತ್ರಗಳು ದೇಶದ ಎಲ್ಲ ಭಾಗಗಳಲ್ಲಿ ಸಾಮಾನ್ಯವಾಗಿ ಪ್ರದರ್ಶಿಸಲ್ಪಡುತ್ತವೆ. ಆದರೆ ಬಂಗಾಲಿ, ಮರಾಠಿ, ತೆಲಗು, ಕನ್ನಡ, ಮಲೆಯಾಳಿ, ಆಸಾಮಿ ಭಾಷೆಗಳಲ್ಲಿ ತಯಾರಾದ ಚಿತ್ರಗಳ ಪ್ರದರ್ಶನದ ಕ್ಷೇತ್ರ ಮರ್ಯಾದಿತವಿರುವದರಿಂದ ಹೆಚ್ಚು ತಯಾರಾಗಿಲ್ಲ. ಉತ್ತರ ಭಾರತದಲ್ಲಿ ಕೆಲ ಸ್ಥಳಗಳಲ್ಲಿ ಬಂಗಾಲಿ ಚಿತ್ರಗಳು ಪ್ರದರ್ಶನಕ್ಕೆ ಬರುತ್ತವೆ. ಆದರೆ ದ. ಭಾರತದಲ್ಲಿ ಅವು ಪ್ರದರ್ಶನಕ್ಕೆ ಬರುವದು ಸಾಧ್ಯವಿಲ್ಲ. ತಮಿಳು, ತೆಲುಗು ಚಿತ್ರಗಳು ಉತ್ತರ ಭಾರತಕ್ಕೆ ಪ್ರದರ್ಶನಕ್ಕೆ ಹೋಗಲಾರವು. ಈ ಭಾಷಾ ಚಿತ್ರಗಳಲ್ಲಿ ಸಹ ಯಾವ ಬಗೆಯ ವಿಶೇಷತೆಯೂ ಕಂಡುಬರುವದಿಲ್ಲ. ಬಂಗಾಲಿ, ಮರಾಠಿ ಚಿತ್ರಗಳೇ ಅಭಿನಯ, ದಿಗ್ದರ್ಶನ, ಕಥೆಗಳ ದೃಷ್ಟಿಯಿಂದ ಮೇಲ್ಮಟ್ಟದವೆಂದು ಹೇಳಬಹುದು. ತಮಿಳು, ತೆಲುಗು ಚಿತ್ರಗಳಲ್ಲಿ ಸಂಗೀತ ಮತ್ತು ಸಾಧಾರಣವಾಗಿ ಅಭಿನಯ ಇವುಗಳ ಹೊರತಾಗಿ ಯಾವದೇ ರಸೋತ್ಕರ್ಷದ ಗುಣವಿರುವದು ತೋರಿಬರುವದಿಲ್ಲ. ಕನ್ನಡದಲ್ಲಿಯಂತೂ ವರುಷಕ್ಕೆ ಎರಡು ಮೂರು ಚಿತ್ರಗಳು ತಯಾರಾಗುತ್ತವೆ. ಈ ವರೆಗೆ ತಯಾರಾದ ಚಿತ್ರಗಳಲ್ಲಿ 'ಜೀವನನಾಟಕ' 'ವಾಣಿ' 'ಹರಿಶ್ಚಂದ್ರ' 'ಭಕ್ತಕಬೀರ' ತಕ್ಕ ಮಟ್ಟಿಗಿವೆ. ಹಳೆಯ

ಚಿತ್ರಗಳಲ್ಲಿ, 'ಸಂಸಾರ ನೌಕಾ', 'ಸದಾರಮೆ', 'ಮಾರ್ಕಂಡೇಯ' ಮೊದಲಾದವುಗಳು ಉತ್ತಮ ಚಿತ್ರಗಳು. ಈಗ ತಯಾರಾದ 'ಭಾರತಿ' 'ನಾಗಕನ್ನಿಕೆ' ತೆರೆಯ ಮೇಲೆ ಕಾಣಿಸಿಕೊಂಡಿವೆ.

### ಕಥಾವಸ್ತುವಿನ ಪ್ರಾಧಾನ್ಯ

ಈ ಎಲ್ಲ ಚಿತ್ರಗಳ ಅವಲೋಕನದಿಂದ ಕೆಳಗಿನ ಅಂಶಗಳನ್ನು ನಾವು ಇಲ್ಲಿ ನಿಗಮನಿಸಬಹುದು.

ಉತ್ತಮ ಚಿತ್ರಗಳಿಗೆ ಕಥೆಯೇ ಮುಖ್ಯ ಅಂಶವಾಗಿದೆ. ಉತ್ತಮವಾದ ಕಥೆಯಿದ್ದರೆ, ಆ ಚಿತ್ರವು ಯಶಸ್ವಿಯಾಗುವದರಲ್ಲಿ ಯಾವ ಸಂದೇಹವೂ ಇಲ್ಲ. ನಮ್ಮ ಚಿತ್ರನಿರ್ಮಾಪಕರು ಈ ಅಂಶವನ್ನು ಗಮನಿಸಬೇಕು. ಆದರೆ ಬಹುಸಂಖ್ಯೆಯ ಚಿತ್ರಗಳು ಇಂದು ಕೀಳು ದರ್ಜೆಯವಾಗಿವೆ. ಉತ್ತಮ ಕಥೆಗಳನ್ನು ಅವರು ಆಯ್ದುಕೊಳ್ಳದಿರುವದೇ ಇದಕ್ಕೆ ಮುಖ್ಯ ಕಾರಣವೆಂದು ಹೇಳಬಹುದು. ಈಗಿನ ಪ್ರತಿಯೊಂದು ಚಿತ್ರದಲ್ಲಿಯೂ **ಹಿಂದುಸ್ತಾನದ ಯಾವ ವಿಭಾಗದಲ್ಲಿಯೂ ಕಂಡುಬಾರದ ವಿಚಿತ್ರ ಪ್ರೇಮಜೀವನವನ್ನು** ಚಿತ್ರಿಸಲಾಗುತ್ತಿದೆ. ಯುವಕ-ಯುವತಿಯರು ಇಂತಹ ಚಿತ್ರಗಳನ್ನು ನೋಡುವದರಿಂದ ಅವರ ಮನದ ಮೇಲೆ ದುಷ್ಪರಿಣಾಮವಾಗುವದೆಂಬುದನ್ನು ನಮ್ಮ ಚಿತ್ರನಿರ್ಮಾಪಕರು ಗಮನಿಸುತ್ತಿರುವದಿಲ್ಲ. ಉತ್ತಮ ಬರೆಹಗಾರರ ಕಥೆ, ಕಾದಂಬರಿಗಳಿಂದ ಕಥೆಯನ್ನು ಆಯ್ದುಕೊಂಡರೆ ಚಿತ್ರವು ಯಶಸ್ವಿಯಾಗುವದೆಂಬುದಕ್ಕೆ ನ್ಯೂ ಥಿಯೇಟರ್ಸ ಚಿತ್ರಗಳನ್ನು ಉದಾಹರಿಸಬಹುದು. ಈ ಸಂಸ್ಥೆಯವರು ತಮ್ಮ ಅನೇಕ ಚಿತ್ರಗಳ ಕಥೆಗಳನ್ನು ಪ್ರಖ್ಯಾತ ಬರಹಗಾರರ ಲೇಖನಗಳಿಂದ ಆಯ್ದುಕೊಂಡಿದ್ದಾರೆ. ಹೀಗಾಗಿ ಅವರ ಚಿತ್ರಗಳಲ್ಲಿ ಸತ್ಯವಾದ ಸಮಸ್ಯೆ ಮತ್ತು ಅದರ ಪರಿಹಾರೋಪಾಯ, ಪವಿತ್ರವಾದ ಸಂದೇಶ ಇವು ಪ್ರೇಕ್ಷಕರಿಗೆ ದೊರೆಯುತ್ತವೆ. ಅದೇ ರಸಾಸ್ವಾದದ ಸಾರವಲ್ಲವೆ?

ಕಥೆಗಳನ್ನು ಚಿತ್ರಗಳಿಗೆ ಹೊಂದಿಸಿಕೊಳ್ಳುವಾಗ ಅಲ್ಪಸ್ವಲ್ಪ ಬದಲಾವಣೆ ಮಾಡಬಹುದು. ಆದರೆ ಈ ಬದಲಾವಣೆಯಿಂದ ಜನತೆಗೆ ಒಂದು ಉತ್ತಮ ದೃಷ್ಟಿ ದೊರೆಯುತ್ತಿರಬೇಕು; ಇಲ್ಲವೆ ನಾಯಕ ನಾಯಿಕೆಯರ ಪಾತ್ರದ ಹಿರಿಮೆ ಹೆಚ್ಚುತ್ತಿರಬೇಕು. ಈ ಅಂಶವನ್ನೂ ನಮ್ಮ ಚಿತ್ರ ನಿರ್ಮಾಪಕರು ಅರಿತಿಲ್ಲ. ಪ್ರಕಾಶ ಚಿತ್ರ ಸಂಸ್ಥೆಯ 'ರಾಮಬಾಣ' ಚಿತ್ರದಲ್ಲಿ ಮಾಡಿಕೊಂಡ ಬದಲಾವಣೆಗಳಿಂದ ನಾಯಕ ನಾಯಿಕೆಯರ ಹಿರಿಮೆ ಹೆಚ್ಚುವದಿಲ್ಲ; ಜನತೆಗೆ ಯಾವ ಉತ್ತಮ ಸಂದೇಶವೂ ದೊರೆಯುವದಿಲ್ಲ. ಸೀತಾಹರಣದ ನಂತರ ಭೆಟ್ಟಿಯಾಗುವ ಶಬರಿಯು, ಪಂಚವಟಿಗೇ ಆಗಮಿಸಿ ರಾಮ, ಲಕ್ಷ್ಮಣ, ಸೀತೆಯರನ್ನು ಕಾಣುವದು; ವಿದ್ಯುಜ್ಜೀವನನ್ನು ಮದುವೆಯಾಗಿದ್ದ ಶೂರ್ಪನಖಿಯನ್ನು ರಾವಣನ ದರ್ಬಾರಿನಲ್ಲಿ ತಂದು ಅವಳ ಸ್ವಯಂವರ ನಡೆಯಿತೆಂದೂ ಅವಳು ಅವಿವಾಹಿತಳಾಗಿ ಉಳಿಯಲು ನಿರ್ಧರಿಸಿದಳೆಂದೂ ಮಾರ್ಪಾಟು ಮಾಡುವದರಿಂದಯಾವ ಉದ್ದೇಶವೂ ಸಾಧಿಸಲಾರದು. ರಾಜಕಮಲ ಚಿತ್ರಮಂದಿರದ 'ಶಾಕುಂತಲ'ದಲ್ಲಿ ಮಾಡಿಕೊಂಡ ಬದಲಾವಣೆಗಳಿಂದಲೂ ಕೆಲ ದೋಷಗಳುಂಟಾಗಿವೆ. ಕಣ್ವರು ಬಾಲಬ್ರಹ್ಮಚಾರಿಗಳು; ಋಷಿಪುಂಗವರು; ಅಂತಹರ ಆಶ್ರಮದಲ್ಲಿ ಸ್ತ್ರೀಪರಿವಾರ ಮತ್ತು ಅವರಲ್ಲಿಯ ಕಾಮಚೇಷ್ಟೆಗಳನ್ನು ಚಿತ್ರಿಸಿ ಆಶ್ರಮದ ಚಿತ್ರವನ್ನು ವಿರೂಪಗೊಳಿಸಲಾಗಿದೆ. ಮಹಿಳೆಯರಲ್ಲಿರುವ ಧೈರ್ಯವನ್ನು ತೋರಿಸುವ ದೃಷ್ಟಿಯಿಂದ ಶಕುಂತಲೆಯನ್ನು ಆಧುನಿಕ ಯುವತಿಯಾಗಿ ಮಾಡಿತೋರಿಸಿದುದು ಒಂದು ದೃಷ್ಟಿಯಿಂದ ಉತ್ತಮವಾಗಿದೆಯಾದರೂ ಹಿಂದೀ ಸಂಸ್ಕೃತಿಗೆ ವಿರೋಧ ಬರದಂತೆ ತೋರಿಸುವದು ಕರ್ತವ್ಯವಾಗಿತ್ತು.

ಕಥೆಗಳನ್ನು ಸಂಭಾಷಣೆಯಲ್ಲಿ ಪರಿವರ್ತಿಸುವದೂ ಚತುರತೆಯ ಕಾರ್ಯವಾಗಿದೆ. ಸಂಭಾಷಣೆಯಲ್ಲಿ ಚಿತ್ರದ ಹಿರಿಮೆ ಅಡಕವಾಗುವದೆಂಬುದನ್ನು ಚಿತ್ರ ನಿರ್ಮಾಪಕರು ಮರೆಯಬಾರದು. ಸಂಭಾಷಣೆಯಲ್ಲಿ ಚಮತ್ಕೃತಿಯಿಲ್ಲದಿದ್ದರೆ ಕಥೆಯಲ್ಲಿ ವೇಗವಿದ್ದರೂ, ಉತ್ತಮ ಕಥೆಯಿದ್ದರೂ ಅಯಶಸ್ವಿಯಾಗುವ ಸಂಭವ ಹೆಚ್ಚಿರುತ್ತದೆ.

### ದಿಗ್ದರ್ಶನದ ಮಹತ್ವ

ಕಥೆಗಳ ಅನಂತರ ದಿಗ್ದರ್ಶನ ಚಿತ್ರದ ಯಶಸ್ಸಿಗೆ ಮತ್ತೊಂದು ಮುಖ್ಯ ಅಂಗವಾಗಿದೆ. ನಟ-ನಟಿಯರ ಉತ್ತಮ ಅಭಿನಯದಿಂದಾಗುವ ಚಿತ್ರದ ಯಶಸ್ಸಿಗೆ ಬಹುಮಟ್ಟಿಗೆ ದಿಗ್ದರ್ಶಕನೇ ಹೊಣೆಯಿರುವನು. ನ್ಯೂ ಥಿಯೇಟರ್ಸ ಚಿತ್ರಗಳಲ್ಲಿ ಉತ್ತಮ ಅಭಿನಯ ತೋರಿದ ಸೈಗಲ್ ಇನ್ನಿತರ ಸಂಸ್ಥೆಯ ಚಿತ್ರಗಳಲ್ಲಿ ತೀರ ಸಪ್ಪೆಯಾಗಿದ್ದಾನೆ.

ದಿಗ್ದರ್ಶಕರು ಹೊಸ ಹೊಸ ಕಲಾತಂತ್ರಗಳನ್ನು ಅಭ್ಯಸಿಸಿ ತಮ್ಮ ಚಿತ್ರನಿರ್ಮಾಣದಲ್ಲಿ ಪ್ರಯೋಗಿಸಬೇಕು. ನಟ-ನಟಿಯರನ್ನು ಆರಿಸುವಾಗ ಪಾತ್ರಕ್ಕೆ ಯೋಗ್ಯರಾದವರನ್ನು ಮತ್ತು ಸಾಧ್ಯವಿದ್ದಷ್ಟು ಹೊಸಬರನ್ನು ಆಯ್ದುಕೊಳ್ಳಬೇಕು. ನಟ-ನಟಿಯರ ಆಯ್ಕೆಯಲ್ಲಿ ಒಂದು ಪದ್ಧತಿಯನ್ನು ಅನುಸರಿಸಬೇಕು. ವಿದೇಶಿ ಚಿತ್ರಗಳನ್ನು ಯಾವ ರೀತಿಯಲ್ಲೂ ಅನುಸರಿಸಬಾರದು. ಪ್ರತಿಭಾವಂತ ನಟ-ನಟಿಯರಿಗೆ ಅವರ ಅಭಿನಯದಲ್ಲಿ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಲು ಅವಕಾಶ ಕೊಡಬೇಕು. ಒಟ್ಟಿನಲ್ಲಿ ದಿಗ್ದರ್ಶಕರು ಚಲಚ್ಚಿತ್ರಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿಯೂ ಪಾರಂಗತರಾಗಿರಬೇಕು. ಆದರೆ ನಮ್ಮ ಚಲಚ್ಚಿತ್ರ ರಂಗದಲ್ಲಿ ತೀರ ಕೆಲ ದಿಗ್ದರ್ಶಕರು ಮಾತ್ರ ಮೇಲ್ಮಟ್ಟದ ಚಿತ್ರಗಳನ್ನು ತಯಾರಿಸುತ್ತಿದ್ದಾರೆ. ನ್ಯೂ ಥಿಯೇಟರ್ಸ ದಿಗ್ದರ್ಶಕರ ಅನಂತರ ಹಿಂದುಸ್ತಾನ ಚಿತ್ರದ ಚಿತ್ರಗಳನ್ನು ದಿಗ್ದರ್ಶಿಸಿದ ಕಿಶೋರ ಸಾಹು, 'ಆಗ' ಚಿತ್ರವನ್ನು ದಿಗ್ದರ್ಶಿಸಿದ ರಾಜ ಕಪೂರ, 'ಛೋಟಾ ಭಾಯಿ' ಎಂಬ ಚಿತ್ರವನ್ನು ದಿಗ್ದರ್ಶಿಸಿದ ಕಾರ್ತಿಕ ಚಟರ್ಜಿ, ರಾಜಕಮಲ ಚಿತ್ರಮಂದಿರದ ಚಿತ್ರಗಳನ್ನು ದಿಗ್ದರ್ಶಿಸಿದ ಶ್ರೀ ವಿ. ಶಾಂತಾರಾಮ ಇವರು ಮೇಲ್ತರಗತಿಯ ದಿಗ್ದರ್ಶಕರಾಗಬಹುದು.

### ಅಭಿನೇತೃವರ್ಗ

ತಾರಾಗಣದ ಬಗ್ಗೆ ಹೇಳಬೇಕಾದರೆ ನಮ್ಮಲ್ಲಿ ಮೇಲ್ತರಗತಿಯ ದಿಗ್ದರ್ಶಕರು ಇಲ್ಲದಿರುವದರಿಂದ ನಟನಟಿಯರ ಪ್ರತಿಭೆಯನ್ನು ಅಳೆಯುವದು ಸರಿಯಾಗಲಾರದು. ದಿವಂಗತ ಸೈಗಲ್, ಬರುವಾ, ಅಶೀತಬರನ, ದಿವಂಗತ ಚಂದ್ರಮೋಹನ, ಕಿಶೋರಸಾಹು, ಅಶೋಕಕುಮಾರ, ದೇವ ಆನಂದ. ಜಮುನಾ, ಕಾನನಬಾಲಾ, ಭಾರತಿದೇವಿ, ಮೊಲಿನಾ, ಕೆ. ಸಿ. ದೇ. ಸ್ನೇಹಪ್ರಭಾ, ಶಾಂತಾಆಪ್ಟೆ ಲೀಲಾಚಿಟ್ನೀಸ, ಹಂಸವಾಡಕರ, ಸುರೈಯ್ಯಾ ಮೊದಲಾದ ಕೆಲ ತಾರೆಯರು ಉತ್ತಮ ಅಭಿನಯ ತೋರಿದ್ದಾರೆ. ಒಬ್ಬಳೇ ತಾರೆ ಹಲವಾರು ಚಿತ್ರಗಳಲ್ಲಿ ಒಮ್ಮೆಲೇ ಅಭಿನಯಿಸುವುದರಿಂದ ಎಲ್ಲ ಚಿತ್ರಗಳೂ ಯಶಸ್ವಿಯಾಗಲಾರವು. ಸುರೈಯ್ಯಾ ಇಂದು ಜನಪ್ರಿಯ ತಾರೆಯಾಗಿದ್ದಾಳೆ. ಆದರೆ ಅವಳು ಒಮ್ಮೆಲೇ ಹಲವಾರು

ಚಿತ್ರಗಳಲ್ಲಿ ಇಂದು ಅಭಿನಯಿಸಲು ಪ್ರಾರಂಭಿಸಿದ್ದಾಳೆ. ಹೀಗಾಗಿ ಅವಳ ಕೆಲವು ಚಿತ್ರಗಳಲ್ಲಿ ಉತ್ತಮ ಅಭಿನಯ ತೋರಿಬಂದಿಲ್ಲ. ತಾರೆಯರು ಪಾತ್ರದ ಆಳವನ್ನು ಅರಿತು ಅಭ್ಯಸಿಸಿ ಅದರಲ್ಲಿ ತಲ್ಲೀನರಾಗಿ ವರ್ತಿಸಬೇಕು.

ಚಲಚಿತ್ರಗಳಲ್ಲಿಯ ಸಂಗೀತದ ಬಗ್ಗೆ ಹೇಳಬೇಕಾದರೆ ಪರಸ್ಪರ ಅನುಕರಣೆಯೇ ಹೆಚ್ಚಾಗಿದೆ. ಒಂದು ಚಿತ್ರದಲ್ಲಿ ಜನಪ್ರಿಯವಾದ ಗೀತೆಗಳ ಮಟ್ಟನ್ನು ಮತ್ತೊಂದು ಚಿತ್ರದವರೂ ಎತ್ತಿಕೊಳ್ಳುತ್ತಾರೆ. ನಿಜವಾಗಿ ನೋಡಿದರೆ ಚಲಚಿತ್ರಗಳಿಗೆ ಗೀತಗಳ ಅವಶ್ಯಕತೆಯೇ ಇಲ್ಲ. ಆದರೆ ನಾಟ್ಯಕಲೆಯಿಂದ ಜನತೆಯನ್ನು ಮೆಚ್ಚಿಸಲು ಸಾಧ್ಯವಾಗದ ನಿರ್ಮಾಪಕರು ಗೀತೆಗಳನ್ನು ಆಶ್ರಯಿಸಿದ್ದಾರೆಂದು ಹೇಳಬಹುದು. ತಾರೆಯರಿಗೆ ಸಂಗೀತವು ಇಂದು ಒಂದು ಅರ್ಹತೆಯನ್ನು, ಹೆಚ್ಚಳವನ್ನು ತಂದು ಕೊಡುತ್ತಿದೆ. ಅದರಂತೆಯೇ ಚಲಚಿತ್ರಗಳಲ್ಲಿ ಕಂಡು ಬರುವ ನೃತ್ಯವಾದರೂ ಮೇಲ್ಪಟ್ಟದ್ದಲ್ಲ. ಸಾಮಾನ್ಯವಾಗಿ ಎಲ್ಲ ಚಿತ್ರಗಳಲ್ಲಿಯೂ ಅನಾವಶ್ಯಕವಾಗಿ ನೃತ್ಯಗಳನ್ನು ತುಂಬಲಾಗುತ್ತದೆ. ಧ್ವನಿ ಮತ್ತು ಸನ್ನಿವೇಶ ರಚನೆಗಳಲ್ಲಿಯೂ ತುಂಬ ಸುಧಾರಣೆಯಾಗಬೇಕು.

ನಮ್ಮ ಚಲಚಿತ್ರದ ಉದ್ದಿಮೆಯ ಅಭಿವೃದ್ಧಿಯಾಗಬೇಕಾದರೆ ನಮ್ಮ ಚಿತ್ರನಿರ್ಮಾಪಕರು– ದಿಗ್ದರ್ಶಕರು ಹಿಂದೀ ಸಂಸ್ಕೃತಿಗೆ ಅನುಗುಣವಾದ ಕಥೆಗಳನ್ನು ಆರಿಸಿಕೊಂಡು ಹೊಸಹೊಸ ನಟವರ್ಗದಿಂದ ಚಿತ್ರವನ್ನು ತಯಾರಿಸಬೇಕು. ಪಾಶ್ಚಾತ್ಯ ಚಿತ್ರಗಳ ಅನುಕರಣವನ್ನು ವಿಶೇಷತಃ ಪ್ರೇಮ ಪ್ರದರ್ಶನದ ವಿಷಯದಲ್ಲಿಯಾದರೂ ಬಿಟ್ಟುಕೊಡಬೇಕು. ವರ್ಣಚಿತ್ರಗಳನ್ನು ತಯಾರಿಸಲು ಈ ವರೆಗೆ ಯಾವ ನಿರ್ಮಾಪಕರೂ ಮುಂದೆ ಬಂದಿಲ್ಲ. ಆ ಕೊರತೆಯನ್ನು ನೀಗಿಸಲು ನಮ್ಮ ಚಿತ್ರ ನಿರ್ಮಾಪಕರು ಮುಂದೆ ಬರಬೇಕು. ಆಗ ನಮ್ಮ ಚಿತ್ರೋದ್ಯಮದ ಏಳ್ಗೆಯಾದೀತು.

——

## ಸ್ವತಂತ್ರ ಭಾರತದಿ

ಸ್ವಾತಂತ್ರ್ಯಭಾಸ್ಕರನು ಭಾರತದಿ ಉದಿಸಿಯೂ
ಜಾತಿ, ಮತ, ಪಂಥಗಳ ಮೋಡ ಮುಸುಕಿಹುದು!
ಮೆರೆಯುತಿದೆ ಎಲ್ಲೆಲ್ಲು ಅಧಿಕಾರ ಲಾಲಸೆಯು
ಬೆಳೆದಿಹುದು ಕೈಯಾಸೆ ಅಧಿಕಾರಿ ವರ್ಗದಲಿ.
ಕಾಳಸಂತೆಯ ಕಣಜ ಕೊಬ್ಬುತಿಹುದೊಂದೆಡೆಗೆ
ಊಳಿಗನ ಧಮನಿಯೊಳಗಣ ರಕುತ ಬತ್ತಿಹುದು!
ಉರುಬುತಿಹುದೊಂದೆಡೆಗೆ ಸಿರಿತನದ ಮದನೆಣವು
ನರಳುವುದು ಕಾರ್ಮಿಕನ ಎಲುವು ಹಂದರದುಸಿರು!
ಬಿಳಿ ಜನರು ಬಿತ್ತಿದಾ ಜಾತಿ ಭೂತದ ಬೆಳೆಯು
ಬಲಿತುನಿಂತಿಹುದಗೋ ಭಾರತದ ಎಲ್ಲೆಡೆಗು.
ಸ್ವಾತಂತ್ರ್ಯಭಾಸ್ಕರನು ಉದಿಸಿಯೂ ಭಾರತದಿ –
ನೀತಿನೆಲೆ, ಸತ್ಯಪಥ, ಮಾನವತೆ ಅಡಗಿಹವು.

— ರಾಘವೇಂದ್ರ ಇಬ್ರಾಹಿಮಪುರ








# ನಮ್ಮ ಅನ್ನದ ಸಮಸ್ಯೆ

ಹರಟೆಗಾರರು : ಶ್ರೀ. ವಿಜಯ

ಇತ್ತೀಚಿತ್ತಲಾಗಿ ಭಾರತದ ಮೂಲೆಮೂಲೆಗಳಲ್ಲೆಲ್ಲ ಪ್ರತಿಧ್ವನಿ ಸುತ್ತಿರುವ ಗುಲ್ಲೆಂದರೆ " ಹೆಚ್ಚು ಅನ್ನ ಬೆಳೆಯಿರಿ!" ಎಂಬುದು. ಈ ಗುಲ್ಲಿನಲ್ಲಿಯೇ "೧೯೫೨ ರೊಳಗೆ ಅನ್ನದ ಸಮಸ್ಯೆಯನ್ನು ಬಗೆ ಹರಿಸಿಬಿಡುತ್ತೇವೆ" ಎಂಬ ಬೆದರಿಕೆಯ ಧ್ವನಿಯೂ ಕೇಳಿಬರುತ್ತದೆ. (ಶ್ರೀ ಶರತ್‌ಬಾಬುಗಳ ವಾಮಪಕ್ಷಗಳ ಸಂಘಟನೆ, "ಸುಭಾಸರು ಸದ್ಯದಲ್ಲಿಯೇ ಬರಬಹುದು'' ಎಂಬ ಆಹ್ವಾನ — ಇವು ಬೇರೆ) ೧೯೫೨ ರೊಳಗೆ ನಮ್ಮ ಅನ್ನಸಮಸ್ಯೆ ನೀಗಿಬಿಟ್ಟರೆ ಜೀವನವು ಎಷ್ಟು ನಿರಾಶಾಮಯವಾದೀತೆಂದು ನನಗೆ ಭೀತಿ. ಅಥವಾ ೧೯೫೨ ರೊಳಗೆ ಭಾರತೀಯರಿಗೆ ಅನ್ನದ ಅಗತ್ಯವೇ ಬೀಳದಂತೆ ನಮ್ಮ ಅಧಿಕಾರಿಗಳು ಮಾಡಬಹುದೇ ಎಂಬ ಸಂಶಯ. ಹೀಗೆ (೧೯೫೨ರೊಳಗೆ) ರಾಶಿರಾಶಿಯಾಗಿ ಬೀಳಬಹುದಾದ ಅನ್ನವನ್ನುಂಡು ಜೀವಿಗಳೆಲ್ಲ ತೃಪ್ತಿಯಿಂದಿರುವ ಚಿತ್ರವೂ ಅನ್ನದ ಅಗತ್ಯವೇ ಇಲ್ಲದೆ — ಅರ್ಥಾತ್ ಜೀವವೇ ಇಲ್ಲದೆ — ಬಿದ್ದಿರುವ ದೇಹಗಳ ಚಿತ್ರವೂ ಏಕಕಾಲಕ್ಕೆ ಮೂಡಿ ಜೀವ ತತ್ತರಿಸುತ್ತದೆ.

ದೇಶದ ತುಂಬೆಲ್ಲ ಹೆಚ್ಚು ಪೀಕು ದೊರಕಿಸಲು ಪ್ರಯೋಗಗಳು ನಡೆಯುತ್ತಿವೆ. ಆಹಾರ ಶಾಖೆಯವರು ಹೊಸಹೊಸ ಹಾದಿ ಹುಡುಕುತ್ತಿರುವಾಗ ಪ್ರಸ್ತುತ ಲೇಖಕನೇನೂ ಸಂಶೋಧನಾಶಕ್ತಿ ಇಲ್ಲದ ಪೆದ್ದನಂತೆ ಕುಳಿತುಕೊಳ್ಳಲಿಲ್ಲ. ಈತ(ಪ್ರಸ್ತುತ ಲೇಖಕ)ನು ರೇಶನ್ ಪದ್ಧತಿಗೂ ಹೆಚ್ಚು ಅನ್ನ ಬೆಳೆಯುವುದಕ್ಕೂ ಒಂದು ನವೀನ ಸಂಬಂಧ ಹುಡುಕಿದ್ದಾನೆ.

ರೇಶನ್ ಧಾನ್ಯದಲ್ಲಿ ಬೆರೆತಿರುವ ನೆಲ್ಲುಗಳನ್ನು ಕೂಡಿಸಿ ಈತನು ತನ್ನ (ಬಾಡಿಗೆಯ) ಮನೆಯ ಬಚ್ಚಲಲ್ಲಿ ಬಿತ್ತಿದನು. ಕೆಲವು ದಿವಸಗಳಲ್ಲಿ ಅವು ಮೊಳೆತುದನ್ನು ಕಂಡು ಹಿರಿಹಿರಿ ಹಿಗ್ಗಿದನು. ರೇಶನ್ ಧಾನ್ಯದೊಳಗೆ ಕೂಡಿರುವ ಮಣ್ಣುಕಲ್ಲುಗಳಲ್ಲಿ ಕಂಪೋಸ್ಟ್ ಮೇನ್ಯುರಿಗಿಂತ ಹೆಚ್ಚಿನ ಸತ್ವವಿದೆ ಎಂಬುದನ್ನು ತರ್ಕದಿಂದ ತಿಳಿದು ಅವನ್ನೊಯ್ದು ಆ ಮೊಳಕೆಗಳಿಗೆ ಹಾಕಿದನು. (ಕಟ್ಟಿಗೆಗೆ ತೆರಲು ಹಣವಿಲ್ಲದ ಮೂಲಕ) ತಣ್ಣೀರನ್ನೇ ಮೀಯುವ ಇವನ ಚಟದಿಂದಲೂ ಮನೆ ಹೊದಿಕೆಯ ಸೋರುವ ಶಕ್ತಿಯಿಂದಲೂ ಆ ಮೊಳಕೆಗಳು ಭರದಿಂದ ಬೆಳೆದವು; ಸಸಿಯಾದವು. ಆದರೆ ದುರ್ದೈವದಿಂದ ತೆನೆ ಬರಲು ಕೆಲವೇ ತಿಂಗಳು ಇರುವಾಗ ಈತನು (ಇಡೀ ವರ್ಷದ ಬಾಡಿಗೆ ಕೊಡದ ಮೂಲಕ) ಮನೆ ಬಿಡಬೇಕಾಯಿತು. ಆದ್ದರಿಂದ ಬಚ್ಚಲನ್ನೂ ಅಲ್ಲಿ ಹುಲುಸಾಗಿ ಬೆಳೆದ — ತಾನು ಸ್ವತಃ ಸಂಶೋಧನೆಯಿಂದ ಸಾಗು ಮಾಡಿದ — ಸಸಿಗಳನ್ನೂ ಬಿಟ್ಟುಹೋಗಬೇಕಾಯಿತು. ಸಸಿಗಳನ್ನು ಕಿತ್ತುಕೊಂಡು ಹೋಗಿ, ಬೇರೊಂದೆಡೆಗೆ ನೆಟ್ಟು, ಪೈರಿನ ಅಂದಾಜುಮಾಡಲು ಈತನಿಂದ ಸಾಧ್ಯವಾಗಲಿಲ್ಲ. ಆದರೆ ಈ ಬಗೆಯ ಬೇಸಾಯದಿಂದ ಪ್ರತಿಯೊಂದು ಕುಟುಂಬವೂ ವರ್ಷಕ್ಕೆ ಸರಾಸರಿ ಮೂರು ಹಿಡಿ ಧಾನ್ಯವನ್ನು ಸಹಜವಾಗಿ ಬೆಳೆಯಬಹುದೆಂದು ಎದೆ ತಟ್ಟಿ ಇವನು ಹೇಳುತ್ತಾನೆ.

ಎತ್ತು, ನೇಗಿಲು, ಬೇಲಿ - ಏನೂ ಬೇಕಾಗದ ಈ ಹೊಸ ಕ್ರಮುವನ್ನು ಕುರಿತು ಈತನು ವಿವರವಾಗಿ ಮಾನ್ಯ ಮಂತ್ರಿಗಳಿಗೆ ಬರೆದುಕೊಂಡನು. "ರೇಶನ್ ಧಾನ್ಯದೊಳಗಿನ ನೆಲ್ಲು ಮಣ್ಣು ಕಲ್ಲುಗಳಲ್ಲಿ ಇಂಥ ಅದ್ಭುತ ಶಕ್ತಿ ಇದೆಯೆಂದು ಹೇಳಿದರೆ ಯಾರೂ ನಂಬಲಿಕ್ಕಿಲ್ಲ. ಆದರೆ ಮಾನ್ಯರು **ರೇಶನದಲ್ಲಿಯ ನೆಲ್ಲು ಮಣ್ಣುಗಳ ಪ್ರಮಾಣವನ್ನು ಹೆಚ್ಚು ಮಾಡಿಸಿ** ಈ ಕ್ರಮುವು ಸಾರ್ವತ್ರಿಕವಾಗುವಂತೆ ಆಜ್ಞೆ ಹೊರಡಿಸಿದರೆ ೧೯೫೦ ರೊಳಗೆ ನಮ್ಮ ಅನ್ನಸಮಸ್ಯೆಯು ತಂತಾನೇ ಬಿಟ್ಟು ಹೋಗುವುದೆಂದು ನಂಬಿದ್ದೇನೆ.'' ಸರಕಾರದಿಂದ ಲೇಖೀ ಯಾವ ಉತ್ತರವೂ ಬರಲಿಲ್ಲವಾದರೂ ರೇಶನದಲ್ಲಿಯ ನೆಲ್ಲು ಮಣ್ಣುಗಳ ಪ್ರಮಾಣವು ಹೆಚ್ಚುತ್ತಿರುವುದನ್ನು ನೋಡಿದರೆ ಸರಕಾರವು ಈತನ ಬಿನ್ನಹವನ್ನು ಕಡೆಗಣಿಸಿಲ್ಲವೆಂದು ತೋರುತ್ತದೆ. (ನಾಡಿನ ಸಾಮಾನ್ಯ ವ್ಯಕ್ತಿಯೊಬ್ಬನ ಮಾತಿಗೂ ಬೆಲೆಕೊಡುವ ಈ ಆಡಳಿತೆಯು ನಿಜವಾದ ಡೆಮಾಕ್ರಸಿ ಅಲ್ಲವೆಂದು ಹೇಳುವವರಾರು?)

" ಅರವಿಂದ ಮಹರ್ಷಿಗಳನ್ನು ಅನ್ನ — ಯೋಗಗಳ ಖಾತೆಗೆ ಮಂತ್ರಿಗಳನ್ನಾಗಿ ಮಾಡಿದರೆ ಇಂದಿನ ಸಮಸ್ಯೆಗಳು ಪರಿಹಾರವಾಗುತ್ತವೆ ಮಿ॥ ಭಟ್" ಎಂದು ನನ್ನ ಗೆಳೆಯನೊಬ್ಬ ಬಂದವನೇ ಹೇಳಿದ. ನನ್ನ ಎದೆಗೆ ಗುಂಡು ಬಿದ್ದಂತಾಯಿತು. ಶ್ರೀ ಅರವಿಂದರನ್ನು ಅನ್ನ ಮತ್ತು ಯೋಗಗಳ ಖಾತೆಗೆ ಮಂತ್ರಿಗಳನ್ನಾಗಿ ಮಾಡುವುದು!

" ಅವರು ಈ ರಾಜಕಾರಣಕ್ಕೆಲ್ಲ ಇಳಿದಾರೇನಪ್ಪಾ?"

"ಛೆ, ಅದರ ಕಾಳಜಿ ಬಿಡು. ಅವರು ಒಪ್ಪದಿದ್ದರೆ ನಮ್ಮಂತ ನೂರು ಶಿಷ್ಯರು ಕೂಡಿ ಒಪ್ಪಿಸುತ್ತೇವೆ. ಜನತೆಯ ಸೇವೆಗಾಗಿ ಅವರು ಸದಾ ಸಿದ್ಧರಿದ್ದಾರೆ."

ನನ್ನ ಗೆಳೆಯನು ಅರವಿಂದರ ಶಿಷ್ಯನಾದ ಸುದ್ದಿ ನನ್ನ ಎದೆಯೆಲುವುಗಳನ್ನೆಲ್ಲ ನುಗ್ಗುಮಾಡಿತು. ನಾನು ಏನೋ ಕೇಳಬೇಕೆನ್ನುವಷ್ಟರಲ್ಲಿಯೇ ಆತನು "ಯೋಗಿಗಳು ಅನ್ನಪಾನಾದಿಗಳನ್ನು ತ್ಯಜಿಸಬಲ್ಲರು, ಭರತ ಭೂಮಿಯು ಯೋಗಿಗಳ ನೆಲೆವೀಡು. ಸದ್ಯಕ್ಕೆ ಅರವಿಂದರಂಥ ತಪಸ್ವಿಗಳು ಬೇರೆ ಯಾರೂ ಇಲ್ಲ. ಯೋಗಶಾಖೆಯೊಂದನ್ನು ನಿರ್ಮಿಸಿ, ಅದರ ತೇಜಸ್ಸಿನಿಂದ ಅನ್ನದ ಅಗತ್ಯವನ್ನು ಕ್ರಮೇಣ ಕಡಮೆ ಮಾಡಬಹುದು. ಭಾರತೀಯರಿಗೆ ಇದು ಅಸಾಧ್ಯದ ಮಾತಲ್ಲ. ಸರಕಾರವು ಈ ದೆಸೆಯಲ್ಲಿ ವಿಚಾರಿಸಿದಂತೆ ತೋರುವುದಿಲ್ಲ. ನಾವು ಈ ಸೂಚನೆಯನ್ನು ಸರಕಾರಕ್ಕೆ ಮಾಡಬೇಕು. ಸರ್ ರಾಧಾಕೃಷ್ಣರನ್ನು ರಾಯಭಾರಿಗಳನ್ನಾಗಿ ಮಾಡಿದ್ದರಿಂದ ಅರವಿಂದರನ್ನು ಈ ಅಧಿಕಾರಕ್ಕೆ ಸರಕಾರ ತರಬಹುದೆಂಬ ಆಸೆಯಿದೆ ಒಂದು ವೇಳೆ ಶ್ರೀ ಅರವಿಂದರು ಒಪ್ಪದಿದ್ದರೆ ಅವರ ಶಿಷ್ಯಕೋಟಿಗಳಲ್ಲಿ ಒಬ್ಬರನ್ನು ಆಯ್ದುಕೊಳ್ಳಬಹುದು.''

ನನ್ನ ಸ್ಮೃತಿ ತಪ್ಪಿತ್ತು. ಎಷ್ಟುಹೊತ್ತು ಬಿದ್ದುಕೊಂಡಿದ್ದೆನೋ ಏನೋ. ಎಚ್ಚತ್ತಾಗ ಆ ಗೆಳೆಯನಿದ್ದಿಲ್ಲ. ಈ ಸೂಚನೆಯನ್ನು ಸರಕಾರಕ್ಕೆ ಮಾಡಲೇಬೇಕೆಂದು ನಿರ್ಧರಿಸಿದೆ. (ಅದೇ ವೇಳೆಗೆ

ನನ್ನ ಅಂತರಾತ್ಮನು ಅರವಿಂದರ ಶಿಷ್ಯತ್ವವನ್ನು ವಹಿಸಿಕೊಂಡು ಬಿಟ್ಟಿದ್ದನು!)

"ಅನ್ನ ಪಾನಾದಿಗಳನ್ನು ಯೋಗದಿಂದ ನಿಯಂತ್ರಿಸಬಹುದು! ನಿಜ. ಅನ್ನ—ಪಾನ—ಯೋಗ—ನಿಯಂತ್ರಣ; ಇವೆಲ್ಲ ನನಗೆ ಪರಿಚಿತ ಶಬ್ದಗಳು ಸರಿ. ಅನ್ನವನ್ನು ಹೆಚ್ಚುಬೆಳೆಯಲಿಕ್ಕೂ ಪಾನವನ್ನು ನಿರ್ಬಂಧಿಸಲಿಕ್ಕೂ ಯೋಗವನ್ನು ಪ್ರಸಾರಿಸಲಿಕ್ಕೂ-ಇವೆಲ್ಲವನ್ನು ನಿಯಂತ್ರಣದಿಂದ ಸಾಗಿಸಲಿಕ್ಕೂ ಮಹರ್ಷಿ ಅರವಿಂದರನ್ನು ಕೇಂದ್ರ ಸರಕಾರವು ಬೇಗನೇ ತನ್ನ ಕೇಂದ್ರದಲ್ಲಿ ತರಬೇಕು" ಮರುದಿವಸವೇ ಸರಕಾರಕ್ಕೆ ಈ ಸೂಚನೆ ಮಾಡಿದೆ.

'ಒಕ್ಕಲಿಗ' 'ಸಂಜೀವಿನಿ' 'ಕಲ್ಕಿ' ಇವುಗಳನ್ನು ಕೂಡಿಸಿ ಒಂದೇ ಪತ್ರಿಕೆ ಮಾಡಿ ಪ್ರಕಟಿಸಿದರೆ ಈ ಹೊಸ ಯೋಜನೆಗೆ ಯೋಗ್ಯ ಪ್ರಚಾರ ಸಿಗಬಹುದೆಂದೂ ಆ ಪತ್ರಿಕೆಗೆ 'ಒಕ್ಕಲ್ಕಿವಿನಿ' ಎಂದು ಹೆಸರಿಡಬಹುದೆಂದೂ ಅದರಲ್ಲಿ ಸೂಚಿಸಿದ್ದೆ.

——

## ಪಾಂಚಜನ್ಯದ ಪಾಂಚಜನ್ಯ

(೧೬ನೆಯ ಪುಟದಿಂದ ಮುಂದುವರಿದುದು)

ಬಸಪ್ಪ— ಅಲ್ರಿ ಜಾಹೀರಾತ ಮ್ಯಾಟರ ಕೊಡ್ತೀನಂತ ಹೇಳಿ ಕಳಿಸಿದ್ರಿ, ಇನ್ನೂ ಕೊಡ್ಲಿಲ್ಲಾ.

ದೊಡ್ಡಣ್ಣ— ಸುಡ ಆ ಜಾಹೀರಾತ ಮ್ಯಾಟರ. ಅದೇನು ಇಂದು ಹಾಕೋ ಕಾರಣ ಇಲ್ಲಾ.

ಬಸಪ್ಪ— ಇಡೀ ೭ ಕಾಲಂ ಮ್ಯಾಟರ ಏನ ಹಾಕಬೇಕು ಹಂಗಾರ? ಇಂದು ಪೇಪರ ಹೊರಡಿಸೋ ವಿಚಾರ ಇಲ್ಲೇನು?

ದೊಡ್ಡಣ್ಣ— ತಡೆ. ಪೇಪರು ಹೊರಡಿಸೋ ವಿಚಾರ ಇದ್ದರೇನು, ಅದಕ್ಕೆ ಬೇಕಾಗೋ ಪ್ರೋತ್ಸಾಹ ಇಲ್ಲ, ದುಡ್ಡಿಲ್ಲ. ಈಗ ಒಂದು ಲೇಖ ಬರೆಯುವೆ. ಪಾಂಚಜನ್ಯ ಪತ್ರದ ಪಾಂಚಜನ್ಯ ಅಂತ. ಅದನ್ನೊಂದು ಇವತ್ತೇ ಹಾಕು. ನಾಳಿನಿಂದ ಪೇಪರ್ ಬಂದ್.

ಬಸಪ್ಪ— ಇಂದ ಹಿಂಗ್ಯಾಕ ಮಾತಾಡ್ತೀರಿ ? (ಟೆಲಿಫೋನು ಗಂಟೆ. ದೊಡ್ಡಣ್ಣ ಫೋನು ಹಿಡಿದು) ಹಲೋ ಜೆ. ಜೆ. ಹಾಸ್ಪಿಟಲ ಸರ್ಜರಿ ವಾರ್ಡಿನಿಂದ? ಅಲ್ರಿ ಗೋಳೀಬಾರ ಗೊಂದಲದಾಗ ಗಾಯಗೊಂಡ ಹೆಂಗಸಿನ ಆಪರೇಶನ್ ಆತೇನು? ಹ್ಯಾಂಗೆ ಇದ್ದಾಳೆ? ಈಗ ಸತ್ತಳು? ಅಯ್ಯೋ. (ಎಂದು ಫೋನು ಕೆಳಗಿಡುವನು. ಅಷ್ಟರಲ್ಲಿ ಫೋನಿನ ಗಂಟೆ. ಈ ಸಲ ಬಸಪ್ಪ ಅದನ್ನು ತೆಗೆದುಕೊಳ್ಳುವನು.)

ಬಸಪ್ಪ— ಏನ್ರಿ ಬಸಿರಾದ ಹೆಣ್ಣುಮಗಳು ಸತ್ತಳ? ಇಲ್ಲರಿ ಗಂಡ ಕೂಸ ಹಡದಾರ ಮತ್ತೆ ? (ಫೋನನ್ನು ಜೋರಿನಿಂದ ಇಟ್ಟು ಸಂತೋಷಾತಿರೇಕದಿಂದ) ಅಪ್ಪಾ ಅವರ, ಪೇಡೆ ಕೊಡ ಏಳಿರಿ.

ದೊಡ್ಡಣ್ಣ—(ಸಿಟ್ಟಿನಿಂದ) ಹೆಂಡತಿ ಸತ್ತಳು. ಪತ್ರಿಕೆ ಸಾಯುವುದು. ಫೇಡೆ ಕೇಳ್ತಾನೆ ಮಗ, ಹೊರಗೆ ನಡೆ ಇಲ್ಲಿಂದ.

ಬಸಪ್ಪ— ಇದೇ ಈಗ ಹೇಳಿದ್ದು ಕೇಳ್ಲಿಲ್ಲೇನ್ರಿ ಅವ್ವಾ ಅವರ ಗಂಡು ಕೂಸ ಹಡದಾರ.

ದೊಡ್ಡಣ್ಣ— ಆಂ (ಎಂದು ಫೋನು ಹಿಡಿದು) ಏನು ವಸಂತನ ಆಪರೇಶನ ಬರಾಬರಿ ಆತ? ಗಂಡ ಕೂಸ. ನಾಳೆ ನಾ ಬರ್ತೀನಿ ಅಂತಾ ಹೇಳೂ ಆಕಿಗೆ. (ಫೋನು ಇಟ್ಟು) ಬಸಪ್ಪ, ನೀ ೧೦ ವರ್ಷ ಕಂಪೋಜಿಟರ ಆಗಿ ಕೆಲ್ಸ ಮಾಡಿದವಾ. ಅದೂ ಡೇಲಿ ಪೇಪರದೊಳಗೆ. ಇವತ್ತ ನೀನೇ ಸಂಪಾದಕ ಆಗಿ ನಮಗೆ ಪುತ್ರೋತ್ಸವ ಆದ ಸುದ್ದಿ ಪ್ರಕಟ ಮಾಡಿಬಿಡು. ವಿಶೇಷ ಸಂಚಿಕೆ ಅಂತ ಬರದು, ೭೨ ಪಾಯಿಂಟಿನ ಹೆಡ್ಡಿಂಗ ಕೊಡು. ಮ್ಯಾಲೆ ವಂದೇ ಮಾತರಂ, ತೆಳಗ ಜಾಗಾ ಉಳದ್ರ ಜೈ ಹಿಂದ ಹಾಕು. ಇಂಥಾ ಸಂಚಿಕೆ ಹಿಂದೆಂದೂ ಹೊರಟಿಲ್ಲಾ, ಮುಂದೆಂದೂ ಹೊರಡುವುದಿಲ್ಲ ಅಂತಾ ಬರದುಬಿಡು.

ಬಸಪ್ಪ—(ನಗುತ್ತ) ಜೈ ಹಿಂದ, ಪಾಂಚಜನ್ಯದ ಪಾಂಚಜನ್ಯಕ್ಕೆ!

(ತೆರೆ)

ಈ ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಪ್ರೆಸ್ಸಿನಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಮೊಹರೆಯವರು ಮುದ್ರಿಸಿ ಪ್ರಕಟಿಸಿದರು.